ರಿತ್ಯಧೀತತ್ವೇನಾಸ್ಯ ವಾಕ್ಯಸ್ಯ ಬ್ರಹ್ಮಪ್ರಕರಣಸ್ಥತ್ವಾತ್ ಪ್ರಕರಣಸ್ಯ ಚ ಸಮಾಖ್ಯಾತೋ ಬಲವತ್ತ್ವಾತ್ ಸಮಾಖ್ಯಾಯಾಶ್ಚ ಪ್ರಾರಬ್ಧಕರ್ಮಮೋಕ್ಷ-ಪರತ್ವೇನ ಬ್ರಹ್ಮಪ್ರಾಪ್ತಿಮಾರ್ಗೇ ಅಂತರಾದಿತ್ಯಪ್ರಾಪ್ತಿಪರತ್ವೇನ ಚೋಪಪತ್ತ್ಯಾ ಸಾವಕಾಶತ್ವಾತ್ ''ಪರಂಜ್ಯೋತಿಃ ಪರಂಬ್ರಹ್ಮ'' ಇತಿ (ಬ್ರಹ್ಮಾಂಡ) ಸ್ಮೃತ್ಯಾ ಪರಂಜ್ಯೋತಿಃಶಬ್ದಸ್ಯ ಪರಮಾತ್ಮನ್ಯೇವ ಮುಖ್ಯತ್ವಾಚ್ಚ ಬ್ರಹ್ಮೈವ ಪರಂ-ಜ್ಯೋತಿಃ ಶಬ್ದಾರ್ಥಃ ಇತಿ । ಫಲಂ ತು ಮುಕ್ತಸ್ಯ ಬ್ರಹ್ಮಸಮೀಪ ಏವ ಭೋಗ ಇತಿ ಪ್ರಾಗುಕ್ತಸ್ಯಾಕ್ಷೇಪಃ ತತ್ಸಮಾಧಿಶ್ಚೇತಿ ॥ ೩ ॥

॥ ಅಥ ಅವಿಭಾಗಾಧಿಕರಣಮ್ ॥ ೪ ॥

## ॥ ಓಂ ಅವಿಭಾಗೇನ ದೃಷ್ಟತ್ವಾತ್ ಓಂ ॥ ೪-೪-೪

ಏವಂ ತ್ರಿಭಿರ್ನಯೈರ್ಮುಕ್ತಃ ಬ್ರಹ್ಮ ಪ್ರಾಪ್ಯ ಭೋಗಾನ್ ಭುಂಕ್ತ ಇತಿ ಸಿದ್ಧೇ ಸತಿ ಸ ಭೋಗಃ ಕಿಂ ರೂಪ ಇತಿ ವಿಶೇಷಚಿಂತನಾತ್ ಸಂಗತಿಃ । ಮುಕ್ತೇಷು ಸಾಯುಜ್ಯಭಾಜಾಂ ಮುಖ್ಯತ್ವಾತ್ ತದ್ಭೋಗಃ ಅತ್ರ ಚಿಂತ್ಯತೇ । ಸಾಯು-ಜ್ಯಭಾಜೋ ಭೋಗಃ ಕಿಂ ಬಾಹ್ಯಭಗವದಭುಕ್ತಸ್ಯ ಉತ ಭಗವದ್ಭುಕ್ತಶೇಷಸ್ಯ ಇತಿ ಚಿಂತಾ । ತದರ್ಥಂ ಭುಕ್ತಶೇಷಭೋಗೇ ಮುಕ್ತೇಃ ಪರಮಪುಮರ್ಥತ್ವಂ ಹೀಯತ ಉತ ನೇತಿ ॥

ಪೂರ್ವಪಕ್ಷಸ್ತು - ಮುಕ್ತೇಃ ಪರಮಪುಮರ್ಥತ್ವೇನ ಭಗವದಭುಕ್ತಸ್ಯಾಪಿ ಭೋಗಸ್ಯ ಸೌಲಭ್ಯಾತ್ ಭಗವದಭುಕ್ತಾನೇವ ಭುಂಕ್ತೇ । ಮುಕ್ತಸ್ಯ ಭಗವದ್ಭುಕ್ತಶೇಷನಿಯಮೇ ಚ ಕೇಷಾಂಚಿತ್ಸಂಜಾತಭೋಗೇಚ್ಛಾನಾಂ ಭೋಗಾ-ಭಾವಪ್ರಸಂಗೇನ ಮುಕ್ತೇಃ ಪುಮರ್ಥತ್ವಹಾನೇಃ । ಈಶ್ವರಸ್ಯ ನಿತ್ಯ-ಪೂರ್ಣಾನಂದತ್ವೇನ ಕದಾಚಿದಭೋಗಸ್ಯಾಪಿ ಸಂಭವಾದಿತಿ ॥

ಸಿದ್ಧಾಂತಸ್ತು - ಮುಕ್ತೇಃ ಪುಮರ್ಥತ್ವೇನ ಭಗವದಭುಕ್ತಭೋಗಾನಾಂ ಸುಲಭತ್ವೇಽಪಿ ''ಯಾನೇವಾಹಂ ಶೃಣೋಮಿ'' ಇತಿ (ಚತುರ್ವೇದಶಿಖಾ) ಶ್ರುತೌ ಭಗವತಾ ಭುಜ್ಯಮಾನಭೋಗಭೋಕ್ತೃತ್ವಶ್ರವಣಾನ್ಮುಕ್ತಾನಾಂ ಭಗವ-ದ್ಭುಜ್ಯಮಾನಭೋಗಭೋಕ್ತೃತ್ವಮೇವೋಪೇಯಮ್ । ನ ಚೈವಂ

ಭಗವದುಕ್ತಾಶೇಷಭೋಕ್ತೃತ್ವಸ್ಯ ಯಾನೇವೇತಿ ಶ್ರುತೌ ಪ್ರತೀತೇಃ ಭಗವತ್ಸಾಮ್ಯಾಪತ್ತಿಃ ಶಂಕ್ಯಾ । ''ಮುಕ್ತಾಃ ಪ್ರಾಪ್ಯ ಪರಂ ವಿಷ್ಣುಂ'' ಇತಿ (ಭವಿಷ್ಯತ್ಪುರಾಣ) ವಿಶೇಷಸ್ಮೃತ್ಯಾ ''ತಾನೇವ'' ಇತಿ ಸಾಮಾನ್ಯಶ್ರುತೇಃ ಸಂಕೋಚ್ಯತ್ವಾತ್ । ನ ಚ ಉಕ್ತರೀತ್ಯಾ ಕದಾಚಿದ್ಭೋಗಾಭಾವಪ್ರಸಕ್ತ್ಯಾ ಮುಕ್ತೇಃ ಅಪುಮರ್ಥತ್ವಂ ಶಂಕ್ಯಮ್। ''ಪೂರ್ಣಾನಂದಃ ಪೂರ್ಣಭುಕ್ ಪೂರ್ಣಕರ್ತಾ'' ಇತಿ ಶ್ರುತೌ ಪೂರ್ಣಾನಂದತ್ವೇಽಪಿ ಪೂರ್ಣಭೋಗಶ್ರವಣೇನ ತಸ್ಯಾಭೋಗಾಪ್ರಸಕ್ತೇರಿತಿ । ಫಲಂ ತು ''ಅತ್ತೇ''ತ್ಯಾದೌ (ಬ್ರ.ಸೂ.೧.೨.೯) ಉಕ್ತಸ್ಯ ಹರೇಃ ಸರ್ವಭೋಕ್ತೃತ್ವಸ್ಯಾಕ್ಷೇಪಃ ತತ್ಸಮಾಧಿಶ್ಚ ॥ ೪ ॥

॥ ಅಥ ಬ್ರಾಹ್ಮ್ಯಾಧಿಕರಣಮ್ ॥ ೫ ॥

## ॥ ಓಂ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ಓಂ ॥

೪-೪-೫

ಪೂರ್ವಾಕ್ಷೇಪೇಣ ಶಂಕನಾತ್ ಸಂಗತಿಃ । ಪ್ರಕೃತೋ ಭೋಗಃ ಕಿಂ ಮುಕ್ತಾನಾಂ ನ ಯುಕ್ತಃ ಉತ ಯುಕ್ತ ಇತಿ ಚಿಂತಾ । ತದರ್ಥಂ ತೇಷಾಂ ಭೋಗಹೇತುಶರೀರಂ ನಾಸ್ತ್ಯುತಾಸ್ತೀತಿ । ತಥಾ ಭೌತಿಕ ದೇಹಾಭಾವೇಽಪಿ ದೇಹಾಂತರೇಣ ಸಃ ನ ಯುಕ್ತ ಉತ ಯುಕ್ತ ಇತಿ ।

ಪೂರ್ವತ್ರೋಕ್ತೋ ಮುಕ್ತಾನಾಂ ಬ್ರಹ್ಮಾನತಿಕ್ರಮೇಣ ಭೋಗೋ ವಾ ಭಗವದುಕ್ತಭೋಗೋ ವಾ ನ ಯುಕ್ತಃ । ತೇಷಾಂ ಸಂಸಾರಪಾರಂಗತತ್ವೇನ ಭೋಗಹೇತುದೇಹಾಭಾವಾತ್ । ತತ್ಸತ್ತ್ವೇ ಮುಕ್ತತ್ವವ್ಯಾಘಾತಾತ್ । ಬ್ರಾಹ್ಮದೇಹಾದಿನಾ ಭೋಗಸ್ತು ನ ಯುಕ್ತಃ । ಪ್ರಲಯಾದೌ ತದ್ಭಾವೇಽಪಿ ಭೋಗಾಭಾವಾದಿತಿ ಪ್ರಾಪ್ತೇ ಸಿದ್ಧಾಂತಃ । ಭೌತಿಕಾದಿಸರ್ವದೇಹಾಭಾವೇಽಪಿ ''ಸ ವ ಏಷ ಬ್ರಹ್ಮನಿಷ್ಠಃ'' ಇತಿ (ಮಾಧ್ಯಂದಿನಾಯನಶ್ರುತಿಃ) ''ಆದತ್ತೇ ಹರಿಹಸ್ತೇನ'' ಇತಿ ಭಾಷ್ಯೋಕ್ತಶ್ರುತಿಸ್ಮೃತಿಭ್ಯಾಂ ಪರಮಾತ್ಮಾನಂ ಪ್ರವಿಷ್ಟಸ್ಯ ತದ್ದೇಹೇನೈವ ದೇಹಿವದ್ಭೋಗಾವಗಮಾತ್ । ''ಗಚ್ಛಾಮಿ ವಿಷ್ಣುಪಾದಾಭ್ಯಾಂ'' ಇತಿ (ಬೃಹತ್ತಂತ್ರ) ಸ್ಮೃತ್ಯುಕ್ತ್ಯಾ ವಿಷ್ಣ್ವವಯವೈರೇವ ಗಮನಾದಿಕಂ ಕರೋ-

ಮೀತಿ ಪೂರ್ವಸ್ಮರಣಬಲೇನ ಮುಕ್ತೌ ತದ್ದೇಹಪ್ರಾಪ್ತಿಮತ್ತ್ವಯುಕ್ತ್ಯಾ ಚ (ತಥೈವಪ್ರಾಪ್ತಿಮತ್ತ್ವಯುಕ್ತ್ಯಾ ಚ) ಬ್ರಾಹ್ಮದೇಹೇನ ವಾ ''ಸ ವಾ ಏಷ ಏತಸ್ಮಾನ್ಮರ್ತ್ಯಾದ್ವಿಮುಕ್ತಶ್ಚಿನ್ಮಾತ್ರೀಭವತಿ'' ಇತ್ಯಾದಿ (ಸೌಪರ್ಣ ಶ್ರುತ್ಯಾ ''ಮರ್ತ್ಯ ದೇಹಂ ಪರಿತ್ಯಜ್ಯ'' ಇತ್ಯಾದಿ (ನಾರಾಯಣಾಧ್ಯಾತ್ಮ) ಸ್ಮೃತ್ಯಾ ಚ ಭಗವದನುಗೃಹೀತೈಃ ಸ್ವರೂಪಭೂತಚಿನ್ಮಾತ್ರದೇಹಾವಯವೈರ್ವಾ ಮುಕ್ತಾಃ ಭೋಗಾನ್ ಭುಂಜತೇ ಕರ್ಮಾಣಿ ಚ ಕುರ್ವಂತೀತಿ । ಫಲಂ ತು ಮುಕ್ತೇಃ ಪುಮರ್ಥತ್ವಾಕ್ಷೇಪ ಸಮಾಧೀ ॥ ೫ ॥

॥ ಅಥ ಸಂಕಲ್ಪಾಧಿಕರಣಮ್ ॥ ೬ ॥

## ॥ ಓಂ ಸಂಕಲ್ಪಾದೇವ ಚ ತಚ್ಛ್ರುತೇಃ ಓಂ ॥ ೪-೪-೬

ಪೂರ್ವತ್ರ ಭೋಗೇಽಲೌಕಿಕೋಪಕರಣಾನಪೇಕ್ಷೋಕ್ತಾ । ಅತ್ರ ತು ಲೌಕಿಕಸಾಧನಾಪೇಕ್ಷಾಪಿ ನೇತ್ಯುಚ್ಯತ ಇತಿ ಸಂಗತಿಃ । ಪ್ರಕೃತಮುಕ್ತಭೋಗಃ ಕಿಂ ತತ್ತದುಪಾಯಸಾಧ್ಯಸಾಧನಸಾಧ್ಯಃ ಉತ ಸಂಕಲ್ಪಮಾತ್ರಸಾಧ್ಯ ಇತಿ ಚಿಂತಾ । ತದರ್ಥಂ ಭಗವದೋಕಃಸ್ಥತ್ವಯುಕ್ತಿಃ ಲೋಕಾನುಸಾರಸಹಾಯಾ ಸತೀ ಸಾಧನಸಾಧ್ಯತ್ವಸಾಧಿಕಾ ಭವತ್ಯುತ ನೇತಿ ಚಿಂತಾ । ಭಗವದೋಕಃಸ್ಥೋ ಮುಕ್ತಭೋಗಸ್ತತ್ತದುಪಾಯಸಾಧ್ಯಸಾಧನಸಾಧ್ಯಃ ಓಕಸ್ಥತ್ವಾತ್ ಭೂಮ್ಯಾದ್ಯೋಕಃಸ್ಥಭೋಗವದಿತಿ ಯುಕ್ತ್ಯಾ ಲೋಕೇ ಭೋಗಸ್ಯ ತತ್ತದುಪಾಯಸಾಧ್ಯಸಾಧನಸಾಧ್ಯತ್ವದೃಷ್ಟ್ಯಾ ಲೋಕಾನುಸಾರಾಚ್ಚ ಮುಕ್ತಭೋಗೋಽಪಿ ತಾದೃಶ ಏವೇತಿ ಪ್ರಾಪ್ತೇ ಸಿದ್ಧಾಂತಃ ॥

''ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ'' ಇತಿ (ಛಾಂ. ೮.೨.೧) ಶ್ರುತೇಃ ಸಂಕಲ್ಪಮಾತ್ರಸಾಧ್ಯೋ ಮುಕ್ತಭೋಗೋ ನ ತತ್ತದುಪಾಯಸಾಧ್ಯಸಾಧನಸಾಧ್ಯಃ । ಪ್ರಾಗುಕ್ತಯುಕ್ತಿಸ್ತು ಶ್ರುತಿಬಾಧಿತಾ ಸತೀ ನ ಸಾಧಿಕಾ । ಲೋಕವಿರೋಧಸ್ತು ನಿರ್ದೋಷಭಗದೋಕಸಿ ಗುಣ ಏವೇತಿ ॥ ಫಲಂ ತು ಸಂಸಾರಸಮಾನಧರ್ಮತಾಪತ್ತ್ಯಾ ಮುಕ್ತೇಃ ಪುಮರ್ಥತ್ವಾಕ್ಷೇಪಃ ತತ್ಸಮಾಧಿಶ್ಚೇತಿ ॥ ೬ ॥

॥ ಅಥ ಅನನ್ಯಾಧಿಪತಿತ್ವಾಧಿಕರಣಮ್ ॥ ೭ ॥

## ॥ಓಂ ಅತ ಏವ ಚಾನನ್ಯಾಧಿಪತಿಃ ಓಂ ॥ ೪-೪-೭

ಅತ್ರ ಪ್ರಾಗುಕ್ತಹೇತ್ವತಿದೇಶಾದನಂತರಸಂಗತಿಃ । ಪ್ರಕೃತೋ ಮುಕ್ತಃ ಕಿಂ ಕ್ಲೃಪ್ತಪತಿಭ್ಯೋಽನ್ಯಪತಿ ನಿಯತಃ ಅಥ ಕ್ಲೃಪ್ತಪತಿನಿಯತ ಏವೇತಿ ಚಿಂತಾ । ತದರ್ಥಂ ಮುಕ್ತಾವನಪೇಕ್ಷಿತಮಪಿ ಭವತ್ಯುತ ನೇತಿ । ಲೋಕೇ ರಾಜಗೃಹ-ಪ್ರವಿಷ್ಟಸ್ಯ ಅನಪೇಕ್ಷಿತಸ್ವಾವರಪ್ರತಿಹಾರಾದಿನಿಯತತ್ವಮಿವ ಮುಕ್ತಸ್ಯಾಪಿ ಪರಗೃಹಗತತ್ವಾತ್ ಸ್ವಾವರನಿಯತತ್ವಂ ಸ್ಯಾದನ್ಯಥಾ ಲೋಕವಿರೋಧಾ-ಪಾತಾದಿತಿ ಪ್ರಾಪ್ತೇ -

ಸಿದ್ಧಾಂತಃ - ಲೋಕೇ ಸತ್ಯಸಂಕಲ್ಪತ್ವಾಭಾವೇನ ಅನಪೇಕ್ಷಿತಸ್ವಾವರ-ನಿಯತತ್ವಸಂಭವೇಽಪಿ ಮುಕ್ತಸ್ಯ ಸತ್ಯಸಂಕಲ್ಪತ್ವಾದೇವ ನಾನಪೇಕ್ಷಿತ-ಪ್ರಾಪ್ತಿರ್ಯುಕ್ತೇತಿ ಕ್ಲೃಪ್ತಪತಿನಿಯತಾ ಏವ ಮುಕ್ತಾಃ । ನ ಹಿ ಮುಕ್ತಾನಾಮ-ವರನಿಯತತ್ವಮಪೇಕ್ಷಿತಮ್ । ತಥಾ ಚ (ವಾರಾಹ) ಸ್ಮೃತಿಃ ''ಪರಮೋಽ-ಧಿಪತಿಸ್ತೇಷಾಂ'' ಇತ್ಯಾದಿಕೇತಿ । ಫಲಂ ತು ಮುಕ್ತಸ್ಯ ಸಂಸಾರಸಮಾನ-ಧರ್ಮವತ್ತ್ವತದಭಾವೌ ॥ ೭ ॥

॥ ಅಥ ಅಭಾವಾಧಿಕರಣಮ್ ॥ ೮ ॥

## ॥ ಓಂ ಅಭಾವಂ ಬಾದರಿರಾಹ ಹ್ಯೇವಮ್ ಓಂ ॥ ೪-೪-೮

ಸಂಕಲ್ಪಾದೇವೇತ್ಯತ್ರೋಕ್ತಸಂಕಲ್ಪಮಾತ್ರಾಧೀನಭೋಗಾಕ್ಷೇಪೇಣಾತ್ರ ಶಂಕನಾತ್ ಸಂಗತಿಃ । ''ಅತ ಏವ'' ಇತ್ಯಸ್ಯ (ಬ್ರ.ಸೂ.೪.೪.೯) ಪ್ರಾಗುಕ್ತ-ಹೇತ್ವತಿದೇಶಕತಯಾ ಪ್ರಾಸಂಗಿಕತ್ವೇನಾವ್ಯವಧಾಯಕತ್ವಾತ್ ಪ್ರಕೃತೋ ಮುಕ್ತಾನಾಂ ಭೋಗಃ ನ ಯುಜ್ಯತೇ ಉತ ಯುಜ್ಯತೇ ಇತಿ ಚಿಂತಾ । ತದರ್ಥಂ ದೇಹಭಾವಾಭಾವಯೋಃ ಭೋಗ ಉಪಪಾದಯಿತುಮಶಕ್ಯ ಉತ ಶಕ್ಯ ಇತಿ । ತಥಾ ಮುಕ್ತಾನಾಂ ದೇಹಭಾವಾಭಾವೌ ವಿರೋಧಾದಯುಕ್ತಾವುತ ಯುಕ್ತಾವಿತಿ ॥

ಪೂರ್ವಪಕ್ಷಸ್ತು - ಮುಕ್ತಾನಾಂ ದೇಹಸ್ಯ ಭಾವೇ ದುಃಖಾದಿಪ್ರಸಂಗೇನ ನಿರ್ದುಃಖಭೋಗೋಽನುಪಪನ್ನಃ । ಅಭಾವೇ ಚ ಭೋಗಾಸಂಭವಃ । ನ ಚ ಬ್ರಾಹ್ಮೇಣೇತ್ಯತ್ರೋಕ್ತದಿಶಾ ಬ್ರಾಹ್ಮದೇಹೇನ ಭೋಗೋ ಯುಕ್ತ ಇತಿ ವಾಚ್ಯಮ್ । ಸಾಯುಜ್ಯಭಾಜಾಂ ತತ್ಸಂಭವೇಽಪಿ ಅನ್ಯೇಷಾಂ ತದಭಾವಾತ್ । ನ ಚ ಚಿಚ್ಛರೀರೇಣ ತೇಷಾಂ ಭೋಗೋಪಪತ್ತಿಃ। ಸುಪ್ತ್ಯಾದೌ ಸತೋಽಪಿ ತಸ್ಯ ಭೋಗಾಯತನತ್ವಾ ದರ್ಶನಾತ್ । ಅತೋ ದೇಹಭಾವೇ ಅಭಾವೇ ಚ ಭೋಗಸ್ಯ ದುರುಪಪಾದತ್ವಾನ್ನ ಯುಜ್ಯತೇ ಭೋಗಃ । ವಿರೋಧಾದಯುಕ್ತೌ ಚ ದೇಹಭಾವಾಭಾವಪಕ್ಷಾವಿತಿ ॥

ಸಿದ್ಧಾಂತಸ್ತು - ಯುಜ್ಯತೇ ಮುಕ್ತಾನಾಂ ಭೋಗಃ । ಪಕ್ಷದ್ವಯೇಽಪಿ ಭೋಗಸ್ಯ ಸೂಪಪಾದತ್ವಾತ್। ಬಾಹ್ಯದೇಹಭಾವೇ ತಸ್ಯ ಜಡತ್ವೇಽಪಿ ಶುದ್ಧ-ಸತ್ತ್ವಾತ್ಮಕತೇಜೋರೂಪತಯಾ ದುಃಖಾದ್ಯನಾಪಾದಕತ್ವೇನ ತತ್ರ ಸುಖಾನು-ಭವಮಾತ್ರಸ್ಯೋಪಪತ್ತೇಃ । ಪ್ರದೀಪೋ ಯಥಾ ತೈಲಾದ್ಯೇವ ಭುಂಕ್ತೇ ನ ತು ತದ್ಗತ ಕಾಷ್ಠಾರ್ಣ್ಯಾದಿ ತದ್ವತ್ । ''ತೀರ್ಣೋ ಹಿ ತದಾ ಸರ್ವಾನ್ ಶೋಕಾನ್'' ಇತಿ (ಬೃ.೬.೩.೨೨) ಶ್ರುತೇಃ । ದೇಹಾಭಾವಪಕ್ಷೇಽಪಿ ಯಥಾ ಸ್ವಪ್ನಾವ-ಸ್ಥಾಯಾಂ ಬಾಹ್ಯದೇಹಾಭಿಮಾನಾಭಾವೇಽಪಿ ಭೋಗಃ ತಥಾ ಮುಕ್ತೌ ಬಾಹ್ಯದೇಹಾಭಾವೇಽಪಿ ಚಿಚ್ಛರೀರೇಣ ಭೋಗೋಪಪತ್ತೇಃ ಅನಭಿಮಾನ-ಸ್ವಾಭಾವಸಾಮ್ಯಾತ್ । ಸುಪ್ತೌ ತು ಮನಸ ಉಪರತತ್ವಾದಭೋಗಃ ದೇಹ-ಭಾವಾಭಾವಪಕ್ಷೌ ಚ ''ಚಿತಾ ವಾಚಿತಾ ವಾ''ಇತಿ (ಉದ್ದಾಲಕಶ್ರುತಿಃ) ''ಅಶರೀರೋ ವಾವ ತದಾ ಭವತಿ'' ಇತಿ ಚ (ಕೌಂಠರವ್ಯ) ಶ್ರುತಿಸಿದ್ಧತ್ವಾತ್ । ದ್ವಾದಶಾಹಸ್ಯ ಯಜಮಾನೇಚ್ಛಯಾ ಏಕಾನೇಕಕರ್ತೃಕತ್ವಾಭ್ಯಾಂ ಅಹೀನತ್ವ-ಸತ್ರತ್ವವತ್ ಮುಕ್ತಾನಾಂ ಸ್ವೇಚ್ಛಯಾ ತೇಜೋರೂಪಬಾಹ್ಯದೇಹಭಾವಾ-ಭಾವಯೋರವಿರೋಧಾಚ್ಚ ಯುಕ್ತಾವಿತಿ । ತಥಾ ಚ ಸ್ಮೃತಿಃ ''ಸ್ವೇಚ್ಛಯಾ ವಾ ಶರೀರಾಣಿ ತೇಜೋರೂಪಾಣಿ ಕಾನಿಚಿತ್। ಸ್ವೀಕೃತ್ಯ ಜಾಗರಿತವದ್ಭುಕ್ತ್ವಾ ತ್ಯಾಗಃ ಕದಾಚನ'' ಇತಿ ॥ ಫಲಂ ತು ನಿರ್ದುಃಖಭೋಗವತ್ ಮುಕ್ತೇಃ ಪುಮರ್ಥತ್ವಾಕ್ಷೇಪಃ ತತ್ಸಮಾಧಿಶ್ಚೇತಿ ॥ ೮ ॥

॥ ಅಥ ಜಗದ್ವ್ಯಾಪಾರಾಧಿಕರಣಮ್ ॥ ೯ ॥

## ॥ ಓಂ ಜಗದ್ವ್ಯಾಪಾರವರ್ಜಮ್ ಓಂ ॥ ೪-೪-೯

ಏವಮನುಪಪತ್ತಿನಿರಾಸೇನ ಮುಕ್ತಾನಾಂ ಭೋಗೇ ಸಿದ್ಧೇಽತ್ರ ತಸ್ಯ ಮರ್ಯಾದೋಚ್ಯತೇ ಇತಿ ಸಂಗತಿಃ । ಮುಕ್ತಾಃ ಕಿಂ ಜಗದ್ವ್ಯಾಪಾರಾನ್ ಕುರ್ವಂತಿ ನ ವೇತಿ ಚಿಂತಾ । ತದರ್ಥಂ ''ಸರ್ವಾನ್ ಕಾಮಾನಾಪ್ತ್ವಾ'' ಇತಿ ಶ್ರುತೌ (ಐ.೨.೫.೧) ಸರ್ವಶಬ್ದೋಽಸಂಕುಚಿತವೃತ್ತಿರುತ ಸಂಕುಚಿತವೃತ್ತಿರಿತಿ । ತದರ್ಥಂ ತತ್ಸಂಕೋಚಕಂ ನಾಸ್ತ್ಯುತಾಸ್ತೀತಿ । ತದರ್ಥಂ ''ಸರ್ವೇಽಸ್ಮೈ ದೇವಾ ಬಲಿಮಾವಹಂತಿ'' ಇತಿ (ತೈ.೧.೫) ಸರ್ವದೇವಪೂಜ್ಯತ್ವಶ್ರುತಿಃ ಸರ್ವಜೀವವಿಷಯಾ ವಿರಿಂಚವಿಷಯಾ ವೇತಿ । ಸರ್ವೇಽಸ್ಮೈ ದೇವಾ ಇತಿ ಶ್ರುತೇರ್ಜೀವಮಾತ್ರವಿಷಯತ್ವಾತ್ ಸರ್ವಾನ್ ಕಾಮಾನಿತಿಶ್ರುತೇಃ ''ಶರೀರ-ಭೇದಾದ್ ಊರ್ಧ್ವ ಉತ್ಕ್ರಮ್ಯ'' (ಐ.೨.೫.೧) ಇತ್ಯಾದಿಜೀವಪ್ರಕರಣಗತ-ತ್ವೇಽಪಿಜೀವಾನಾಂತಾದೃಶಶಕ್ತಿಕಲ್ಪನೇನವಾಶಕ್ಯಭಾವೇಽಪಿಸತ್ಯಕಾಮತ್ವಾದೇವ ಸರ್ವೈಶ್ವರ್ಯಸಂಭವೇನ ಸರ್ವಶಬ್ದಸಂಕೋಚಕಾಭಾವಾತ್ ಕುರ್ವಂತ್ಯೇವ ಮುಕ್ತಾಃ ಜಗತ್ಸೃಷ್ಟ್ಯಾದಿವ್ಯಾಪಾರಮಿತಿ ಪ್ರಾಪ್ತೇ -

ಸಿದ್ಧಾಂತಃ - ''ಮಾಹಾಚಮಸ್ಯ'' ಇತ್ಯುಪಕ್ರಮೇಣ ''ಸರ್ವೇಽಸ್ಮಾ'' ಇತಿ ಶ್ರುತೇಃ ಮುಕ್ತವಿರಿಂಚ ವಿಷಯತಯಾ ಸರ್ವಮುಕ್ತವಿಷಯತ್ವಾಭಾವೇನ ಜೀವಾನಾಂ ಸೃಷ್ಟ್ಯಾದೌ ಶಕ್ತಿಕಲ್ಪಕಾಭಾವೇನ ತತ್ರ ಸಾಮರ್ಥ್ಯಾಭಾವಾತ್ ಸತ್ಯಕಾಮತ್ವಸ್ಯ ''ಸ್ವಾಧಿಕಾನಂದಸಂಪ್ರಾಪ್ತೌ ಸೃಷ್ಟ್ಯಾದಿವ್ಯಾಪೃತಿಷ್ವಪಿ । ಮುಕ್ತಾನಾಂ ನೈವ ಕಾಮಃ ಸ್ಯಾತ್'' ಇತಿ (ವಾರಾಹ) ಸ್ಮೃತ್ಯಾ ಸೃಷ್ಟ್ಯಾದ್ಯ-ನ್ಯಕಾಮನಾವತ್ತ್ವೇನೋಪಪತ್ತೇಃ ಜಗದ್ ವ್ಯಾಪಾರವರ್ಜಮನ್ಯಾನ್ ಕಾಮಾನ್ ಭುಂಕ್ತೇ ಮುಕ್ತಃ (ಭುಂಜತೇ ಮುಕ್ತಾಃ) ಇತಿ । ಅತ್ರ ಮುಕ್ತವಿರಿಂ-ಚಸ್ಯಾಶೇಷಮುಕ್ತನಿಯಮನವ್ಯಾಪಾರೋಽನ್ಯದೇವಾನಾಂ ಸ್ವಾವರಮುಕ್ತ-ನಿಯಮನವ್ಯಾಪಾರಶ್ಚ ಸಿದ್ಧ ಇತಿ ಧ್ಯೇಯಮ್ ॥ ಫಲಂ ತು ಲಕ್ಷಣ-ಸೂತ್ರಾಕ್ಷೇಪಸಮಾಧೀ ॥ ೯ ॥

॥ ಅಥ ಸ್ಥಿತ್ಯಧಿಕರಣಮ್ ॥ ೧೦ ॥

## ॥ ಓಂ ಸ್ಥಿತಿಮಾಹ ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ಓಂ ॥ ೪-೪-೧೦

ಪೂರ್ವತ್ರ ಕಾಮಪದೋಕ್ತವಿಷಯಭೋಗೇಯತ್ತೋಕ್ತಾ ಅತ್ರ ತು ತದಭಿವ್ಯಂಗ್ಯಸ್ವರೂಪಸುಖಸ್ಯ ಯಥಾಸ್ಥಿತಿರೂಪೇಯತ್ತೋಚ್ಯತ ಇತಿ ಸಂಗತಿಃ । ಮುಕ್ತಃ ಕಿಮಾನಂದವೃದ್ಧಿಹ್ರಾಸವಾನ್ ಉತ ಯಥಾಸ್ಥಿತಿಮಾನಿತಿ ಚಿಂತಾ । ತದರ್ಥಂ ತೇಷಾಮುಪಾಸನಾದಿಕಂ ಕಿಂ ವೃದ್ಧ್ಯಾದಿಹೇತುರ್ಭವತ್ಯುತ ನೇತಿ ॥

ಪೂರ್ವಪಕ್ಷಸ್ತು - ''ಏತತ್ಸಾಮ ಗಾಯನ್ನಾಸ್ತೇ'' (ತೈ.೩.೧೦) ಇತ್ಯಾದೌ ಮುಕ್ತಾನಾಮುಪಾಸನಾಶ್ರವಣಾತ್ ತಸ್ಯಾಶ್ಚ ವೈಯರ್ಥ್ಯಾನ್ಯಥಾನುಪಪತ್ತ್ಯಾ ಫಲವತ್ತ್ವಾವಶ್ಯಂಭಾವಾತ್ ಮುಕ್ತಾನಾಂ ವಶಿತ್ವರೂಪೈಶ್ವರ್ಯಬಲೇನ ಕಾಮಿತಾಶೇಷಪೂರ್ತ್ಯಾ ಭೋಗವಿಶೇಷಸತ್ತ್ವಾಚ್ಚ ವೃದ್ಧಿಮಾನ್ ಆನಂದಸ್ತದುಪರಮೇ ಚ ಹ್ರಾಸವಾನಿತಿ ॥

ಸಿದ್ಧಾಂತಸ್ತು - ಏಕಪ್ರಕಾರೇಣೈವ ಸ್ಥಿತಿಮಾನ್ ಮುಕ್ತಾನಂದಃ । ''ಸ ಏಷ'' ಇತಿ ಭಾಷ್ಯೋಕ್ತ (ಜಾಬಾಲ) ಶ್ರುತೌ ವೃದ್ಧ್ಯಾದ್ಯಭಾವಮುಕ್ತ್ವಾ ಉಪಾಸನ ಸದ್ಭಾವಮಾಶಂಕ್ಯ ''ದರ್ಶನ್ನೇವಾತ್ಮಾನಮ್'' ಇತ್ಯುಪಾಸನಾವತೋಽಪಿ ಆಪತ್ತಿವಿಪತ್ತಿಶಬ್ದಿತವೃದ್ಧಿಹ್ರಾಸನಿಷೇಧಾತ್ ಮಹತಾಂ ಪ್ರತ್ಯಕ್ಷೇಣ ಮುಕ್ತೋ ನ ವೃದ್ಧ್ಯಾದಿಮಾನ್ ಕಾರಣಶೂನ್ಯತ್ವಾದಿತ್ಯನುಮಾನೇನ ಚ ವೃದ್ಧ್ಯಾದ್ಯಭಾವಸ್ಯ ಸಿದ್ಧತ್ವಾತ್ । ಉಪಾಸನಾಯಾಶ್ಚ ''ಹರೇರುಪಾಸನಾ ಚಾತ್ರ ಸದೈವ ಸುಖರೂಪಿಣೀ'' ಇತಿ(ಬ್ರಹ್ಮವೈವರ್ತ) ಸ್ಮೃತ್ಯಾ ಸ್ವಯಂ ಫಲರೂಪತ್ವೇನ ಫಲಾಂತರಸಾಧನತ್ವಾಭಾವಾತ್ ವಶಿತ್ವೇನ ಕಾಮಿತಾಶೇಷಭೋಗಪ್ರಾಪ್ತಾವಪಿ ಅಯೋಗ್ಯೇ ಕಾಮನಾವಿರಹಾತ್ ಯೋಗ್ಯಸ್ಯ ಚ ಪ್ರಾಪ್ತತ್ವಾತ್ ಭೋಗವಿಶೇಷೇಽಪಿ ತದುಪರಮಾದಪಿ ನ ಸುಖವೃದ್ಧಿಹ್ರಾಸಹೇತುಃ ತಥಾಪಿ ಸ ಭೋಗವಿಶೇಷಃ ಕ್ರೀಡಯಾ ವಾ ''ಅವೃದ್ಧಿಹ್ರಾಸರೂಪತ್ವಂ ಮುಕ್ತಾನಾಂ ಪ್ರಾಯಿಕಂ ಭವೇತ್ । ಕಾದಾಚಿತ್ಕವಿಶೇಷಸ್ತು ನೈವ ತೇಷಾಂ ನಿಷಿಧ್ಯತೇ''

ಇತಿ (ಕೌರ್ಮೇ) ಉಕ್ತದಿಶಾ ಸ್ವರೂಪಸುಖಸ್ಯ ವೈಚಿತ್ರ್ಯ ಹೇತುತಯಾ ವೋಪಪನ್ನ ಇತಿ ॥ ಫಲಂ ತು ಸಂಸಾರಸಮಾನಧರ್ಮತಾಪತ್ತ್ಯಾ ಮುಕ್ತೇ-ರಪುಮರ್ಥತ್ವಾಕ್ಷೇಪಸಮಾಧಿಃ ॥ ೧೦ ॥

॥ ಅಥ ಅನಾವೃತ್ತ್ಯಧಿಕರಣಮ್ ॥

## ॥ ಓಂ ಅನಾವೃತ್ತಿಶ್ಶಬ್ದಾದನಾವೃತ್ತಿಶ್ಶಬ್ದಾತ್ ಓಂ ॥
## ೪-೪-೧೧

ಪೂರ್ವತ್ರ ಮುಕ್ತಾನಂದಸ್ಯ ವೃದ್ಧಿಹ್ರಾಸಾದಿಃ ನೇತ್ಯುಕ್ತಮ್ । ಅತ್ರ ತು ತದನುಭವಸ್ಯಾಂತೋ ನಾಸ್ತೀತ್ಯುಚ್ಯತ ಇತಿ ಸಂಗತಿಃ । ಪ್ರಕೃತೋ ಮುಕ್ತಃ ಕಿಂ ಜನ್ಮಮೃತ್ಯಾದಿಪ್ರಾಪ್ತಿರೂಪಪುನರಾವೃತ್ತಿಮಾನುತ ನೇತಿ ಚಿಂತಾ । ತದರ್ಥಂ ಮುಕ್ತಸ್ಯ ಸಮಸ್ತಕಾಲವಾಸಿತ್ವಂ ಪುನರಾವೃತ್ತಾವಬಾಧಕಮ್ ಉತ ಬಾಧಕ-ಮಿತಿ । ತದರ್ಥಂ ಸಮಸ್ತಸ್ಯಾಪಿ ಕಾಲಸ್ಯ ಸಮಾಪ್ತಿರಸ್ತ್ಯುತ ನೇತಿ ।

ಪೂರ್ವಪಕ್ಷಸ್ತು - ಸ್ವರ್ಗಾದಿಸ್ಥಸ್ಯೇವ ಮುಕ್ತಸ್ಯಾಪ್ಯಸ್ತಿ ಪುನರಾವೃತ್ತಿಃ । ಮುಕ್ತಸ್ಯ ಸಮಸ್ತಕಾಲವಾಸಿತ್ವೇಽಪಿ ಸಮಸ್ತಸ್ಯಾಪಿ ಕಾಲಸ್ಯ ಕದಾಚಿತ್ಸ-ಮಾಪ್ತಿಸಂಭವಾತ್ । ನ ಚ ಕಾಲಸ್ಯಾನಂತ್ಯಾತ್ ಸಮಾಪ್ತೇರಸಂಭವಃ । ಭಾರತಯುದ್ಧೇ ''ಚತುರ್ದಶೀಂ ಪಂಚದಶೀಂ ಭೂತಪೂ....ಇಮಾಂ ತು ನಾಭಿಜಾನಾಮಿ ಅಮಾವಾಸ್ಯಾಂ ತ್ರಯೋದಶೀಮ್ ಇತಿ ತ್ರಯೋದಶ್ಯಾಃ ಅಸಂಭಾವಿತಪಂಚದಶೀತ್ವದರ್ಶನಾದಿತಿ ॥

ಸಿದ್ಧಾಂತಸ್ತು - ಕಾಲಸ್ಯ ಸಮಸ್ತಸ್ಯಾಪಿ ಸಮಾಪ್ತೇಃ ವ್ಯಾಹತತ್ವೇನ ಅನಂತ-ಕಾಲವಾಸಿತ್ವಾತ್ ಸ್ವರ್ಗಿಣೋ ಮನ್ವಂತರಾದಿವಾಸಿತಯಾ ಪುನರಾವೃತ್ತಾವಪಿ ನ ಮುಕ್ತಸ್ಯ ಪುನರಾವೃತ್ತಿಃ । ''ನ ಚ ಪುನರಾವರ್ತತೇ'' ಇತಿ ಶ್ರುತೇಶ್ಚ ''ಸರ್ವಾನ್ ಕಾಮಾನಾಪ್ನೋತಿ'' ಇತಿ ಶ್ರುತೌ ಸರ್ವಕಾಮಾಪ್ತೇಃ ಶ್ರವಣೇನ ಶ್ರುತಾವಪುನರಾವೃತ್ತೇಃ ಕಾಮಿತತ್ವಾಚ್ಚ ನ ಪುನರಾವೃತ್ತಿರಿತಿ

ನಿತ್ಯನಿರ್ದುಃಖಾನಂದಾನುಭವವಂತ ಏವ ಮುಕ್ತಾ ಇತಿ ॥ ಫಲಂ ತು ಮುಕ್ತೇಃ ಪುಮರ್ಥತ್ವಾಕ್ಷೇಪಸಮಾಧೀ ॥ ೧ ॥

ಕಲ್ಯಾಣಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥

ಇತಿ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ ಶ್ರೀಮತ್ಸುಧೀಂದ್ರ
ಗುರುಪಾದಶಿಷ್ಯರಾಘವೇಂದ್ರ ಯತಿಕೃತಾಯಾಂ ನ್ಯಾಯಮುಕ್ತಾವಲ್ಯಾಂ
ಚತುರ್ಥಾಧ್ಯಾಯಸ್ಯ ಚತುರ್ಥಃ ಪಾದಃ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

### ಶ್ರೀ ರಾಘವೇಂದ್ರಯತಿಕೃತಾ

# ನ್ಯಾಯಮುಕ್ತಾವಲಿಃ

### ಕನ್ನಡಾನುವಾದ

**ಪ್ರಣಮ್ಯ ರಮಣಂ ಲಕ್ಷ್ಮ್ಯಾಃ ಪೂರ್ಣಬೋಧಗುರೂನಪಿ ।**
**ನ್ಯಾಯಮುಕ್ತಾವಲಿಂ ಕುರ್ಮೋ ವಿದುಷಾಂ ಕಂಠಭೂಷಣಮ್ ।।**

ಲಕ್ಷ್ಮೀಪತಿಯಾದ ನಾರಾಯಣನನ್ನೂ ಪೂರ್ಣಪ್ರಜ್ಞ ಗುರುಗಳನ್ನೂ ನಮಸ್ಕರಿಸಿ ವಿದ್ವಾಂಸರಿಗೆ ಕಂಠ ಭೂಷಣವಾದ ನ್ಯಾಯ ಮುಕ್ತಾವಲಿ ಎಂಬ ಗ್ರಂಥವನ್ನು ರಚಿಸುತ್ತೇವೆ.

## ಮೂರನೆಯ ಅಧ್ಯಾಯದ ಮೊದಲನೆಯ ಪಾದ

ಇದುವರೆಗೆ ಹಿಂದಿನ ಎರಡು ಅಧ್ಯಾಯಗಳಲ್ಲಿ ಜಿಜ್ಞಾಸಾಸೂತ್ರದಲ್ಲಿರುವ ಬ್ರಹ್ಮ ಶಬ್ದಾರ್ಥವು ವಿಚಾರಿಸಲ್ಪಟ್ಟಿತು. ಬ್ರಹ್ಮ ಶಬ್ದಾರ್ಥ ವಿಷ್ಣು ಅವನು ಸಿದ್ಧ. ಸಾಧ್ಯನಲ್ಲ. ಅಥ-ಅತಃ ಜಿಜ್ಞಾಸಾ ಪದಗಳ ಅರ್ಥವಾದ ಫಲ ಅಧಿಕಾರ ವಿಚಾರ ಇವು ಸಾಧ್ಯ. (ಸಂಪಾದಿಸಲ್ಪಡಬೇಕಾದದ್ದು) ಇವುಗಳ ವಿಚಾರ ಮುಂದಿನ ಎರಡು ಅಧ್ಯಾಯಗಳಲ್ಲಿರುವುದರಿಂದ ಈ ಅಧ್ಯಾಯಗಳು ಅನಂತರ ಬಂದಿವೆ. ಅದರಲ್ಲಿಯೂ ಅತಃ ಶಬ್ದದ ಅರ್ಥವು ಫಲ = ಮುಕ್ತಿ. ಅದಕ್ಕೆ ಕಾರಣವಾದದ್ದು 'ಅಥ' ಮತ್ತು 'ಜಿಜ್ಞಾಸಾ' ಪದಗಳಿಂದ ಉಕ್ತವಾದ ವೈರಾಗ್ಯ , ಭಕ್ತಿ, ಉಪಾಸನಾ ಮತ್ತು ಜ್ಞಾನ ವಾದ್ದರಿಂದ ೩ನೆ ಅಧ್ಯಾಯದಲ್ಲಿ ಸಾಧನ ವಿಚಾರ ಬಂದಿದೆ ಎಂದು ಅಧ್ಯಾಯಗಳ ಸಂಗತಿ. ಈ ಅಧ್ಯಾಯದಲ್ಲಿ ಪೂರ್ವ ಪೂರ್ವ ಪಾದಾರ್ಥಗಳು ಉತ್ತರೋತ್ತರ ಪಾದಾರ್ಥಗಳಿಗೆ ಕಾರಣವಾದ್ದರಿಂದ ಕಾರಣ ಮೊದಲು ಅನಂತರ ಕಾರ್ಯ ಎಂಬ ಕ್ರಮದಿಂದ ಪಾದಗಳು ಬಂದಿವೆ.

## || ಓಂ ತದಂತರ ಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನ ನಿರೂಪಣಾಭ್ಯಾಂ ಓಂ || ೩-೧-೧

ಹಿಂದಿನ ಎರಡು ಅಧ್ಯಾಯಗಳಲ್ಲಿ ನಡೆದ ವಿಚಾರ ಪರಂಪರೆಯನ್ನು ಚಂದ್ರಿಕಾರರೇ ನಿರೂಪಿಸಿದ್ದರಿಂದ ನಾವು ಹೇಳಲಿಲ್ಲ. ಇನ್ನು ಮುಂದೆ ಅವರ ಸಂತೋಷಕ್ಕಾಗಿ ನಿರೂಪಿಸುತ್ತೇವೆ.

(೧) ಈ ಅಧಿಕರಣದಲ್ಲಿ ಜಿಜ್ಞಾಸಾಸೂತ್ರಸ್ಥವಾದ ಅಥಾದಿ ಪದೋಕ್ತವಾದ ವೈರಾಗ್ಯಾದಿಗಳು ಬೇಡವೋ? ಬೇಕೋ? ಎಂದು ವಿಚಾರ.

(೨) ಇದಕ್ಕಾಗಿ, ಜೀವನ ಮರಣಕಾಲದಲ್ಲಿ ಪೂರ್ಣವಾಗಿ ಪಂಚ ಭೂತಗಳ ವಿಯೋಗ ಆಗುತ್ತದೊ? ಇಲ್ಲವೊ? ಎಂಬ ವಿಚಾರ

(೩) ಭೂತಗಳ ವಿಯೋಗ ಪೂರ್ಣ ಆಗುವುದಿಲ್ಲ ಎಂಬುದಕ್ಕೆ ಪ್ರಮಾಣ ಮತ್ತು ಪ್ರಯೋಜನಗಳು ಇಲ್ಲವೋ? ಇದೆಯೋ? ಎಂಬ ವಿಚಾರಗಳು ಇಲ್ಲಿ ಬಂದಿವೆ. ಪ್ರಮಾಣ ಪ್ರಯೋಜನಗಳು ಇಲ್ಲವೆಂಬ ಪಕ್ಷದಲ್ಲಿ ಸಂಪೂರ್ಣ ಭೂತ ವಿಯೋಗ ಸಿದ್ಧವಾಯಿತು. ಅದೇ ಮರಣರೂಪವಾದ್ದರಿಂದ ಸ್ವಾಭಾವಿಕ ಮರಣದಿಂದಲೇ ಭೂತ ವಿಯೋಗರೂಪ ಮೋಕ್ಷಸಂಪಾದನೆ ಆಗುವುದರಿಂದ ವೈರಾಗ್ಯಾದಿಗಳು ಬೇಡ ಎಂದಾಗುವುದು. ಪ್ರಮಾಣ ಪ್ರಯೋಜನ ಇದೆ ಎಂಬ ಪಕ್ಷದಲ್ಲಿ ಸ್ವಾಭಾವಿಕ ಮರಣವಾದಾಗ ಸಂಪೂರ್ಣ ಭೂತವಿಯೋಗ-ವಾಗುವುದಿಲ್ಲವಾದ್ದರಿಂದ ಅದಕ್ಕಾಗಿ ವೈರಾಗ್ಯಾದಿಗಳು ಬೇಕು ಎಂದು ಸಿದ್ಧವಾಗುತ್ತದೆ. ಇದೇ ವಿಚಾರ(ಚಿಂತಾ) ಫಲ.

**ಪೂರ್ವಪಕ್ಷ** :- ಮೋಕ್ಷಕ್ಕಾಗಿ ವೈರಾಗ್ಯಾದಿ ಸಾಧನಾನುಷ್ಠಾನ ಬೇಕಾಗಿಲ್ಲ. ಜೀವರ ಮರಣಕಾಲದಲ್ಲಿಯೇ ''ಭೂತಾನಾಂ ವಿನಿವೃತ್ತಿಸ್ತು ಮರಣಂ ಸಮುದಾಹೃತಂ'' ಎಂಬ ವಚನದಂತೆ ಭೂತಗಳ ವಿಯೋಗ ಆಗುತ್ತದೆ. ''ಮುಕ್ತಿಸ್ತೇಭ್ಯೋವಿಮೋಚನಂ'' ಎಂಬ ಸ್ಮೃತಿಪ್ರಕಾರವಾಗಿ ಭೂತ-ವಿಯೋಗವೇ ಮುಕ್ತಿ ಆದ್ದರಿಂದ ಮರಣದಿಂದಲೇ ಮೋಕ್ಷವಾಗುವುದರಿಂದ ಸಾಧನ ಬೇಕಾಗಿಲ್ಲ ಮತ್ತು ಭೂತಗಳು ಪೂರ್ಣವಿಯೋಗ ಹೊಂದದೇ ಜೀವರ ಜೊತೆಗೆ ಹೋಗುತ್ತವೆ ಎನ್ನುವುದಕ್ಕೆ ಪ್ರಮಾಣವಿಲ್ಲ. ಪಂಚಭೂತಗಳು

ಶರೀರದಲ್ಲಿದ್ದು ಜೀವರಿಗೆ ಭೋಗವನ್ನು ಕೊಟ್ಟು ಕೃತಾರ್ಥವಾದ್ದರಿಂದ ಪುನಃ ಜೀವನೊಂದಿಗೆ ಹೋಗಲು ಯಾವ ಪ್ರಯೋಜನವೂ ಇಲ್ಲ.

**ಸಿದ್ಧಾಂತ** :- ವೇತ್ಥ ಯಥಾ (ಯಾವ ಪ್ರಕಾರದಿಂದ ದೇವತೆಗಳು ೫ನೇ ಆಹುತಿಯನ್ನು ಕೊಟ್ಟಾಗ ಆಪಃ = ಭೂತತ್ರಯಾತ್ಮಕವಾದ ಅಪ್ ಭೂತದಿಂದ ಕೂಡಿದ ಜೀವನು, ಪುರುಷನಾಮಕನಾಗುವನು ಎಂಬುದನ್ನು ತಿಳಿದಿದ್ದಿ ಏನು?) ಎಂಬ ಪ್ರವಾಹಣನ ಪ್ರಶ್ನೆ ಹಾಗೂ ಕೊನೆಯಲ್ಲಿ ಪ್ರವಾಹಣನೇ ನೀಡಿದ ಇತಿ ತು......... (ಸ್ವರ್ಗ, ಪರ್ಜನ್ಯ, ಭೂಮಿ, ಪುರುಷ, ಸ್ತ್ರೀಯರ ಅಂತರ್ಗತ ನಾರಾಯಣ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ರೂಪಗಳಲ್ಲಿ ದೇವತೆಗಳು ಜೀವನೆಂಬ ಆಹುತಿಯನ್ನು ಕೊಟ್ಟಾಗ ಅಪಃ= ಜೀವನು ಪುರುಷನಾಮಕನಾಗುತ್ತಾನೆ) ಎಂಬ ಉತ್ತರ ವಾಕ್ಯದಲ್ಲಿ ಅಪ್ ಶಬ್ದದಿಂದ ಜೀವನನ್ನು ಹೇಳಿದ್ದರಿಂದ ಜೀವನು ಭೂತಸಂಯುಕ್ತನಾಗಿಯೇ ಶರೀರದಿಂದ ಹೋಗುತ್ತಾನೆ ಮತ್ತು ''ಭೂತಯುಕ್ತಃ ಪರಂ ಲೋಕಂ'' ಎಂಬ ಪ್ರಮಾಣವೂ ಇದೆ. ಭೂತಗಳು ಜೀವನ ಜೊತೆಗಿರುವುದರಿಂದ ಶರೀರಾಂತರ ಸಂಪಾದನೆ ಎಂಬ ಪ್ರಯೋಜನವೂ ಇದೆ. ''ಭೂತಾನಾಂ ವಿನಿವೃತ್ತಿಃ'' ಎಂಬ ಪ್ರಮಾಣಕ್ಕೆ ಭಾಗಶಃ ವಿಯೋಗವಾಗುತ್ತದೆ ಎಂದು ಅರ್ಥಮಾಡ-ಬೇಕು. ಆದ್ದರಿಂದ ಮರಣಮಾತ್ರದಿಂದ ಮೋಕ್ಷವಾಗದ ಪ್ರಯುಕ್ತ ವೈರಾಗ್ಯಾದಿ ಸಾಧನಗಳು ಬೇಕು.

## ।। ಓಂ ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ಓಂ ।। ೩-೧-೨

ಹಿಂದೆ ಹೇಳಿದಂತೆ ಪ್ರಶ್ನೆ ಹಾಗೂ ಉತ್ತರ ವಾಕ್ಯಗಳಿಂದ ಅಪ್ ಭೂತವು ಜೀವನೊಂದಿಗೆ ಹೋಗುತ್ತದೆಂದು ಸಿದ್ಧವಾದರೂ ಆ ಒಂದು ಭೂತವು ಶರೀರಾಂತರವನ್ನು ಹುಟ್ಟಿಸಲಾರದಾದ್ದರಿಂದ ಮರಣದಿಂದ ಮುಕ್ತಿ ಸಿಗು-ವಾಗ ಸಾಧನಾಂತರಗಳು ವ್ಯರ್ಥ ಎಂದು ಆಕ್ಷೇಪಮಾಡುವುದರಿಂದ ಸಂಗತಿ.

ಇಲ್ಲಿ ಮೃತ ಜೀವನೋಂದಿಗೆ ಜಲತತ್ವ ಮಾತ್ರ ಹೋಗುತ್ತದೋ? ಅಥವಾ ಎಲ್ಲಾ ಭೂತಗಳೋ ಎಂದು ವಿಚಾರ. ಅದಕ್ಕಾಗಿ ಪ್ರಶ್ನೋತ್ತರ ವಾಕ್ಯಗಳಲ್ಲಿರುವ ಅಪ್ ಶಬ್ದವು ಏಕಭೂತಪರವೋ? ಅನೇಕಭೂತ ಪರವೋ?

ಎಂದು ಚಿಂತಾ ಅದಕ್ಕಾಗಿ ಅಪ್‌ಶಬ್ದವು ಅನೇಕಪರವಾಗಲು ಪ್ರಮಾಣ ಇಲ್ಲವೋ? ಇದೆಯೋ? ಅಪಶಬ್ದಪ್ರಯೋಗ ಸರಿಯಲ್ಲವೋ? ಅಥವಾ ಸರಿಯೋ? ಎಂಬ ಚಿಂತಾ ಮಾಡಲ್ಪಟ್ಟಿದೆ.

**ಪೂರ್ವಪಕ್ಷ :** - ಪ್ರಶ್ನೋತ್ತರವಾಕ್ಯದಲ್ಲಿ ಅಪ್‌ಶಬ್ದವು ಅನೇಕ ಭೂತಪರ ಎಂಬುದಕ್ಕೆ ಪ್ರಮಾಣವಿಲ್ಲ. ಅದು ಅನೇಕ ಭೂತಪರವಾಗಿದ್ದರೆ ಭೂತಾನಿ ಪುರಷವಚಾಂಸಿ ಎಂದೇ ಹೇಳಬೇಕಾಗಿತ್ತು. ಅದನ್ನು ಬಿಟ್ಟು ವಿಶೇಷವಾಗಿ ಅಪ್ ಶಬ್ದಹೇಳಿದ್ದು ಸರಿಯಲ್ಲ. ಆದ್ದರಿಂದ ಜೀವನೊಂದಿಗೆ ಅಪ್ ಮಾತ್ರ ಹೋಗುತ್ತದೆ ಹೊರತು ಎಲ್ಲ ಭೂತಗಳಲ್ಲ.

**ಸಿದ್ಧಾಂತ :-** ''ಮಿಶ್ರಾಣಿ ಹಿ ಭೂತಾನಿ'' ಎಂಬ ಶ್ರುತಿಯ ಪ್ರಕಾರ ಪೃಥಿವಿ -ಅಪ್-ತೇಜಸ್ ಇವುಗಳ ತ್ರಿವೃತ್ ಕರಣದಿಂದ ಪ್ರತಿಯೊಂದೂ ಮಿಶ್ರಿತವಾದ್ದರಿಂದ ಅಪ್ ತತ್ವವೂಕೂಡ ಪೃಥಿವೀ ಅಪ್ ತೇಜೋರೂಪ-ವಾದ್ದರಿಂದ ಅಪ್ ಶಬ್ದದಿಂದ ಸರ್ವಭೂತಗಳನ್ನೂ ಇಟ್ಟುಕೊಳ್ಳಬೇಕು. ಶ್ರುತಿಯಲ್ಲಿ ವಿಶೇಷವಾಗಿ ಅಪ್ ಶಬ್ದವನ್ನೇ ಪ್ರಯೋಗ ಮಾಡಿದ್ದೇಕೆಂದರೆ ಇತರಭೂತಗಳಿಗಿಂತ ಅಪ್‌ನ ಅಂಶವು ಜಾಸ್ತಿ ಇದೆ. ಯಾವುದು ಜಾಸ್ತಿ ಇರುತ್ತದೋ ಅದನ್ನು ಉಲ್ಲೇಖಮಾಡುವುದು 'ವೈಶೇಷ್ಯಾತ್ತು' ಎಂಬ ನ್ಯಾಯ-ಸಿದ್ಧವಾಗಿದೆ. ಆದ್ದರಿಂದ ಮರಣ ಮಾತ್ರವೇ ಮೋಕ್ಷವಲ್ಲ. ಸಾಧನಾನುಷ್ಠಾನ ಆಕ್ಷೇಪ ಮತ್ತು ಸಮಾಧಾನಗಳೇ ಪೂರ್ವಪಕ್ಷ ಸಿದ್ಧಾಂತ ಫಲ.

## ಓಂ ಪ್ರಾಣಗತೇಶ್ಚ ಓಂ ॥ ೩-೧-೩

ಪೂರ್ವಾಧಿಕರಣದಲ್ಲಿ ಜೀವನೊಂದಿಗೆ ಅಪ್ ಗಮನ ಶ್ರುತ್ಯುಕ್ತವಾದ್ದರಿಂದ ಆ ಅಪ್ ತತ್ವವು ಮಿಶ್ರಿತವಾದ್ದರಿಂದ ಇತರ ಭೂತಗಳಿಗೂ ಜೀವನೊಂದಿಗೆ ಗಮನವಿದೆಯೆಂದು ಆರ್ಥಿಕವಾಗಿ ಸಿದ್ಧಪಡಿಸಲಾಯಿತು. ಇಲ್ಲಿ ಅನುಮಾನ-ದಿಂದ ಭೂತಗಳ ಗಮನವನ್ನು ಸಾಧಿಸಲಾಗಿದೆ. ಇಲ್ಲಿ ಜಿಜ್ಞಾಸಾಸೂತ್ರದ ಅಥಾದಿಫದೋಕ್ತವಾದ ಸಾಧನವು ಅನಾವಶ್ಯಕವೋ ಆವಶ್ಯಕವೋ? ಎಂಬ ವಿಚಾರ. ಅದಕ್ಕಾಗಿ ಪ್ರಕೃತ ಭೂತಗಳು ಜೀವನೊಂದಿಗೆ ಹೋಗುವುದಿಲ್ಲವೋ? ಹೋಗುತ್ತವೋ? ಎಂಬ ಚಿಂತೆ. ಅದಕ್ಕಾಗಿ ವಿಶೇಷ ಪ್ರಮಾಣವು ಇಲ್ಲವೋ? ಇದೆಯೇ ಎಂಬ ಚಿಂತಾ.

ಪ್ರಕೃತವಾದ ಎಲ್ಲಾ ಭೂತಗಳು ಜೀವನೊಂದಿಗೆ ಹೋಗುತ್ತವೆ ಎನ್ನುವುದಕ್ಕೆ ವಿಶೇಷ ಪ್ರಮಾಣ ಇಲ್ಲವಾದ್ದರಿಂದ ಎಲ್ಲ ಭೂತಗಳು ಹೋಗುವುದಿಲ್ಲ. ಮರಣದಿಂದ ಭೂತವಿಯೋಗವಾಗುವ ಪ್ರಯುಕ್ತ ಅದಕ್ಕಾಗಿ ಸಾಧನ ಅನಾವಶ್ಯಕ ಎಂದು ಪೂರ್ವಪಕ್ಷ.

**ಸಿದ್ಧಾಂತ** :- ಮರಣವಾದರೂ ಭೂತಗಳು ಜೀವನೊಂದಿಗೆ ತಪ್ಪದೇ ಹೋಗುತ್ತವೆ. ಏಕೆಂದರೆ ಜೀವನೊಂದಿಗೆ ಇಂದ್ರಿಯಗಳಂತೂ ಹೋಗಿಯೇ ಹೋಗುತ್ತವೆ. ''ಕರಣೈರ್ವಾವ ನ ವಿಯುಜ್ಯತೇ'' ಎಂಬ ಶ್ರುತಿಯಿಂದ ಇದು ಸಿದ್ಧವಾಗಿದೆ. ಅವುಗಳಿಗೂ ಭೂತಗಳಿಗೂ ಅವಿನಾಭಾವ ಸಂಬಂಧವಿದೆ. ಒಂದನ್ನು ಬಿಟ್ಟು ಮತ್ತೊಂದು ಇರುವುದಿಲ್ಲ. ಹಾಗಾಗಿ ಭೂತಗಳು ಜೀವ-ನೊಂದಿಗೆ ಹೋಗುತ್ತವೆ. ಒಂದು ವಸ್ತುವಿನ ಜೊತೆಗೆ ಮತ್ತೊಂದು ಹೋಗುವಾಗ ಆ ಮತ್ತೊಂದರ ಅವಿನಾಭಾವ ಸಂಬಂಧ ಉಳ್ಳದ್ದೂ ಹೋಗುತ್ತದೆ. ರಾಜನೊಂದಿಗೆ ಮಂತ್ರಿ ಹೋಗುವಾಗ ಆ ಮಂತ್ರಿಯ ಅವಿನಾ-ಭಾವ ಸಂಬಂಧವುಳ್ಳ ವಸ್ತುವೂ ಹೋಗುತ್ತದೆ. ಅದರಂತೆ ಇಲ್ಲಿಯೂ ಕೂಡ.

ಇಂದ್ರಿಯಗಳಿಗೂ ಭೂತಗಳಿಗೂ ಅವಿನಾಭಾವ ಸಂಬಂಧವು ''ಯತ್ರ ವಾವ ಭೂತಾನಿ ತತ್ರ ಕರಣಾನಿ'' ಎಂಬ ಶ್ರುತಿಯಿಂದ ಸಿದ್ಧವಾಗಿದೆ. ಹೀಗೆ ವಿಶೇಷ ಪ್ರಮಾಣವಿರುವುದರಿಂದ ಸಾಧನಾನುಷ್ಠಾನ ಆವಶ್ಯಕವಾಗಿದೆ.

## ।। ಓಂ ಅಗ್ನ್ಯಾದಿ ಶ್ರುತೇರಿತಿ ಚೇನ್ನ ಭಾಕ್ತತ್ವಾತ್ ಓಂ ।।
## ೩-೧-೪

ಇಂದ್ರಿಯಗಳು ಜೀವನೊಂದಿಗೆ ಹೋಗುತ್ತವೆ ಎಂಬ ಹೇತುವನ್ನು ಹಿಂದಿನ ಅಧಿಕರಣದಲ್ಲಿ ಹೇಳಲಾಗಿತ್ತು. ಇಲ್ಲಿ ಆ ಹೇತುವಿನ ಅಸಿದ್ಧಿಯನ್ನು ಪರಿಹರಿಸುತ್ತಾರೆ. ಅಥಾದಿ ಪದೋಕ್ತವಾದ ಸಾಧನ ಬೇಡವೋ? ಬೇಕೋ? ಎಂಬುದು ಈ ಅಧಿಕರಣದ ವಿಚಾರ. ಅದಕ್ಕಾಗಿ ಪ್ರಕೃತೇಂದ್ರಿಯಗಳು ಜೀವನೊಂದಿಗೆ ಹೋಗುವುದಿಲ್ಲವೋ? ಹೋಗುತ್ತವೋ? ಎಂಬ ಚಿಂತಾ. ಅದಕ್ಕಾಗಿ ಅಗ್ನ್ಯಾದಿಗಳಲ್ಲಿ ವಾಗಾದಿಗಳಿಗೆ ಗಮನ ಹೇಳುವ ಶ್ರುತಿಯು ಪೂರ್ಣವಾದ ಇಂದ್ರಿಯಗಮನಪರವೋ? ಅಥವಾ ಭಾಗಶಃ ಗಮನ

ಪರವೋ ಎಂಬ ಚಿಂತಾ. ಅದಕ್ಕಾಗಿ ಭಾಗಶಃ ಗಮನ ಪರತ್ವಕ್ಕೆ ಕಲ್ಪಕ ಇಲ್ಲದೇ ಪ್ರತ್ಯುತ ಬಾಧಕವೇ ಇದೆಯೋ? ಅಥವಾ ಕಲ್ಪಕವಿದ್ದು ಬಾಧಕ ಇಲ್ಲವೋ? ಎಂಬ ಚಿಂತೆ.

**ಪೂರ್ವಪಕ್ಷ**:- ''ಯತ್ರಾಸ್ಯ ಪುರುಷಸ್ಯ ಮೃತಸ್ಯ ಅಗ್ನಿಂ ವಾಕ್ ಅಪ್ಯೇತಿ'' ಇತ್ಯಾದಿ ಶ್ರುತಿಯ ಪ್ರಕಾರವಾಗಿ ವಾಗಿಂದ್ರಿಯ ಅಗ್ನಿಯಲ್ಲಿ ಚಕ್ಷುರಿಂದ್ರಿಯ ಸೂರ್ಯನಲ್ಲಿ ಹೋಗುವುದರಿಂದ ಜೀವನ ಜೊತೆಗೆ ಹೋಗುವುದಿಲ್ಲ. ಕೆಲವು ಭಾಗದಿಂದ ಅಗ್ನ್ಯಾದಿಗಳಲ್ಲಿ ಕೆಲವು ಭಾಗದಿಂದ ಜೀವನ ಜೊತೆಗೆ ಹೋಗುತ್ತವೆ ಎಂದು ಹೇಳಲು ಆಧಾರವಿಲ್ಲ. ಒಂದು ವೇಳೆ ಭಾಗಶಃ ಅಗ್ನ್ಯಾದಿಗಳಲ್ಲಿ ಹೋದರೂ ಪ್ರತಿಮರಣಕಾಲದಲ್ಲಿ ಸ್ವಲ್ಪ ಸ್ವಲ್ಪ ಹೋಗಿ ಕಾಲಕ್ರಮೇಣ ಎಲ್ಲ ಇಂದ್ರಿಯಗಳೂ ದೇವತೆಗಳಲ್ಲಿ ಹೋಗಿ ಸೇರುವುದರಿಂದ ಭೂತಗಳೂ ಅಲ್ಲಿಗೆ ಹೋಗಬೇಕಾಗುವುದರಿಂದ ಜೀವನೊಂದಿಗೆ ಗಮನವಿಲ್ಲವೆಂದಾಗುತ್ತದೆ. ಜೀವನೊಂದಿಗೆ ಗಮನವಾದರೆ ಇಂದ್ರಿಯ-ಗಳೊಂದಿಗೆ ಇಲ್ಲವೆಂದಾಗಿ ಭೂತಗಳಿಗೂ ಇಂದ್ರಿಯಗಳಿಗೂ ಅವಿನಾಭಾವ ಇಲ್ಲದಂತಾಗುತ್ತದೆ. ಆದ್ದರಿಂದ ಇಂದ್ರಿಯಗಳು ಜೀವನೊಂದಿಗೆ ಹೋಗುವುದಿಲ್ಲ. ಸಾಧನಾನುಷ್ಠಾನ ಆವಶ್ಯಕವಲ್ಲ.

**ಸಿದ್ಧಾಂತ** :- ಪುರುಷಸ್ಯ ಮೃತೌ ಬ್ರಹ್ಮನ್ ಎಂಬ ಸ್ಮೃತಿಯ ಪ್ರಕಾರ ಇಂದ್ರಿಯಗಳು ಭಾಗಶಃ ಜೀವ ಮತ್ತು ದೇವತೆಗಳೆರಡು ಕಡೆಗೂ ಹೋಗುವುದರಿಂದ ''ಅಗ್ನೌ ವಾಗಪ್ಯೇತಿ'' ಇತ್ಯಾದಿಶ್ರುತಿಗೆ ಭಾಗಶಃ ಎಂದು ಅರ್ಥಮಾಡಬೇಕು. ಅದೇ ಸ್ಮೃತಿಯಲ್ಲಿ ವಿಯುಕ್ತವಾದ ಭಾಗಗಳಿಗೂ ಜೀವನು ದೇಹಾಂತರಪಡೆಯುವಾಗ ಪುನಃ ಪ್ರವೇಶವನ್ನೂ ಹೇಳಿದ್ದರಿಂದ ಕಾಲಕ್ರಮೇಣ ಎಲ್ಲ ಇಂದ್ರಿಯ ಭಾಗಗಳೂ ದೇವತೆಗಳಲ್ಲಿಯೇ ಸೇರುತ್ತವೆ ಎಂಬ ಪ್ರಶ್ನೆಗೆ ಅವಕಾಶವಿಲ್ಲ ಮತ್ತು ''ಮೃತಿಕಾಲೇ ಜಹತ್ಯೇನಂ'' ಎಂಬ ಸ್ಮೃತಿಯ ಪ್ರಕಾರ ಭೂತಗಳೂ ಕೂಡ ಭಾಗಶಃ ಜೀವನೊಂದಿಗೆ ಭಾಗಶಃ ಇಂದ್ರಿಯಗಳೊಂದಿಗೆ ಹೋಗುತ್ತವೆ ಎಂದು ಸಿದ್ಧವಾದ ಪ್ರಯುಕ್ತ ಇಂದ್ರಿಯಗಳಿಗೂ ಭೂತಗಳಿಗೂ ಅವಿನಾಭಾವಕ್ಕೆ ಚ್ಯುತಿ ಇಲ್ಲವಾದ್ದರಿಂದ ಇಂದ್ರಿಯಗಳೂ ಹಾಗೂ ಭೂತಗಳೂ ಕೂಡ ಜೀವನನ್ನು ಅನುಸರಿಸುವುದರಿಂದ ಅವುಗಳ ಪೂರ್ಣವಿಯೋಗಕ್ಕಾಗಿ ಸಾಧನಾನುಷ್ಠಾನ ಆವಶ್ಯಕ.

## ॥ ಓಂ ಪ್ರಥಮೇಽಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ ಓಂ ॥ ೩-೧-೫

ಪೂರ್ವಾಧಿಕರಣದಲ್ಲಿ ''ಅಗ್ನೌ ವಾಗಪ್ಯೇತಿ'' ಎಂಬ ಶ್ರುತಿಗೆ ಭಾಕ್ತತ್ವವನ್ನು ಹೇಳಿದ್ದರಿಂದ ಅಗ್ನೌ ದೇವಾಃ ಶ್ರದ್ಧಾಂ ಜುಹ್ವತಿ ಎಂಬ ಶ್ರುತಿಯ ಸ್ಮರಣೆ ಬಂದದ್ದರಿಂದ ಅದನ್ನು ಉಪೇಕ್ಷೆ ಮಾಡುವುದು ಸರಿಯಲ್ಲವಾದ್ದರಿಂದ ಶ್ರದ್ಧಾಶ್ರುತಿಗೆ ಇಲ್ಲಿ ಭಾಕ್ತತ್ವ ಹೇಳುವುದರಿಂದ ಸಂಗತಿ ಇದೆ. ಇಲ್ಲಿ ಅಥಾದಿ ಪದೋಕ್ತ ಸಾಧನಾಷ್ಠಾನ ಬೇಡವೋ? ಬೇಕೋ? ಎಂದು ಚಿಂತಾ. ಅದಕ್ಕಾಗಿ ಭೂತಗಳಿಗೆ ಜೀವನ ಜೊತೆ ಗಮನ ಇಲ್ಲವೋ ಇದೆಯೋ ಎಂದು ಚಿಂತಾ. ಅದಕ್ಕಾಗಿ ಉಪಕ್ರಮದಲ್ಲಿ (ಆರಂಭದಲ್ಲಿ) ಶ್ರದ್ಧಾ ಶ್ರುತಿಯಲ್ಲಿ ಪಠಿತವಾದ ಶ್ರದ್ಧಾ ಶಬ್ದವು ಕೇವಲ ಶ್ರದ್ಧಾಯುಕ್ತಜೀವ ಪರವೋ ಅಥವಾ ಶ್ರದ್ಧಾ ಹಾಗೂ ಭೂತಯುಕ್ತ ಜೀವಪರವೋ ಎಂದು ಚಿಂತಾ. ಅದಕ್ಕಾಗಿ ಉಪಕ್ರಮಾನು-ಸಾರವಾಗಿ ಉಪಸಂಹಾರ(ಕೊನೆಯಲ್ಲಿ)ದಲ್ಲಿರುವ ''ಇತಿತು ಪಂಚಮ್ಯಾ-ಮಾಹುತಾವಾಪಃ'' ಎಂಬ ವಾಕ್ಯವನ್ನು ಅರ್ಥೈಸಬೇಕೋ ಅಥವಾ ಉಪ-ಸಂಹಾರಾನುಸಾರವಾಗಿ ಉಪಕ್ರಮವನ್ನು ಅರ್ಥೈಸಬೇಕೋ ಎಂದು ಚಿಂತಾ. ಅದಕ್ಕಾಗಿ ಉಪಕ್ರಮ ಪ್ರಬಲವೋ ಉಪಸಂಹಾರ ಪ್ರಬಲವೋ ಎಂದು ಚಿಂತೆ. ಆದ್ಯಪಕ್ಷದಲ್ಲಿ ಅಂದರೆ ಉಪಕ್ರಮವೇ ಪ್ರಬಲವೆಂದಾದರೆ ಉಪಸಂಹಾರದ ಆಪಃ ಎಂಬುದಕ್ಕೆ ಕೇವಲ ಶ್ರದ್ಧಾಯುಕ್ತ ಜೀವ ಎಂದು ಅರ್ಥಮಾಡ-ಬೇಕುವುದರಿಂದ ಭೂತಗಳಿಗೆ ಜೀವನೊಂದಿಗೆ ಗಮನವಿಲ್ಲವೆಂದಾಗಿ ಸಾಧನಾ-ನುಷ್ಠಾನ ಅನಾವಶ್ಯಕವೆಂದಾಗುವುದು ಪೂರ್ವಪಕ್ಷದ ಫಲ. ಉಪಸಂಹಾರ ಪ್ರಬಲವೆಂದಾದರೆ ಉಪಕ್ರಮದ ಶ್ರದ್ಧಾ ಶಬ್ದಕ್ಕೆ ಭೂತಯುಕ್ತ ಜೀವ ಎಂದರ್ಥ ಮಾಡಬೇಕಾದ್ದರಿಂದ ಜೀವನೊಂದಿಗೆ ಭೂತಗಳ ಗಮನ ಸಿದ್ಧವಾಗುವ ಪ್ರಯುಕ್ತ ಸಾಧನ ಬೇಕೆಂಬುದು ಸಿದ್ಧಾಂತದ ಫಲ.

**ಪೂರ್ವಪಕ್ಷ** :- ಉಪಕ್ರಮ ವಾಕ್ಯದಲ್ಲಿ ಶ್ರದ್ಧಾಸಹಿತನಾದ ಜೀವನ ಹೋಮವೇ ಶ್ರುತವಾದ್ದರಿಂದ ಭೂತಗಳ ಗಮನ ಅಲ್ಲಿ ಹೇಳಲ್ಪಟ್ಟಿಲ್ಲವಾದ್ದರಿಂದ ಭೂತಗಳಿಗೆ ಗಮನವಿಲ್ಲ. ಒಂದು ವೇಳೆ ಇದ್ದಿದ್ದರೆ ''ಶ್ರದ್ಧಾಂ ಜುಹ್ವತಿ'' ಎನ್ನುವುದರ ಬದಲಿಗೆ ''ಭೂತಾನಿ ಜುಹ್ವತಿ'' ಎಂದು ಹೇಳಬೇಕಾಗಿತ್ತು.

ಉಪಸಂಹಾರದಲ್ಲಿ ಅಪ್ ಶಬ್ದವಿರುವುದರಿಂದ ಅದಕ್ಕನುಗುಣವಾಗಿ ಶ್ರದ್ಧಾ-ಶಬ್ದವು ಭೂತಯುಕ್ತ ಜೀವ ಪರವಾಗಲಿ ಎಂಬ ಶಂಕೆ ಸರಿಯಿಲ್ಲ. ಉಪ-ಕ್ರಮವಾಕ್ಯವು ಪ್ರಥಮೋಪಸ್ಥಿತವಾದ್ದರಿಂದ ಅದರ ಅರ್ಥಾನುಸಂಧಾನ ಕಾಲದಲ್ಲಿ ಯಾವ ವಿರೋಧಿಯೂ ಹುಟ್ಟಿರುವುದಿಲ್ಲವಾದ್ದರಿಂದ ಅದು ಪ್ರಬಲವಾದ್ದ-ರಿಂದ ಅದಕ್ಕನುಗುಣವಾಗಿಯೇ ಉಪಸಂಹಾರವನ್ನು ಅರ್ಥಮಾಡಬೇಕು.

**ಸಿದ್ಧಾಂತ** :- ಉಪಸಂಹಾರವು ಪ್ರಥಮೋಪಸ್ಥಿತವಾಗದಿದ್ದರೂ ಅದು ಉಪಕ್ರಮದ ವ್ಯಾಖ್ಯಾನರೂಪವಾದ್ದರಿಂದ ಅದನ್ನು ನೋಡಿ ಮೂಲಕ್ಕೆ ಅರ್ಥಮಾಡಬೇಕಾದ್ದರಿಂದ ಅರ್ಥನುಸಂಧಾನ ದೃಷ್ಟಿಯಿಂದ ಉಪ-ಸಂಹಾರವೇ ಪ್ರಬಲ. ಅದಕ್ಕನುಸಾರವಾಗಿ ಉಪಕ್ರಮದ ಶ್ರದ್ಧಾಶಬ್ದವನ್ನು ಅಜಹಲ್ಲಕ್ಷಣ ವೃತ್ತಿಯಿಂದ ವಾಚ್ಯಾರ್ಥವನ್ನೂ ಬಿಡದೆ ಶ್ರದ್ಧಾ ಮತ್ತು ಭೂತಯುಕ್ತ ಜೀವಪರ ಎನ್ನಬೇಕು ಆದ್ದರಿಂದ ಭೂತಗಳಿಗೂ ಜೀವನೊಂದಿಗೆ ಗಮನ ಸಿದ್ಧವಾಯಿತು. ಉಪಕ್ರಮ ಪ್ರಾಬಲ್ಯಖಂಡನ ಹಾಗೂ ಉಪಸಂಹಾರ ಪ್ರಾಬಲ್ಯದ ವಿಸ್ತಾರವನ್ನು ಗುರುಪಾದಕೃತ ಉಪಸಂಹಾರ ವಿಜಯದಿಂದ ತಿಳಿಯಬೇಕು.

## || ಓಂ ಅಶ್ರುತತ್ವಾನ್ನೇಷ್ಟಾದಿಕಾರಿಣಾಂ ಪ್ರತೀತೇಃ ಓಂ || ೩-೧-೬

ಪೂರ್ವಾಧಿಕರಣದಲ್ಲಿ ನಿರ್ಣಯಿಸಲ್ಪಟ್ಟ ಅಪ್‌ಶಬ್ದ ಹಾಗು ಇಂದ್ರಿಯ-ಗಮನ ಎಂಬ ಎರಡು ಪ್ರಮಾಣಗಳನ್ನು ಆಕ್ಷೇಪ ಶಂಕಾಮಾಡುವುದರಿಂದ ಈ ಅಧಿಕರಣಕ್ಕೆ ಅನಂತರ ಸಂಗತಿ ಇದೆ. ಮೊದಲಿನಂತೆ ಇಲ್ಲಿಯೂಕೂಡ ಸಾಧನಾಷ್ಠಾನ ಅನಾವಶ್ಯಕವೋ? ಅವಶ್ಯಕವೋ ಎಂದು ಚಿಂತಾ. ಅದಕ್ಕಾಗಿ ಪ್ರಕೃತ ಭೂತಗಳು ಜೀವನ ಜೊತೆಗೆ ಹೋಗುವುದಿಲ್ಲವೋ ಅಥವಾ ಹೋಗುತ್ತವೋ? ಎಂದು ಚಿಂತಾ. ಅದಕ್ಕಾಗಿ ಪೂರ್ವೋಕ್ತವಾದ ಆರ್ಥಾತ್ ಸಿದ್ಧಿ .ಹಾಗೂ ಇಂದ್ರಿಯಗಮನ ಯುಕ್ತಿಗಳು ಭೂತಗಮನಕ್ಕೆ ಸಾಧಕ-ವಾಗುವುದಿಲ್ಲವೋ ಆಗುತ್ತವೋ ಎಂಬ ಚಿಂತಾ ಅದಕ್ಕಾಗಿ ಅವುಗಳಿಗಿಂತ ಸ್ಪಷ್ಟಹೇಳದಿರುವುದು ಪ್ರಬಲವೋ ಅಥವಾ ಆರ್ಥಿಕಸಿದ್ಧ ಯುಕ್ತಿಗಳು ಪ್ರಬಲವೋ ಎಂಬ ಚಿಂತಾ ಪರಂಪರೆ ಇಲ್ಲಿ ಮಾಡಲಾಗಿದೆ.

**ಪೂರ್ವಪಕ್ಷ :-** ಪ್ರಶ್ನೆ ಮತ್ತು ಉತ್ತರ ವಾಕ್ಯಗಳಲ್ಲಿ ಅಪ್‌ತತ್ತ್ವದಗಮನ ಹೇಳಿದ್ದರೂ, ಅಪ್‌ತತ್ವವು ತ್ರ್ಯಾತ್ಮಕ. ಅಂದರೆ ಮೂರು ಭೂತಗಳ ಸ್ವರೂಪ-ವಾಗಿದ್ದರೂ ಅರ್ಥಾತ್ ಇತರ ಭೂತಗಳ ಗಮನ ಸಿದ್ಧವಾದರೂ ಅದಕ್ಕಿಂತ ಅಗ್ನಿಂ ವಾಗಪ್ಯೇತಿ ಎಂಬ ವಾಕ್ಯದಂತೆ ಭೂತಾನಿ ಗಚ್ಛಂತಿ ಎಂದು ಸ್ಪಷ್ಟವಾಗಿ ಹೇಳದಿರುವುದೇ ಪ್ರಬಲವಾದ್ದರಿಂದ ಭೂತಗಳು ಜೊತೆಗೆ ಹೋಗುವುದಲ್ಲ ಎಂದೇ ಹೇಳಬೇಕು. ಮತ್ತು ಇಂದ್ರಿಯಗಮನ ಎಂಬ ಯುಕ್ತಿ ಇದ್ದರೂ ಭೂತಾನಿ ಗಚ್ಛಂತಿ ಎಂಬ ವಿಶೇಷ ಶ್ರುತಿ ಇದ್ದರೆ ಮಾತ್ರ ಅದು ವೈದಿಕಾರ್ಥ ಸಾಧಕವೇಗುತ್ತದೆ. ಇಲ್ಲದಿದ್ದರೆ ಆಗುವುದಿಲ್ಲ. ಆದ್ದರಿಂದ ಭೂತಗಳಿಗೆ ಗಮನ ಇಲ್ಲದ ಪ್ರಯುಕ್ತ ಸಾಧನ ಅನಾವಶ್ಯಕ.

**ಸಿದ್ಧಾಂತ :-** ಕ್ಷುದ್ರಾನ್ನ ಭೋಜನವೂ ಭೋಜನವೇ ಆಗುವಂತೆ ಆರ್ಥಿಕ ಸಿದ್ಧಿಯೂ ಸಿದ್ಧಿಯೇ ಆಗಿದೆ. ಹಾಗಾಗಿ ಅದು ಪ್ರಬಲವೇ ಆಗಿದೆ. ಇಂದ್ರಿಯಗಮನ ಎಂಬ ಯುಕ್ತಿಯೂಕೂಡ ವ್ಯಾಪ್ತಿ ಲಿಂಗಗ್ರಾಹಕ ಪ್ರಮಾಣ-ವಾದ್ದರಿಂದ ಅದೂ ಪ್ರಬಲವೇ ಆದ್ದರಿಂದ 'ಭೂತಗತಿ ಶ್ರುತವೇ ಆಗಿಲ್ಲ' ಎಂಬುದಕ್ಕೆ ಪ್ರತಿಬಂಧಕವಾಗಿ ಅವೆರಡು ಭೂತಗತಿ ರೂಪ ಅರ್ಥಸಾಧಕ-ವಾಗುತ್ತವೆ ಮತ್ತು ''ಅಥ ಹೈನಂ ಯಜಮಾನಂ'' ಎಂಬ ಸ್ಪಷ್ಟ ಶ್ರುತಿಯೂ ಕೂಡ ಇದೆ. ಈ ಶ್ರುತಿಯಲ್ಲಿ ಯಜಮಾನನೊಂದಿಗೆ ಭೂತಗತಿಯನ್ನು ಹೇಳಿದ್ದಾರೆ. ಇದರಿಂದ ಯಾಗಾದಿ ಕರ್ಮಮಾಡಿದವರಿಗೂ ಭೂತವಿಯೋಗ ಇಲ್ಲವೆಂದಮೇಲೆ ಇತರರಿಗೆ ಕೈಮುತ್ಯ ನ್ಯಾಯದಿಂದ ಸಿದ್ಧವಾಗುವುದರಿಂದ ಭೂತವಿಯೋಗಕ್ಕಾಗಿ ಸಾಧನ ಆವಶ್ಯಕ.

## ॥ ಓಂ ಭಾಕ್ತಂ ವಾ ಅನಾತ್ಮವಿತ್ತ್ವಾತ್ ತಥಾಹಿ ದರ್ಶಯತಿ ಓಂ ॥ ೩-೧-೭

ಪೂರ್ವಾಧಿಕರಣದಲ್ಲಿ ಯಜ್ಞಾದಿಕರ್ಮ ಮಾಡಿದವರಿಗೇನೇ ಭೂತ-ವಿಯೋಗವಾಗುವುದಿಲ್ಲ ಎಂದ ಮೇಲೆ ಇತರರಿಗಂತೂ ಆಗುವುದೇ ಇಲ್ಲ. ಎಂದು ಕೈಮುತ್ಯ ನ್ಯಾಯದಿಂದ ಸಿದ್ಧವಾಗುತ್ತದೆ ಎಂದು ಹೇಳಿದ್ದು ಸರಿಯಲ್ಲ. ಏಕೆಂದರೆ ಕರ್ಮಮಾಡಿದವರಿಗೆ ಮುಕ್ತಿಯೇ ಶ್ರುತವಾಗಿದೆಯಾದ್ದರಿಂದ

ಭೂತವಿಯೋಗ ಇಲ್ಲ ಎಂದು ಹೇಳಲು ಬರುವುದಿಲ್ಲ. ಆದ್ದರಿಂದ ಕೈಮುತ್ಯಕ್ಕೆ ಪ್ರಸಕ್ತಿಯೇ ಇಲ್ಲ ಎಂದು ಶಂಕಾಮಾಡುವುದರಿಂದ ಪೂರ್ವಾಧಿಕರಣ ಸಂಗತಿ.

ಈ ಅಧಿಕರಣದಲ್ಲಿ ಮೋಕ್ಷಸಾಧನವಾದ ವೈರಾಗ್ಯಾದಿಗಳು ಬೇಡವೋ? ಬೇಕೋ? ಎಂದು ವಿಚಾರ. ಅದಕ್ಕಾಗಿ ''ಅಪಾಮ ಸೋಮಂ ಅಮೃತಾ ಅಭೂಮ'' ಎಂಬಲ್ಲಿ ಕರ್ಮಜನ್ಯ ಎಂದು ಶ್ರುತವಾದ ಮೋಕ್ಷವು ಮುಖ್ಯವೋ ಗೌಣವೋ? ಎಂದು ವಿಚಾರ. ಅದಕ್ಕಾಗಿ ಆ ಮೋಕ್ಷವು ಮುಖ್ಯವೆಂದರೆ ಬಾಧಕ ಇಲ್ಲವೋ ಇದೆಯೇ? ಎಂಬ ವಿಚಾರ - ಬಾಧಕವಿಲ್ಲ ಎಂದಾದರೆ ಕರ್ಮದಿಂದಲೂ ಮೋಕ್ಷವಾಗುವುದರಿಂದ ವೈರಾಗ್ಯಾದಿಗಳು ಬೇಕಾಗಿಲ್ಲ ಎಂಬುದೇ ಫಲ. ಆ ಮೋಕ್ಷವು ಅಮುಖ್ಯ ಎಂದಾದರೆ ಮುಖ್ಯ ಮೋಕ್ಷಕ್ಕಾಗಿ ವೈರಾಗ್ಯಾದಿಗಳು ಬೇಕು ಎಂಬುದು ವಿಚಾರದ ಫಲ.

**ಪೂರ್ವಪಕ್ಷ** :- ''ಅಪಾಮ ಸೋಮಂ'' ಇತ್ಯಾದಿ ಶ್ರುತಿಯು ಹೇಳುವಂತೆ ಸುಲಭವಾದ ಕರ್ಮದಿಂದಲೇ ಮೋಕ್ಷಸಿಗುವಾಗ ವೈರಾಗ್ಯಾದಿಗಳು ಯಾಕೆ? ಅದು ಬೇಡ. ಆ ಮೋಕ್ಷವಾದರೂ ಬಾಧಕವಿಲ್ಲದಿರುವುದರಿಂದ ಮುಖ್ಯವೇ ಎಂದು ಸಿದ್ಧವಾಗುತ್ತದೆ.

**ಸಿದ್ಧಾಂತ** :- ''ತಮೇವಂ ವಿದ್ವಾನ್'' ಎಂಬ ಶ್ರುತಿಯು ಆತ್ಮಜ್ಞಾನದಿಂದ ಮಾತ್ರ ಮುಖ್ಯವಾದ ಮೋಕ್ಷವಾಗುವುದು ಬೇರೆ ಉಪಾಯಗಳಿಂದ ಶಕ್ಯವಿಲ್ಲ ಎಂದು ಹೇಳುತ್ತದೆ. ಈ ನಿರವಕಾಶಶ್ರುತಿವಿರೋಧ ಬರುವುದರಿಂದ ಅಪಾಮ ಇತ್ಯಾದಿಶ್ರುತಿಯಲ್ಲಿ ಕರ್ಮದಿಂದ ಸಿಗುತ್ತದೆ ಎಂದು ಹೇಳಲ್ಪಟ್ಟ ಮೋಕ್ಷ ಗೌಣ. ಆದ್ದರಿಂದ ಮುಖ್ಯ ಮೋಕ್ಷಕ್ಕಾಗಿ ವೈರಾಗ್ಯಾದಿಗಳು ಬೇಕು. ಕರ್ಮದಿಂದ ಬರುವ ಗೌಣಮೋಕ್ಷವೆಂದರೆ ''ಅಮೃತೋ ವಾವ ಸೋಮಪೋ ಭವತಿ.......ಯಾವದಿಂದ್ರಃ'' ಇತ್ಯಾದಿ ಶ್ರುತಿಯ ಪ್ರಕಾರ ಅಲ್ಪಕಾಲೀನವಾದ ಮುಕ್ತಿ. ಇದು ಕಾಮ್ಯಕರ್ಮಿಗಳಿಗೆ ಹೇಳಿದ್ದು ಅಕಾಮ್ಯಕರ್ಮಿಗಳಿಗೆ ಅವರಲ್ಲೂ ಜಿಜ್ಞಾಸುಗಳಿಗಾದರೆ ''ಅಗನ್ಮ ಜ್ಯೋತಿಃ'' (ಬ್ರಹ್ಮನನ್ನು ತಿಳಿದೆವು) ಎಂದು ಹೇಳಿದ್ದರಿಂದ, ಜ್ಞಾನದ್ವಾರಾ ಮುಖ್ಯಮೋಕ್ಷ.

ನಿಷ್ಕಾಮಕರ್ಮಿಗಳಲ್ಲಿ ಜ್ಞಾನಿಗಳಾದವರಿಗೆ ಅಗ್ನಿಹೋತ್ರಾದಿತು ಇತ್ಯಾದಿ ಸೂತ್ರದಲ್ಲಿ ಮುಂದೆ ಹೇಳುವಂತೆ ಮೋಕ್ಷದಲ್ಲಿ ಆನಂದಾತಿಶಯವೇ ಅಮೃತತ್ವ.

ಜಿಜ್ಞಾಸಾಸೂತ್ರದಲ್ಲಿ ಅಥ ಪದದಿಂದ ಹೇಳಲ್ಪಟ್ಟ ವೈರಾಗ್ಯಾದಿಗಳ ಆಕ್ಷೇಪ ಹಾಗು ಸಮಾಧಾನಗಳೇ ಫಲ

## II ಓಂ ಕೃತಾತ್ಯಯೇ ಅನುಶಯವಾನ್ ದೃಷ್ಟಸ್ಮೃತಿಭ್ಯಾಂ ಓಂ II ೩-೧-೮

ಹಿಂದಿನ ಅಧಿಕರಣದಲ್ಲಿ ಕರ್ಮಜನ್ಯ ಮೋಕ್ಷವು ಗೌಣ ಎಂದು ಹೇಳಲಾಯಿತು. ಇಲ್ಲಿ, ಕರ್ಮದ ಫಲವನ್ನು ಸ್ವರ್ಗದಲ್ಲಿ ಯಾರೂ ಪೂರ್ತಿ ಅನುಭವಿಸಿವುದಿಲ್ಲ. ಏಕದೇಶವನ್ನು ಮಾತ್ರ ಅನುಭವಿಸುತ್ತಾರೆ ಎಂದು ಸಮರ್ಥಿಸಲಾಗಿದೆ. ವೈರಾಗ್ಯಾದಿ ಸಾಧನಗಳು ಬೇಡವೋ ಅಥವಾ ಬೇಕೋ? ಎಂದು ವಿಚಾರ. ಅದಕ್ಕಾಗಿ ಸ್ವರ್ಗದಲ್ಲಿ ಕರ್ಮಫಲದ ಅನುಭವ ಪೂರ್ತಿ ಆಗುತ್ತದೋ ಏಕದೇಶಮಾತ್ರವೋ ಎಂದು ವಿಚಾರ. ಸ್ವಲ್ಪಭಾಗದ್ದು ಮಾತ್ರ ಅನುಭವ ಎಂಬುದಕ್ಕೆ ಪ್ರಮಾಣ ಇಲ್ಲವೋ ಇದೆಯೋ ಎಂದು ವಿಚಾರ.

**ಪೂರ್ವಪಕ್ಷ** :- ''ಕರ್ಮಣಾ ಬಧ್ಯತೇ ಜಂತುಃ'' ಎನ್ನುವ ಪ್ರಮಾಣದಿಂದ ಬಂಧಕ್ಕೆ ಕರ್ಮವೇ ಬೀಜ. ಜೀವನು ಸ್ವರ್ಗಕ್ಕೆ ಹೋದಾಗ ಅವನ ಜೊತೆಗೇ ಇದ್ದ ಕರ್ಮವನ್ನು ಪೂರ್ಣಭೋಗಿಸುತ್ತಾನೆ. ಸ್ವಲ್ಪ ಉಳಿಸುತ್ತಾನೆಂಬುವುದಕ್ಕೆ ಪ್ರಮಾಣವಿಲ್ಲ. ಒಂದು ಪಕ್ಷದಲ್ಲಿ ಉಳಿಸಿತ್ತಾನೆಂದು ಒಪ್ಪಿದರೂ ಎರಡು ಮೂರು ಬಾರಿ ಹೋಗಿ ಬರುವಾಗ ಪೂರ್ತಿ ಅನುಭೋಗ ಆಗುವುದರಿಂದ ಕರ್ಮವೆಂಬ ಬೀಜವೇ ಇಲ್ಲದಂತಾಗಿ ಬಂಧನಿವೃತ್ತಿರೂಪವಾದ ಮೋಕ್ಷವಾಗು- ವುದರಿಂದ ವೈರಾಗ್ಯಾದಿಗಳು ಬೇಕಾಗಿಲ್ಲ.

**ಸಿದ್ಧಾಂತ** :- ''ತತಃ ಶೇಕ್ಷೇಣ ಇಮಂ ಲೋಕಮಾಯಾತಿ'' ಎಂಬ ಶ್ರುತಿಯೂ ಹಾಗೂ ''ಭುಕ್ತಶೇಷಾನುಶಯವಾನ್'' ಎಂಬ ಸ್ಮೃತಿಯೂ ಹೇಳುವಂತೆ ಜೀವನು ಕರ್ಮ ಊಳಿಸಿಕೊಂಡೇ ಭೂಮಿಗೆ ಬರುತ್ತಾನೆ. ಆದರೆ ಇಲ್ಲಿ ಪುನಃ ಕರ್ಮಸಂಗ್ರಹವಾಗುತ್ತದೆ ಅಷ್ಟೇ ಅಲ್ಲ. ಒಂದು ಬಾರಿ ಭೂಮಿಗೆ ಬಂದಾಗ ಕನಿಷ್ಠ ಪಕ್ಷ ಹತ್ತು ಜನ್ಮಕ್ಕೆ ಬೇಕಾಗುವಷ್ಟು ಕರ್ಮಸಂಗ್ರಹವಾಗುತ್ತದೆ. ಆದ್ದರಿಂದ ಎಷ್ಟು ಬಾರಿ ಸ್ವರ್ಗಕ್ಕೆ ಹೋಗಿ ಬಂದರೂ ಕರ್ಮವು ಸಂಪೂರ್ಣ ನಾಶವಾಗುವುದೇ ಇಲ್ಲ. ಅದಕ್ಕಾಗಿ ವೈರಾಗ್ಯಾದಿಗಳು ಬೇಕು.

## ॥ ಓಂ ಯಥೇತಮನೇವಂಚ ಓಂ ॥ ೩-೧-೯

ಪೂರ್ವಾಧಿಕರಣದಲ್ಲಿ ಜೀವನು ಕರ್ಮಶೇಷಸಹಿತನಾಗಿಯೇ ಸ್ವರ್ಗದಿಂದ ಬರುತ್ತಾನೆ ಎಂದು ಹೇಳಿದ್ದರಿಂದ ಹೋದಮಾರ್ಗದಲ್ಲಿಯೇ ಬರುತ್ತಾನೋ ಅಥವಾ ಮಾರ್ಗಾಂತರದಿಂದಲೋ ಎಂದು ಆಕಾಂಕ್ಷಾ (ಜಿಜ್ಞಾಸೆ) ಉಂಟಾ-ಗುತ್ತದೆ. ಅದನ್ನು ಈ ಅಧಿಕರಣದಲ್ಲಿ ಪರಿಹರಿಸಲಾಗುವುದು.

ಈ ಅಧಿಕರಣದಲ್ಲಿ ವೈರಾಗ್ಯ ಬೇಡವೋ ಬೇಕೋ? ಎಂಬ ವಿಚಾರ. ಅದಕ್ಕಾಗಿ ಸ್ವರ್ಗಕ್ಕೆ ಹೋದ ಮಾರ್ಗದಿಂದಲೇ ಬರುತ್ತಾನೋ ಅಥವಾ ಬೇರೆ ಮಾರ್ಗದಿಂದಲೋ? ಎಂದು, ಅದಕ್ಕಾಗಿ ಮಾರ್ಗಸ್ಮರಣೆ ಆಗಮನಕ್ಕೆ ಉಪ-ಯೋಗಿಯೇ ಅಲ್ಲವೇ ಎಂದು, ವಿಚಾರ ಪರಂಪರೆ ನಡೆದಿದೆ. ಮಾರ್ಗಸ್ಮರಣೆ ಬೇಕು ಎನ್ನುವ ಪಕ್ಷದಲ್ಲಿ ಬುದ್ಧಿಸ್ಥವಾದ ಹೋದ ಮಾರ್ಗದಲ್ಲಿಯೇ ಮರಳಿ ಬರಲು ಕ್ಲೇಶವಿಲ್ಲವಾದ್ದರಿಂದ 'ಕರ್ಮವು ಕ್ಲೇಶ ಹೇತು ಆದ್ದರಿಂದ ವೈರಾಗ್ಯ ಬೇಕು' ಎನ್ನುವುದು ಸರಿಯಲ್ಲ. ಮಾರ್ಗಸ್ಮರಣೆ ಅನಗತ್ಯ ಎಂಬ ಪಕ್ಷದಲ್ಲಿ ಬೇರೆ ಮಾರ್ಗದಲ್ಲಿಯೂ ಬರುವ ಸಂಭವವಿರುವುದರಿಂದ ಅದು ಅಪರಿಚಿತವಾದ ಪ್ರಯುಕ್ತ ಕ್ಲೇಶವೂ ಸಂಭಾವಿತವಾದ್ದರಿಂದ ಇಂತಹ ಗಮನಾಗಮನಕ್ಕೆ ಕಾರಣವಾದ ಕರ್ಮದಲ್ಲಿ ವೈರಾಗ್ಯ ಬೇಕೆನ್ನುವುದು ಉಚಿತವಾಗುತ್ತದೆ.

**ಪೂರ್ವಪಕ್ಷ** :- ಪರಿಚಿತ ಮಾರ್ಗವನ್ನು ಬಿಟ್ಟು ಅಪರಿಚಿತ ಮಾರ್ಗದಲ್ಲಿ ಮರಳುತ್ತಾನೆ ಎನ್ನುವುದಕ್ಕೆ ಯಾವ ಸಾಧಕವೂ ಇಲ್ಲ. ಮತ್ತು ಯಥೇತ-ಮಾಗಚ್ಛತಿ ಎಂಬ ಶ್ರುತಿವಿರೋಧವೂ ಬರುವುದರಿಂದ, ಹೋದ-ಮಾರ್ಗದಲ್ಲಿಯೇ ಬರುತ್ತಾನೆಂದು ಹೇಳಬೇಕು ಆದ್ದರಿಂದ ವೈರಾಗ್ಯಾದಿಗಳು ಬೇಕಾಗಿಲ್ಲ.

**ಸಿದ್ಧಾಂತ** :- ಗಮನಾಗಮನಗಳಲ್ಲಿ ಜೀವನಿಗೆ ಸ್ವಾತಂತ್ರ್ಯವಿಲ್ಲ. ಆದ್ದರಿಂದ ಮಾರ್ಗಪರಿಚಯ ಅಥವಾ ಸ್ಮರಣೆಯು ಆಗಮನಕ್ಕೆ ಅನುಪಯುಕ್ತ. ಮತ್ತು ಸ್ವರ್ಗಕ್ಕೆ ಹೋದಮಾರ್ಗದಿಂದಲೇ ಬರುವುದು ಆಕಾಶದವರೆಗೆ ಮಾತ್ರ ಅನಂತರ ಅದರ ಕೆಳಗೆ ಬರುವ ಮಾರ್ಗ ಬದಲಾಗುತ್ತದೆ ಎಂದು ''ಧೂಮಾದಭ್ರಂ'' ಇತ್ಯಾದಿ ಶ್ರುತಿಯು ನಿರೂಪಿಸಿದೆ. ಯಥೇತಂ ಎಂಬ

ಶ್ರುತಿಯಾದರೂ ಹೋದಮಾರ್ಗದಿಂದ ಆಗಮನವನ್ನು ಹೇಳುತ್ತಿದೆಯಾದರೂ ಅದನ್ನು ಸ್ವಲ್ಪ ದೂರದವರೆಗೆ ಮಾತ್ರ ಹೋದಮಾರ್ಗದಿಂದ ಆಗಮನ ಪರ ಎಂದು ಭಾವಿಸಬೇಕು. ಆದ್ದರಿಂದ ಗಮನಪ್ರಕಾರಕ್ಕಿಂತ ಆಗಮನ ವ್ಯತ್ಯಾಸ-ವಾಗುವುದರಿಂದ ಕ್ಲೇಶವಾಗುವ ಪ್ರಯುಕ್ತ ಇದಕ್ಕೆ ಕಾರಣವಾದ ಕರ್ಮದಲ್ಲಿ ವೈರಾಗ್ಯ ಬೇಕು.

## ॥ ಓಂ ಚರಣಾದಿತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ ಓಂ ॥ ೩-೧-೧೦

ಹಿಂದಿನ ಅಧಿಕರಣದಲ್ಲಿ ಗಮನಾಗಮನ ಪ್ರಕಾರವು ನಿರ್ಣೀತವಾಯಿತು. ಈ ಅಧಿಕರಣದಲ್ಲಿ ಅದರ ಸಾಧನವನ್ನು ನಿರ್ಣಯಿಸಲಾಗುವುದು. ಕಾಮ್ಯ-ಕರ್ಮದಲ್ಲಿ ವೈರಾಗ್ಯವು ಬೇಡವೋ ಬೇಕೋ ಎಂಬ ವಿಚಾರ ಅದಕ್ಕಾಗಿ ಗಮನಾಗಮನವು ಆಚಾರದ ಫಲವೋ ಅಥವಾ ಕಾಮ್ಯಕರ್ಮಫಲವೋ ಎಂಬ ವಿಚಾರ, ಅದಕ್ಕಾಗಿ ''ತದ್ಯ ಇಹ....'' ಎಂಬ ಶ್ರುತಿಯಲ್ಲಿ ಚರಣ ಎಂಬ ಪದವು ಕರ್ಮಾಂಗ ಆಚಾರಪರವೋ ಕರ್ಮಪರವೋ ಎಂಬ ವಿಚಾರಗಳು ಈ ಅಧಿಕರಣದಲ್ಲಿ ನಿರ್ಣೀತವಾಗಿವೆ.

**ಪೂರ್ವಪಕ್ಷ** :- ಗಮನಾಗಮನವು ಆಚಾರದಫಲವೇ ಹೊರತು ಕರ್ಮ-ಫಲವಲ್ಲ. ''ತದ್ಯ ಇಹ ರಮಣೀಯಚರಣಾಃ'' ಎಂಬ ಶ್ರುತಿಯಲ್ಲಿ ಗಮನಾ-ಗಮನವನ್ನು ಆಚಾರದ ಫಲವೆಂದೇ ಹೇಳಿದ್ದಾರೆ. ಆಚಾರವೆಂದರೆ ಅದು ಕರ್ಮವೇ ಆಗಿದೆ ಎಂದು ಶಂಕಿಸಬಾರದು ''ಸ ಯಥಾಕಾರೀ ಯಥಾಚಾರೀ'' ಎಂದು ಪ್ರತ್ಯೇಕವಾಗಿ ನಿರ್ದೇಶಿಸಿದ್ದಾರೆ. ಮತ್ತು ''ಆಚಾರ ಇತಿ ಸಂಪ್ರೋಕ್ತಃ ಕರ್ಮಾಂಗತ್ವೇನ ಶುದ್ಧಿದಃ'' ಎಂಬ ಶ್ರುತಿಯಲ್ಲಿ ಆಚಾರವೆಂದರೆ ಕರ್ಮಕ್ಕೆ ಶುದ್ಧಿಯನ್ನುಂಟುಮಾಡುವ ಕರ್ಮಾಂಗವಾದ ಪ್ರತ್ಯೇಕಕ್ರಿಯೆ ಎಂದು ಹೇಳಿದ್ದಾರೆ. ರಮಣೀಯ ಚರಣಾಃ ಎಂಬ ಶ್ರುತಿಯಲ್ಲಿ ಚರಣಪದವು ಲಕ್ಷಣಾವೃತ್ತಿಯಿಂದ ಕರ್ಮಕ್ಕೇ ವಾಚಕಚಾಗಿದೆ ಎಂಬ ಶಂಕೆಯೂ ಸರಿಯಲ್ಲ. ಹಾಗಿದ್ದರೆ ಚರಣಪದವೇ ವ್ಯರ್ಥವಾಗುತ್ತದೆ. ಏಕೆಂದರೆ ಹೇಗಿದ್ದರೂ ಯಜ್ಞಾದಿಕಾರಿಗಳ ವಿಚಾರವೇ ಪ್ರಸ್ತುತವಾದ್ದರಿಂದ ''ಯಜ್ಞಾದಿಕಾರಿಣಃ ರಮಣೀಯಾಂ ಯೋನಿಮಾಪದ್ಯಂತೇ'' ಎಂದು ಚರಣ ಶಬ್ದವಿಲ್ಲದೇ ಹೇಳಿ

ಯಜ್ಞಾದಿಕಾರಿಣಃ ಎಂಬುದರಿಂದಲೇ ಕರ್ಮವನ್ನು ಲಕ್ಷಣಯಾ ಇಟ್ಟುಕೊಳ್ಳಬಹುದಾಗಿತ್ತು. ಆದರೆ ಚರಣ ಪದವನ್ನೇ ಪ್ರಯೋಗಿಸಿದ್ದರಿಂದ ಗಮನಾಗಮನವೂ ಆಚಾರದ್ದೇ ಫಲ.

''ಯ ಇಮೇ ಗ್ರಾಮೇ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಂಭವಂತಿ'' ಎಂಬ ಶ್ರುತಿಯಲ್ಲಿ ಗಮನಾಗಮನವನ್ನು ಯಜ್ಞದ ಫಲವೆಂದೇ ಹೇಳಿದ್ದರಿಂದ ಆದರ ವಿರೋಧ ಎಂಬ ಶಂಕೆಯೂ ಸರಿಯಲ್ಲ. ಅಲ್ಲಿ ಉಪಾಸತೇ ಎಂಬ ಉಪ ಶಬ್ದವು ಸಮೀಪವಾಚಿಯಾದ್ದರಿಂದ ಕರ್ಮಸಮೀಪವರ್ತಿಯಾದ ಆಚಾರದ ಫಲವೆಂದೇ ಭಾವಿಸಬೇಕು.

**ಸಿದ್ಧಾಂತ :-** ''ಇಷ್ಟಾಪೂರ್ತಂ ಮನ್ಯಮಾನಾಃ'' ಇತ್ಯಾದಿಶ್ರುತಿಯಲ್ಲಿ ಹಾಗೂ ''ತ್ರೈವಿದ್ಯಾಮಾಂ ಸೋಮಪಾಃ'' ಎಂಬ ಸ್ಮೃತಿಯಲ್ಲೂ ಹೇಳಿದ್ದರಿಂದ ಗಮನಾಗಮನವು ಕರ್ಮದ್ದೇಫಲ. ''ರಮಣೀಯ ಚರಣಾಃ'' ಎಂಬಲ್ಲಿಯೂ ಚರಣ ಪದದಿಂದ ಲಕ್ಷಣ ಯಾ ಕರ್ಮವನ್ನೇ ಇಟ್ಟುಕೊಳ್ಳಬೇಕು ಸದಾಚಾರ ಮೂಲಕವಾಗಿಯೇ ಯಜ್ಞಾದಿ ಕರ್ಮ ಮಾಡಿದರೆ ರಮಣೀಯತ್ವ ಬರುತ್ತದೆ ಎಂಬುದನ್ನು ಸೂಚಿಸಲು ಚರಣ ಪದವಿದೆ ಅಷ್ಟೇ ಹೊರತು ಗಮನಾಗಮನವು ಆಚಾರದ್ದೇ ಫಲ ಕರ್ಮದ್ದಲ್ಲ ಎಂದು ಭಾವಿಸಬಾರದು. ''ಧರ್ಮಂ ಕುರುತ'' ಎಂಬರ್ಥದಲ್ಲಿ ''ಧರ್ಮಂ ಚರತ'' ಎಂದು ಪ್ರಯೋಗ ಕಂಡಿರುವುದರಿಂದ ಚರಣಶ್ರುತಿಯು ಕರ್ಮಪರವೇ ಆಗಿದೆ. ''ಯ ಇಮೇ'' ಎಂಬ ಶ್ರುತಿಯು ಕರ್ಮಪರವೇ ಆಗಿದೆ. ''ಯ ಇಮೇ'' ಎಂಬ ಶ್ರುತಿಯಲ್ಲಿ ಉಪಾಸತೇ ಎನ್ನುವುದಕ್ಕೆ ಕರ್ಮಸಮೀಪವರ್ತಿ ಆಚಾರ ಎಂದರ್ಥೈಸುವುದು ಅಪ್ರಾಮಾಣಿಕ ಮತ್ತು ಇದೇ ವಿಷಯವನ್ನು ಬೋಧಿಸುವ ''ಅಥ ಯೇ ಯಜ್ಞೇನ ದಾನೇನ ತಪಸಾ ಲೋಕಾನ್ ಜಯಂತಿ ತೇ ಧೂಮಮಭಿಸಂಭವಂತಿ'' ಎಂಬ ಸಮಾನ್ಯ ಶ್ರುತಿಯಲ್ಲಿ ಆಚಾರ ಬೋಧಕ ಶಬ್ದ ಯಾವುದೂ ಇಲ್ಲವಾದ್ದರಿಂದ ಅದರ ವಿರೋಧವೂ ಬರುತ್ತದೆ.. ಆದ್ದರಿಂದ ಕಾಮ್ಯಾಕರ್ಮಗಳಲ್ಲಿ ವೈರಾಗ್ಯ ಆವಶ್ಯಕ.

## || ಓಂ ಅನಿಷ್ಟಾದಿಕಾರಿಣಾಮಪಿಚ ಶ್ರುತಮ್ ಓಂ ||

### ೩-೧-೧೧

ಪೂರ್ವಾಧಿಕರಣದಲ್ಲಿ ಹೇಳಿದಂತೆ ಗಮನಾಗಮನವು ಪುಣ್ಯಕರ್ಮದ ಫಲವಾಗಲಿ. ಆದರೆ ಅದು ಪಾಪ ಕರ್ಮದ ಫಲವಲ್ಲ ಎಂದು ಈ ಅಧಿ ಕರಣದಲ್ಲಿ ಶಂಕಿಸಲಾಗಿದೆ. ಕಾಮ್ಯವಾದ ಪುಣ್ಯಕರ್ಮದಲ್ಲಿ ಮಾತ್ರ ವೈರಾಗ್ಯ-ತಾಳಬೇಕೋ? ಅಥವಾ ಪಾಪಕರ್ಮದಲ್ಲಿಯೂ ವೈರಾಗ್ಯ ಬೇಕೋ? ಅದಕ್ಕಾಗಿ ಗಮನಾಗಮನ ದುಃಖವು ಪುಣ್ಯವಂತರಿಗೆ ಮಾತ್ರವೋ ಅಥವಾ ಪಾಪಿಗಳಿಗೂ ಇದೆಯೇ? ಗಮನಾಗಮನವು ಪಾಪದ ಭಯ(ನರಕಭಯ) ಮತ್ತು ಫಲಕಾಮನಾಪ್ರಯುಕ್ತವೋ ಅಥವಾ ಕರ್ಮಪ್ರಯುಕ್ತವಾಗಿಯೇ ಬರುವಂಥಹುದೋ? ಭಯಾದಿರಹಿತರಾದ ಪಾಪಿಗಳಿಗೂ ಗಮನಾ-ಗಮನದಲ್ಲಿ ಪ್ರಮಾಣ ಇಲ್ಲವೋ ಅಥವಾ ಇದೆಯೋ ಎಂದು ಈ ಅಧಿಕರಣದಲ್ಲಿ ವಿಚಾರಮಾಡಲಾಗಿದೆ. ಭಯಾದಿಹೀನರಾದ ಪಾಪಿಗಳ ಗಮನಗಮನಕ್ಕೆ ಪ್ರಮಾಣವಿಲ್ಲವೆಂದಾದರೆ ಭಯಾದಿಸಹಿತರಾದ ಪುಣ್ಯ-ವಂತರಿಗೆ ಮಾತ್ರ ಗತಾಗತವೆಂದು ಸಿದ್ಧವಾಗುವುದು. ಪ್ರಮಾಣವಿದೆಯೆಂಬ ಪಕ್ಷದಲ್ಲಿ ಪುಣ್ಯವಂತರು ಹಾಗೂ ಪಾಪಿಗಳಿಬ್ಬರಿಗೂ ಗಮನಾಗಮವಿದೆ ಎಂದಾಗುವುದೇ ಈ ವಿಚಾರದ ಫಲ.

**ಪೂರ್ವಪಕ್ಷ :-** ಪುಣ್ಯವಂತರಿಗೆ ಮಾತ್ರ ಗಮನಾಗಮನ ದುಃಖ ಪಾಪ-ಕರ್ಮಮಾಡುವವರಿಗೆ ಇಲ್ಲ. ಏಕೆಂದರೆ ''ಬಿಭ್ಯತ್ ಪತತಿ ಪಾದಪಾತ್'' (ಹೆದರಿದವನು ಮರದಿಂದ ಬೀಳುತ್ತಾನೆ) ಎಂಬ ನ್ಯಾಯದಿಂದ ಭಯ ಉಳ್ಳವರಿಗೆ ಮಾತ್ರ ಪತನಾದಿ ದುಃಖ ಕಂಡುಬಂದಿದೆ. ಪಾಪಕರ್ಮ ಮಾಡುವವರಿಗೆ ನರಕಾದಿ ಅನರ್ಥದ ಭಯ ಇರುವುದಿಲ್ಲ ಮತ್ತು ಅದರ ಕಾಮನೆಯೂ ಇರುವುದಿಲ್ಲ. ''ಕಾಮಾನ್ಯಃ ಕಾಮಯತೇ'' ಎಂಬ ಶ್ರುತಿಯು ಕಾಮಿಗಳಿಗೆ ಮಾತ್ರ ಪುನರಾಗಮನವನ್ನು ಹೇಳುತ್ತದೆ. ಭಯವು ಅಪ್ರಯೋಜಕ ಕರ್ಮವೇ ದುಃಖಪ್ರಯೋಜಕ ಎನ್ನಲು ಆಧಾರವಿಲ್ಲ. ಮತ್ತು ಪುಣ್ಯ-ಕರ್ಮಮಾಡುವವರಿಗೆ ತಾತ್ಕಾಲಿಕವಾದ ಕಾಮ್ಯಪ್ರತಿಬಂಧಾದಿ ಕ್ಲೇಶವಿದೆ. ಆದರೆ ಪಾಪಮಾಡುವವರಿಗೆ ಅಂತಹ ಕ್ಲೇಶವಿಲ್ಲ. ಪ್ರತ್ಯುತ ಸ್ರಕ್ ಚಂದನಾದಿ

ಭೋಗವೇ ಅಧಿಕವಾಗಿರುತ್ತದೆ. ಆದರಿಂದ ಮುಂದಾಗುವ ಪುನರಾಗಮನ ಕ್ಲೇಶ ಅಪ್ರಯೋಜಕವೆನಿಸುತ್ತದೆ. ಆದ್ದರಿಂದ ಪಾಪಕರ್ಮದಲ್ಲಿ ವೈರಾಗ್ಯ ಬೇಕಾಗಿಲ್ಲ.

**ಸಿದ್ಧಾಂತ** :- ''ತದ್ಯ ಇಹ ಶುಭಕೃತಃ ಯೇ ಚ ಅಶುಭಕೃತಃ ತೇ ಶುಭ-ಮನುಭೂಯ ಆವರ್ತಂತೇ'' ಎಂಬ ಶ್ರುತಿಯಲ್ಲಿ ಪುಣ್ಯವಂತರಿಗೆ ಹೇಗೋ ಹಾಗೆ ಪಾಪಕರ್ಮಿಗಳಿಗೂ ಆಗಮನ ಹೇಳಲಾಗಿದೆ. ಮತ್ತು ''ಸರ್ವೇ ವಾ ಏತೇ ಅಶುಭಕೃತಃ ಸಂಯಮನೇ ಪ್ರಪತಂತಿ'' ಎಂಬ ಶ್ರುತಿಯಲ್ಲಿ ಹಾಗೂ ''ಗಚ್ಛಂತಿ ಪಾಪಿನಃ'' ಇತ್ಯಾದಿ ಸ್ಮೃತಿಗಳಲ್ಲಿಯೂ ಕೂಡ ಪಾಪಿಗಳಿಗೆ ನಿತ್ಯನರಕಾದಿ ಅನರ್ಥವನ್ನು ಹೇಳಲಾಗಿದೆ. ಆದ್ದರಿಂದ ಭಗವಂತ ಅಜ್ಞಾನಿ-ಗಳಿಗೆಲ್ಲರಿಗೂ ಆಗಮನಾದಿ ದುಃಖವಿದ್ದೇ ಇದೆ. ಭಯ ಮತ್ತು ಕಾಮನೆ ಇರುವುದಿಲ್ಲ ಎನ್ನುವುದು ಅಪ್ರಯೋಜಕ. ಭಯವೂ ಇಲ್ಲದೇ ಫಲ-ಕಾಮನೆಯೂ ಇಲ್ಲದೇ ವಿಷಭಕ್ಷಣ ಮಾಡಿದಾಗ ಅದರ ಫಲ ಮೃತ್ಯುವು ಕಂಡೇ ಇದೆ. ಆದ್ದರಿಂದ ಪಾಪಕರ್ಮದಲ್ಲಿ ಅತಿಶಯ ವೈರಾಗ್ಯ ಬೇಕು.

## ॥ ಓಂ ಅಪಿ ಸಪ್ತ ಓಂ ॥ ೩-೧-೧೨

''ಯಾವದಿಂದ್ರಾಶ್ಚತುರ್ದಶ'' ಎಂಬ ಪ್ರಮಾಣದ ಪ್ರಕಾರ ನರಕವು ಅನಿತ್ಯವೇ ಆದುದರಿಂದ ಹಿಂದಿನ ಅಧಿಕರಣದಲ್ಲಿ ಹರಿದ್ವೇಷಗಳಿಗೆ ನಿತ್ಯ ನರಕ ಹೇಳಿದ್ದು ಸರಿಯಲ್ಲ ಎಂದು ಈ ಅಧಿಕರಣದಲ್ಲಿ ಆಕ್ಷೇಪ ಮಾಡುವುದರಿಂದ ಸಂಗತಿ ಇದೆ. ಹರಿದ್ವೇಷಾದಿಗಳಲ್ಲಿ ಅತಿಶಯಿತ ವೈರಾಗ್ಯ ಅನಾವಶ್ಯಕವೋ ಆವಶ್ಯಕವೋ?, ನರಕಕ್ಕೆ ಹೋದವರಿಗೆ ಪುನರಾವೃತ್ತಿ ಇದೆಯೋ ಇಲ್ಲವೋ, ನರಕವು ಒಂದೆಯೇ ಅನೇಕವೋ? ಎಂಬ ವಿಚಾರ ಇಲ್ಲಿ ಮಾಡಲಾಗಿದೆ.

**ಪೂರ್ವಪಕ್ಷ** :- ನರಕಗಳನೇಕ ಎಂಬುದಕ್ಕೆ ಪ್ರಮಾಣವಿಲ್ಲವಾದ್ದರಿಂದ ಒಂದೇ ನರಕವಿರುವುದು ಅದೂಕೂಡ ಯಾವದಿಂದ್ರಾಶ್ಚತುರ್ದಶ ಎಂಬ ಪ್ರಮಾಣಾನುಸಾರವಾಗಿ ಅನಿತ್ಯವಾಗಿದೆ. ''ಮಹಾತಮಸಿ ಮಗ್ನಾನಾಂ ನ ತೇಷಾ ಮುತ್ಥಿತಿಃ ಕ್ವಚಿತ್'' ಎಂಬ ಸ್ಮೃತಿಯು ನಿತ್ಯತ್ವವನ್ನೂ ಹೇಳುವುದರಿಂದ ಒಂದೇ ನರಕವು ಕೆಲವರಿಗೆ ನಿತ್ಯ ಕೆಲವರಿಗೆ ಅನಿತ್ಯ ಎಂದು ವ್ಯವಸ್ಥೆ ಮಾಡಲೇ

ಬೇಕಾದ್ದರಿಂದ ದ್ವೇಷಿಗಳಿಗೆ ನರಕ ನಿತ್ಯ ಏನ್ನಬಹುದಲ್ಲ ಎನ್ನುವ ಶಂಕೆಯೂ ಸರಿಯಲ್ಲ. ''ಚಕಾರ ನರಕಂ ಶೂನ್ಯಂ'' ನರಕದಲ್ಲಿ ಯಾರೂ ಇದ್ದಿಲ್ಲ ಎಂಬ ಪ್ರಮಾಣದ ವಿರೋಧ ಬರುವುದರಿಂದ ನರಕವು ಯಾರಿಗೂ ನಿತ್ಯವಲ್ಲ ಎಂದೇ ಹೇಳಬೇಕಾದುದರಿಂದ ದ್ವೇಷಗಳಿಗೆ ನಿತ್ಯನರಕ ಎನ್ನುವುದು ಸರಿಯಲ್ಲ.

**ಸಿದ್ಧಾಂತ** :- ''ಕೌರವೋಥ ಮಹಾಂಶ್ಚೈವ'' ಎಂಬ ಭಾಷ್ಯೋಕ್ತ ಸ್ಮೃತಿ-ಯಲ್ಲಿ ೫ ಅನಿತ್ಯ ನರಕಗಳು, ೨ ನಿತ್ಯನರಕಗಳು ಪ್ರಧಾನ ಎಂದು ಹೇಳಿದ್ದರಿಂದ ''ಯಾವದಿಂದ್ರಾಶ್ಚತುರ್ದಶ'' ಎಂಬುದು ಅನಿತ್ಯ ನರಕಕ್ಕೆ ಸಂಬಂಧಿಸಿದ್ದು ಎನ್ನಬೇಕು. ದ್ವೇಷಿಗಳ ನರಕವು ನಿತ್ಯವೇ ಆದುದರಿಂದ ಅದರಲ್ಲಿ ಅತಿಶಯ-ವೈರಾಗ್ಯ ಆವಶ್ಯಕ.

## ॥ ಓಂ ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ಓಂ ॥ ೩-೧-೧೩

ಪಾಪಕರ್ಮ ಮತ್ತು ದ್ವೇಷಮಾಡುವ ಎರಡು ವಿಧ ಅಧಿಕಾರಿಗಳಿಗೆ ನಿತ್ಯಾ-ನಿತ್ಯನರಕವೇ ಫಲ ಎಂದಾಗಲಿ. ಆದರೆ ಆ ನರಕಗಳು ದುಃಖರೂಪ-ವಲ್ಲವಾದ್ದರಿಂದ, ಆ ನರಕಗಳಿಗೆ ಪಾಪಕರ್ಮಗಳು ಕಾರಣವಾಗಿದ್ದರೂ ಅವುಗಳಲ್ಲಿ ವೈರಾಗ್ಯ ಬೇಕಾಗಿಲ್ಲ ಎಂದು ಶಂಕಿಸಿದ್ದರಿಂದ ಪೂರ್ವಾಧಿಕರಣ ಸಂಗತಿಯು ಬಂದಿದೆ. ಪಾಪಕರ್ಮದಲ್ಲಿ ವೈರಾಗ್ಯವು ಬೇಡವೋ ಬೇಕೋ? ಪಾಪದ ಫಲರೂಪವಾದ ನರಕವು ಅದುಃಖರೂಪವೋ ದುಃಖರೂಪವೋ? ನರಕವು ದುಃಖ ಪ್ರದವೆಂದಾದರೆ ಆ ನರಕದಲ್ಲಿದ್ದು ಅದಕ್ಕೆ ಪ್ರೇರಕನಾದ ಭಗವಂತನಿಗೆ ದುಃಖ ಭೋಗಪ್ರಸಂಗವು ಇದೆಯೇ ಇಲ್ಲವೋ? ಭೋಗವೆಂದರೆ ದುಃಖಸಾಕ್ಷಾತ್ಕಾರ ಮಾತ್ರವೋ? ಅಥವಾ ಅದರಿಂದುಂಟಾಗುವ ನೀಚತ್ವಾದಿಗಳೋ ಎಂಬ ವಿಚಾರಗಳು ಈ ಅಧಿಕರಣದಲ್ಲಿ ಮಾಡಲ್ಪಟ್ಟಿವೆ.

**ಪೂರ್ವಪಕ್ಷ** :- ದುಃಖಭೋಗ ಎಂದರೆ ದುಃಖದ ಸಾಕ್ಷಾತ್ಕಾರ ನರಕಸ್ಥ ಜೀವರಿಗೆ ದುಃಖವನ್ನೊಪ್ಪಿದರೆ ಅದಕ್ಕೆ ಪ್ರೇರಕನಾದ ಪರಮಾತ್ಮನಿಗೂ ದುಃ ಖದ ಸಾಕ್ಷಾತ್ಕಾರ ಒಪ್ಪಬೇಕಾಗುವುದರಿಂದ ಅವನಿಗೂ ದುಃಖಭೋಗ ಪ್ರಸಂಗ ಬರುವುದರಿಂದ ನರಕವು ದುಃಖ ರೂಪವಲ್ಲ. ಅವನು ನರಕಸ್ಥ ಜೀವರಿಗೆ

ಪ್ರೇರಕನೇ ಅಲ್ಲವಾದ್ದರಿಂದ ಈ ಪ್ರಸಂಗ ಇಲ್ಲ ಎಂದು ಶಂಕಿಸಬಾರದು ''ಸರ್ವಂ ಪ್ರೇರಯತಿ'' ಎಂಬ ಭಾಷ್ಯೋಕ್ತ ಶ್ರುತಿ ವಿರೋಧ ಬರುತ್ತದೆ. ಆದ್ದರಿಂದ ಪಾಪಕರ್ಮದಲ್ಲಿ ವೈರಾಗ್ಯ ಬೇಕಾಗಿಲ್ಲ.

**ಸಿದ್ಧಾಂತ** :- ''ನೀಚೋಚ್ಚತ್ವೈವ ದುಃಖಾದೇಃ ಭೋಗ ಇತ್ಯಭಿಧೀಯತೇ'' ಎಂಬ ಸ್ಮೃತಿಯ ಪ್ರಕಾರ ನೀಚೋಚ್ಚತ್ವವೇ ಭೋಗ ಹೊರತು ಕೇವಲ ಸಾಕ್ಷಾತ್ಕಾರವಲ್ಲ. ಭಗವಂತನು ನರಕದಲ್ಲಿ ಪ್ರೇರಕನಾಗಿದ್ದರೂ ಅವನಿಗೆ ದುಃಖದ ಸಾಕ್ಷಾತ್ಕಾರವಿದ್ದರೂ ನಿರ್ವಿಕಾರ ಹಾಗೂ ಅಚಿಂತ್ಯ ಶಕ್ತಿಯುತನಾದ್ದರಿಂದ ನೀಚತ್ವಾದಿಗಳ ಪ್ರಸಂಗವಿಲ್ಲ. ಇದು ''ನಾಸೌ ದುಃಖಭುಕ್'' ಎಂಬ ಪ್ರಮಾಣ ಸಿದ್ಧವಾಗಿದೆ. ಆದ್ದರಿಂದ ನರಕವು ದುಃಖರೂಪವೇ ಆದ ಪ್ರಯುಕ್ತ ಪಾಪಕರ್ಮದಲ್ಲಿ ವೈರಾಗ್ಯ ಅತ್ಯವಶ್ಯಕ.

## ।। ಓಂ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ಓಂ ।।
## ೩-೧-೧೪

ವೈರಾಗ್ಯ ಸಮರ್ಥನೆಗಾಗಿ ನರಕದಲ್ಲಿ ದುಃಖ ಒಪ್ಪುವುದು ಬೇಕಾಗಿಲ್ಲ. ಗಮನಾಗಮನ ನರಕ ಇತ್ಯದಿ ಫಲಗಳ ವಿಷಯದಲ್ಲಿ ಜೀವರಿಗೆ ಸ್ವಾತಂತ್ರ್ಯ ಇರುವುದರಿಂದಲೇ ಆದರ ತ್ಯಾಗ ಉಪಾದಾನಗಳು ಶಕ್ಯವಿರುವಾಗ ಅದಕ್ಕಾಗಿ ವೈರಾಗ್ಯ ಬೇಕಾಗಿಲ್ಲ ಎಂದು ಈ ಅಧಿಕರಣದಲ್ಲಿ ಶಂಕಿಸಿದ್ದರಿಂದ ಸಂಗತಿ ಇದೆ. ವೈರಾಗ್ಯವು ಬೇಡವೋ ಬೇಕೋ? ಜೀವರಿಗೆ ಗಮನಾಗಮನಗಳಲ್ಲಿ ಸ್ವಾತಂತ್ರ್ಯವಿದೆಯೋ ಇಲ್ಲವೋ? ''ಅಥ ಏತಯೋಃ ಪಥೋಃ'' ಎಂಬ ಶ್ರುತಿಯಲ್ಲಿ ಏತಯೋಃ ಎಂಬ ಪದವು ದೇವಯಾನ -ಪಿತೃಯಾನ ಮಾರ್ಗಪರಾಮರ್ಶಕವೋ ಅಥವಾ ವಿದ್ಯಾ-ಕರ್ಮಗಳ ಪರಾಮರ್ಶಕವೋ? ಎಂಬ ವಿಚಾರವು ಇಲ್ಲಿ ಮಾಡಲ್ಪಟ್ಟಿದೆ.

**ಪೂರ್ವಪಕ್ಷ** :- ಗಮನಾಗಮನಗಳಲ್ಲಿ (ಫಲದಲ್ಲಿ) ಜೀವರಿಗೆ ಸ್ವಾತಂತ್ರ್ಯವಿರುವುದರಿಂದ ಅದರ ಪರಿಹಾರಕ್ಕಾಗಿ ವೈರಾಗ್ಯ ಬೇಕಾಗಿಲ್ಲ. ಛಾಂದೋಗ್ಯದಲ್ಲಿ 'ತೇ ಅರ್ಚಿಷಮಭಿಸಂಭವಂತಿ,' 'ತೇ ಧೂಮಮಭಿ-

ಸಂಭವಂತಿ' ಎಂದು ಪೂರ್ವದಲ್ಲಿ ಪ್ರಕೃತವಾದ ದೇವಯಾನ ಪಿತೃಯಾನ ಮರ್ಗಗಳನ್ನೇ 'ಅಥ ಏತಯೋಃ ಪಥೋಃ' ಎಂಬ ಉತ್ತರ ವಾಕ್ಯದಲ್ಲಿ ಪರಾಮರ್ಶಮಾಡಿ 'ನ ಏಕತರೇಣಗಚ್ಛಂತಿ' ಈ ದೇವಯಾನ ಅಥವಾ ಪಿತೃಯಾನಗಳ ಪೈಕಿ ಯಾವುದರಲ್ಲೂ ಹೋಗದಿದ್ದವರು ಕ್ಷುದ್ರ ಯೋನಿಯಲ್ಲಿ ಜನಿಸುವರು ಎಂದು ಜೀವರಿಗೆ ಆ ಮಾರ್ಗದಲ್ಲಿ ಸ್ವಾತಂತ್ರ್ಯ ಹೇಳಲಾಗಿದೆ. ಇಲ್ಲದಿದ್ದರೆ ಗಚ್ಛತಿ ಎಂಬ ಪ್ರಯೋಗವೇ ಯುಕ್ತವಾಗಲಾರದು. ಯದ್ಯಪಿ ಇತರವ್ಯಪದೇಶಾತ್ ಎಂಬಲ್ಲಿ ಜೀವರಿಗೆ ಸ್ವಾತಂತ್ರ್ಯ ನಿಷೇಧ ಮಾಡಿದ್ದಾರೆ. ಆದರೂ ಈಶಾಧೀನವಾದ ದತ್ತ ಸ್ವಾತಂತ್ರ್ಯ ಇದ್ದೇ ಇದೆ. 'ಕರ್ತಾ-ಶಾಸ್ತ್ರಾರ್ಥವತ್ವಾತ್' ಎಂಬಲ್ಲಿ ವಿಧಿನಿಷೇಧ ಸಾರ್ಥಕ್ಯಕ್ಕೋಸ್ಕರ ಸಾಧನದಲ್ಲಿ ಜೀವರಿಗೆ ಸ್ವಾತಂತ್ರ್ಯವನ್ನು ಅಂಗೀಕರಿಸಿದ್ದಾರೆ. ಸಾಧನದಲ್ಲಿ ಸ್ವಾತಂತ್ರ್ಯವಿದ್ದ ಮೇಲೆ ಫಲದಲ್ಲಿ ಒಪ್ಪಬೇಕು. ಫಲದಲ್ಲಿ ಸ್ವಾತಂತ್ರ್ಯ ಒಪ್ಪಿದ್ದರೆ ಎಲ್ಲರಿಗೂ ಸದ್ಗತಿಯೇ ಆಗಲಿ ಎಂಬ ಆಪತಿಯು, ಸಾಧನಸ್ವಾತಂತ್ರ್ಯ ಪಕ್ಷದಲ್ಲಿಯೂ ಇದ್ದೇ ಇದೆ. ಅದೃಷ್ಟವನ್ನೂ ಒಪ್ಪಿ ಈ ಆಪತ್ತಿಯನ್ನು ಪರಿಹರಿಸಿಕೊಳ್ಳುವುದು ಫಲಸ್ವಾತಂತ್ರ್ಯ ಪಕ್ಷಕ್ಕೂ ಸಮಾನವೇ ಆಗಿದೆ. ಹೀಗೆ ಬುಡದಲ್ಲಿಯೇ ಫಲ ಸಿಗುವಾಗ ಶಾಖಾಗ್ರಕ್ಕೆ ಯಾರೂ ಹೋಗುವುದಿಲ್ಲ ಎಂಬ ನ್ಯಾಯದಿಂದ ಫಲ ದಲ್ಲೇ ಸ್ವಾತಂತ್ರ್ಯವಿರುವಾಗ ವೈರಾಗ್ಯಾದಿಗಳು ಯಾಕೆ ಬೇಕು?

**ಸಿದ್ಧಾಂತ** :- ''ಅಥ ಏತಯೋಃ ನೈಕತರೇಣ ಗಚ್ಛಂತಿ'' ಎಂಬಲ್ಲಿ 'ಏತಯೋಃ' ಎಂಬುದರಿಂದ ವಿದ್ಯಾ-ಕರ್ಮಗಳನ್ನು ಪರಾಪರ್ಶಿಸಲಾಗಿದೆ. ಅವುಗಳೂ ಕೂಡ ಪೂರ್ವದಲ್ಲಿ ''ತದ್ಯ ಇತ್ಥಂ ವಿದುಃ'' ಎಂದು ಮತ್ತು ''ಇಷ್ಟಾ ಪೂರ್ತೇ'' ಎಂದು ಪ್ರಸ್ತುತವಾಗಿವೆ. ಮಾರ್ಗಗಳೂ ಪ್ರಸ್ತುತವೆ. ಆದರೆ ''ಏತಯೋಃ ಪಥೋಃ'' ಎಂಬುದಕ್ಕೆ ''ವಿದ್ಯಾಪಥಃ ಕರ್ಮಪಥಃ ದ್ವೌ ಪಂಥಾನೌ ಪ್ರಕೀರ್ತಿತೌ'' ಎಂದು ಸಮಾಖ್ಯಾ ಶ್ರುತಿಯೂ ಇದೆ. ಆದ್ದರಿಂದ ಪರಮಾತ್ಮನು ವಿಧಿನಿಷೇಧ ಶಾಸ್ತ್ರಸಾರ್ಥಕ್ಯಕ್ಕೋಸ್ಕರ ಜೀವರಿಗೆ ಸಾಧನದಲ್ಲಿ ಮಾತ್ರ ಸ್ವತಂತ್ರ್ಯ ಕೊಟ್ಟಿದ್ದಾನೆ ಹೊರತು ಫಲದಲ್ಲಿ ಅಲ್ಲ. ಹೀಗಾಗಿ ದುಃಖಾದಿ ಪರಿಹಾರಕ್ಕೋಸ್ಕರ ಕಾಮ್ಯಕರ್ಮದಲ್ಲಿ ವೈರಾಗ್ಯ ಆವಶ್ಯಕ.

## ॥ ಓಂ ನ ತೃತೀಯೇ ತಥೋಪಲಬ್ಧೇಃ ಓಂ ॥ ೩-೧-೧೫

ಪೂರ್ವಾಧಿಕರಣದಲ್ಲಿ ''ತಿರ್ಯಗ್ನ್ವಾನರಕಂ ತಮಃ'' ಎಂದು ಪ್ರಸ್ತುತ-ವಾದ ತಮಸ್ಸಿನ ಸ್ವರೂಪದ ಬಗ್ಗೆ ಇಲ್ಲಿ ವಿಚಾರ ಮಾಡಿದ್ದರಿಂದ ಪೂರ್ವಾಧಿಕರಣ ಸಂಗತಿ ಇದೆ.

ಭಗವದ್‌ದ್ವೇಷದ ಫಲವಾದ ತಮಸ್ಸಿನಲ್ಲಿ ಅತಿಶಯ ವೈರಾಗ್ಯ ಬೇಡವೋ ಬೇಕೋ? ತಮಸ್ಸು ಇತರ ನರಕದಂತೆ ಸುಖದುಃಖ ಮಿಶ್ರವೋ ಅಥವಾ ಕೇವಲ ದುಃಖರೂಪವೋ, ದುಃಖವು ನಿಯಮೇನ ಸುಖಸಹಚರಿತವೋ ಅಥವಾ ಅಲ್ಲವೋ? 'ಯತ್ರ ದುಃಖಂ ತತ್ರ ಸುಖಂ' ಎಂಬ ವ್ಯಾಪ್ತಿ-ಗ್ರಾಹಕಪ್ರಮಾಣಕ್ಕೆ ತಮಸ್ಸಿನಲ್ಲಿ ಅಪವಾದ ಇಲ್ಲವೋ ಅಥವಾ ಇದೆಯೇ? ಎಂಬ ವಿಚಾರಗಳು ಇಲ್ಲಿ ಮಾಡಲ್ಪಟ್ಟಿವೆ.

**ಪೂರ್ವಪಕ್ಷ** :- ಬೇರೆಯವರ ಸುಖದುಃಖಗಳು ಅತೀಂದ್ರಿಯವಾದ್ದರಿಂದ ಪ್ರತ್ಯಕ್ಷವಲ್ಲ.ಆದರೂ ''ಯತ್ರ ದುಃಖಂ ಸುಖಂ ತತ್ರ'' ಎಂಬ ಸ್ಮೃತಿಯಿಂದ ಯತ್ರ ದುಃಖಂ ತತ್ರಸುಖಂ ವ್ಯಾಪ್ತಿಯು ಸಿದ್ಧವಾಗುವುದರಿಂದ ದುಃಖವುಳ್ಳ ತಮಸ್ಸಿನಲ್ಲಿಯೂ ಸುಖವನ್ನು ಅನುಮಾನದಿಂದ ಸಾಧಿಸಬಹುದು ತಮಸ್ಸಿನ ವಿಷಯದಲ್ಲಿ ವ್ಯಾಪ್ತಿಗೆ ಅಪವಾದವೇನೂ ಕಂಡಿಲ್ಲ. ಆದ್ದರಿಂದ ಇತರ ನರಕಕ್ಕಿಂತ ತಮಸ್ಸಿನಲ್ಲಿ ಅತಿಶಯ ವೈರಾಗ್ಯ ಬೇಡ.

**ಸಿದ್ಧಾಂತ** :- ತಮಸ್ಸು ಕೇವಲ ದುಃಖರೂಪ ಎಂಬುದು ಶ್ರುತಿಸ್ಮತಿ ಪ್ರತ್ಯಕ್ಷ ಅನುಮಾನ ಅರ್ಥಾಪತ್ತಿಗಳಿಂದ ಸಿದ್ಧವಾಗಿದೆ. ಹೇಗೇಂದರೆ

೧) ನ ತಮಃ ಸುಖಾನುವೃತ್ತಂ..... ತಮಸ್ಸಿನಲ್ಲಿ ಸುಖವಿಲ್ಲ ಎಂದು ಶ್ರುತಿ.

೨) ನಾಂಧೇತಮಸಿ ಮಗ್ನಾನಾಂ..... ಅಂಧಂತಮಸ್ಸಿನಲ್ಲಿ ಮುಳುಗಿದವರಿಗೆ ಲೇಶವೂ ಸುಖವಿಲ್ಲ ಎಂದು ಸ್ಮೃತಿ

೩) ನಾರಾಯಣ ಪ್ರಸಾದೇನ ಇತ್ಯಾದಿ ಸ್ಮೃತಿಸಿದ್ಧವಾದ ಚತುರ್ಮುಖನ ಪ್ರತ್ಯಕ್ಷ

೪) ಎಲ್ಲವೂ ಭಗವದಿಚ್ಛಾಧೀನ. ಮೊಲಕ್ಕೆ ಕೋಡಿರಲಿ ಎಂದು ಭಗವಂತನ ಇಚ್ಛೆ ಇಲ್ಲ. ಆದ್ದರಿಂದ ಮೊಲಕ್ಕೆ ಕೋಡಿಲ್ಲ. ಅದರಂತೆ ತಮಸ್ಸಿನಲ್ಲಿರುವವರಿಗೆ ಸುಖವಿರಲಿ ಎಂದು ಭಗವದಿಚ್ಛೆ ಇಲ್ಲ. ಆದ್ದರಿಂದ ಸುಖವಿಲ್ಲ. ಯಾಕೆ ಭಗವದಿಚ್ಛೆ ಇಲ್ಲವೆಂದರೆ ಯಾರೂಕೂಡ ಅಪ್ರಿಯರಿಗೆ ಸುಖ ಬಯಸುವುದಿಲ್ಲ. ರಾಜನು ಶತ್ರುಗಳಿಗೆ ಸುಖಬಯಸುವುದಿಲ್ಲ. ಅದರಂತೆ ಭಗವಂತನು ತನ್ನ ದ್ವೇಷಿಗಳಾದ್ದರಿಂದ ಅಪ್ರಿಯರಾದ ತಾಮಸರಿಗೆ ಸುಖವಾಗಲೆಂದು ಬಯಸುವುದಿಲ್ಲ.

೫) ''ಮಹಾತಮಸ್ತ್ರಿಧಾ'' ಎಂಬ ಸ್ಮತಿಯು ತಮಸ್ಸಿನ ವಿಚಾರ ಶ್ರವಣ-ಮಾಡಿದವರಿಗೇ ದುಃಖಾಧಿಕ್ಯದಿಂದ ಮೂರ್ಛೆ ಉಂಟಾಗುತ್ತದೆಂದು ಹೇಳಿದೆ. ಇದರಿಂದ ಅರ್ಥಾತ್ ತಮಸ್ಸು ಕೇವಲ ದುಃಖರೂಪವೆಂದು ಸಿದ್ಧವಾಗುತ್ತದೆ. ಯತ್ರ ದುಃಖಂ ಸುಖಂ ತತ್ರ ಎಂಬ ಸ್ಮೃತಿಯು ತಮಸ್ಸನ್ನು ಬಿಟ್ಟು ಇತರ ನರಕಗಳಿಗೆ ಸಂಬಂಧಿಸಿದ್ದೆಂದು ತಿಳಿಯಬೇಕು. ಆದ್ದರಿಂದ ಅತಿಶಯವೈರಾಗ್ಯವು ತಮಸ್ಸಾಧನದಲ್ಲಿ (ದ್ವೇಷದಲ್ಲಿ) ಆವಶ್ಯಕ.

## ॥ ಓಂ ತತ್ಸ್ವಾಭಾವ್ಯಾಪತ್ತಿರುಪಪತ್ತೇಃ ಓಂ ॥ ೩-೧-೧೬

ದುಃಖಹೇತುವಾದ ಪಾಪಕರ್ಮದಲ್ಲಿ ಮತ್ತು ಅದರ ಫಲದಲ್ಲಿ ವೈರಾಗ್ಯ-ವಿರಲಿ. ಆದರೆ ಸುಖಹೇತುವಾದ ಕಾಮ್ಯಕರ್ಮದಲ್ಲಿ ಮತ್ತು ಸುಖರೂಪವಾದ ಫಲದಲ್ಲಿ ಏಕೆ ವೈರಾಗ್ಯ? ಎಂದು ಶಂಕಾಮಾಡಿದ್ದರಿಂದ ಈ ಅಧಿಕರಣವು ಸಂಗತವಾಗಿದೆ. ಕಾಮ್ಯಕರ್ಮದಲ್ಲಿ ವೈರಾಗ್ಯ ಆಯುಕ್ತವೋ ಯುಕ್ತವೋ, ಕರ್ಮವು ಮಹಾಸುಖಹೇತುವೋ ಅಲ್ಲವೋ, ಕರ್ಮಿಗಳಿಗೆ ಸ್ವರ್ಗದಿಂದ ಮರಳಿ ಬರುವಾಗ ಧೂಮೋಭೂತ್ವಾ ಎಂಬಲ್ಲಿ ಶ್ರುತವಾದ ಧೂಮಾಧಿ ಭಾವವೆಂದರೆ ಧುಮಾದಿ ದೇವತಾ ಐಕ್ಯ ಮತ್ತು ಆಯಾದೇವ ಪದವೀ ಪ್ರಾಪ್ತಿಗಳಲ್ಲಿ ಒಂದೋ? ಅಥವಾ ಆಯಾ ದೇವತಾಸಾದೃಶ್ಯ ರೂಪವೋ, ಧೂಮೋ ಭವತಿ ಎಂಬ ಐಕ್ಯವ್ಯವಹಾರ ಮುಖ್ಯವೋ ಅಥವಾ ಸಾದೃಶ್ಯ-ರೂಪದಿಂದ ಗೌಣವೋ, ಮುಖ್ಯಾರ್ಥಕ್ಕೆ ಬಾಧಕ ಇಲ್ಲವೋ ಅಥವಾ ಇದೆಯೋ ಎಂಬ ವಿಷಯಗಳು ಈ ಅಧಿಕರಣದಲ್ಲಿ ಚರ್ಚಿತವಾಗಿದೆ.

**ಪೂರ್ವಪಕ್ಷ** :- ಧೂಮಾದಿಭಾವವೆಂದರೆ ಧೂಮಾದಿ ದೇವತಾಐಕ್ಯ-ವಾಗಬಹುದು. ಮುಖ್ಯಾರ್ಥತ್ಯಾಗಕ್ಕೆ ಕಾರಣವಾದ ಬಾಧಕವೇನೂ ಇಲ್ಲ. ದೇವತಾ ಪದವೀ ಪ್ರಾಪ್ತಿಯೂ ಆಗಬಹುದು. ಜ್ಞಾನದಿಂದಲೇ ಪಡೆಯ-ಬೇಕಾದ ಆ ಪದವಿಯನ್ನು ಕರ್ಮಿಗಳಿಗೂ ಕೂಡ ದೇವತೆಗಳು ಸ್ನೇಹದಿಂದ ಕೂಡಲು ಸಾಧ್ಯವಿರುವುದರಿಂದ ಪದವೀ ಪ್ರಾಪ್ತಿಯು ಅಸಂಭಾವಿತವೇನಲ್ಲ. ಹೀಗಾಗಿ ಇಂತಹ ಸುಖಹೇತುವಾದ ಕಾಮ್ಯಕರ್ಮದಲ್ಲಿ ವೈರಾಗ್ಯ ಸರಿಯಲ್ಲ.

**ಸಿದ್ಧಾಂತ** :- ಲೋಕದಲ್ಲಿ ಒಬ್ಬ ಮತ್ತೊಬ್ಬನಾಗುವುದು ಎಲ್ಲೂ ಕಂಡಿಲ್ಲವಾದ ಪ್ರಯುಕ್ತ ಅತ್ಯಂತ ಭಿನ್ನನಾದ ಕರ್ಮಿಗೆ ದೇವತೈಕ್ಯ ಬರುವುದು ಅತ್ಯಂತ ಅಯುಕ್ತ ಮತ್ತು ದೇವತಾ ಪದವಿಯೂ ಕೂಡ ನಿಯತಾಧಿಕಾರಿಗೆ ಮಾತ್ರ ಲಭ್ಯ ಅದೂ ಜ್ಞಾನದಿಂದ ಮಾತ್ರ. ಹಾಗೆಯೇ ಅನೇಕ ಜೀವರು ಕರ್ಮ-ಮಾಡಿದಾಗ ಎಲ್ಲರಿಗೂ ಒಂದು ಪದವಿ ಶಕ್ಯವಿಲ್ಲವಾದ್ದರಿಂದಲೂ ಪದವೀ ಪ್ರಾಪ್ತಿಯು ಅಯುಕ್ತ. ಹೀಗೆ ಮುಖ್ಯಾರ್ಥಕ್ಕೆ ಬಾಧ ಇರುವ ಪ್ರಯುಕ್ತ ಧೂಮೋ ಭವತಿ ಎಂಬುದಕ್ಕೆ ''ತದ್ಗತೌ ಗತಿರೇವಚ'' ಎಂಬ ಸ್ಮೃತಿಯ ಪ್ರಕಾರವಾಗಿ ದೇವತೆಗಳ ಗಮನವಾದಾಗ ಕರ್ಮಿಗಳಿಗೂ ಗಮನ ಇತ್ಯಾದಿ ರೂಪ ದೇವತಾ ಸಾದೃಶ್ಯ ಪರತ್ವವನ್ನು ಹೇಳಬೇಕು. ಅಥವಾ ದೇವತಾ-ಪ್ರವೇಶದ ಮೂಲಕ ಸ್ಥಾನೈಕ್ಯ ಪರತ್ವವನ್ನು ಹೇಳಬೇಕು. ಹಾಗಾಗಿ ಕಾಮ್ಯ-ಕರ್ಮವು ಮಹಾಸುಖಕ್ಕೆ ಕಾರಣವಲ್ಲವಾದ್ದರಿಂದ ಅದರಲ್ಲಿ ವೈರಾಗ್ಯ ಬೇಕು.

## ।। ಓಂ ನಾತಿಚಿರೇಣ ವಿಶೇಷಾತ್ ಓಂ ।। ೩-೧-೧೭

ಪೂರ್ವಾಧಿಕರಣದಲ್ಲಿ - ಸ್ವರ್ಗದಿಂದ ಮರಳಿಬರುವಾಗ ಕರ್ಮಿಜೀವರಿಗೆ ಉಂಟಾಗುವ ಧುಮಾದಿಭಾವವೆಂದರೇನು? ಎಂಬುದನ್ನು ಚರ್ಚಿಸಲಾಯಿತು. ಈ ಅಧಿಕರಣದಲ್ಲಿ ಎಷ್ಟು ಸಮಯದಲ್ಲಿ ಭೂಮಿಯನ್ನು ತಲುಪುತ್ತಾರೆ ಎಂಬುದನ್ನು ವಿಚಾರ ಮಾಡಲಾಗಿದೆ ಎಂದು ಸಂಗತಿ. ಅಥವಾ ಧೂಮಾದಿ-ದೇವತಾಶರೀರದಲ್ಲಿ ಪ್ರವೇಶಿಸಿ ಚಿರಕಾಲ ಮಹಾಸುಖ ಅನುಭವಿಸಬಹು-ದಾದ್ದರಿಂದ ಕಾಮ್ಯಕರ್ಮದಲ್ಲಿ ವೈರಾಗ್ಯವೇಕೆ ಬೇಕು? ಎಂದು ಶಂಕಿಸಿದ್ದರಿಂದ ಸಂಗತಿ. ಕಾಮ್ಯ ಕರ್ಮದಲ್ಲಿ ವೈರಾಗ್ಯ ಅಯುಕ್ತವೋ ಯುಕ್ತವೋ, ಅದು ಮಹಾಸುಖ ಹೇತುವೋ ಅಲ್ಲವೋ, ಭೂಮಿತನ್ನು ತಲುಪಲು ಇಷ್ಟುಕಾಲ

ಎಂಬ ನಿಯಮ ಇಲ್ಲವೋ ಅಥವಾ ಇದೆಯೋ ಎಂಬ ವಿಚಾರಗಳೂ ಇಲ್ಲಿ ನಿರ್ಧರಿಸಲ್ಪಟ್ಟಿವೆ.

**ಪೂರ್ವಪಕ್ಷ** :- ಸ್ವರ್ಗದಿಂದ ಮರಳಿ ಬರುವಾಗ ಇಷ್ಟು ಸಮಯದಲ್ಲೇ ಭೂಮಿಯನ್ನು ತಲುಪಬೇಕೇಂಬ ನಿಯಮವಿಲ್ಲದ್ದರಿಂದ, ಮತ್ತು ''ಯಥೇತ-ಮಾಕಾಶಂ'' ಇತ್ಯಾದಿಯಾಗಿ ಅನೇಕ ಸ್ಥಾನಪ್ರಾಪ್ತಿಶ್ರುತವಾದ್ದರಿಂದ, ಆಯಾ-ದೇವತಾಪ್ರವೇಶದಿಂದ ಬರುವ ಮಹಾಸುಖವನ್ನು ಬಿಟ್ಟು ಬೇಗನೇ ಬರಲು ಯಾವ ಕಾರಣವೂ ಇಲ್ಲದ್ದರಿಂದ, ಕಲ್ಪಾಂತದವರೆಗೂ ಮಾರ್ಗದ ಮಧ್ಯದಲ್ಲಿ ಮಹಾಸುಖವನ್ನು ಅನುಭವವಿಸಲು ಕಾರಣವಾದ ಕಾಮ್ಯಕರ್ಮದಲ್ಲಿ ವೈರಾಗ್ಯತಾಳುವುದು ಸರಿಯಲ್ಲ.

**ಸಿದ್ಧಾಂತ** :- ಸತ್ಕರ್ಮಮಾಡಿದವರು ಕೂಡಲೇ ಉತ್ತಮ ಯೋನಿಯಲ್ಲಿ ಹುಟ್ಟುತ್ತಾರೆ ಎಂದು ಹೇಳುವ ''ತದ್ಯ ಇಹ ರಮಣೀಯ'' ಎಂಬ ಶ್ರುತಿ ಇರುವುದರಿಂದ ಮತ್ತು ಸ್ವರ್ಗಲೋಕದಿಂದ ಒಂದು ವರ್ಷದೊಳಗೆ ಭೂಮಿಗೆ ಬರುತ್ತಾನೆ ಎಂದು ಹೇಳುವ ''ಸ್ವರ್ಗಾಲ್ಲೋಕಾದವಾಪ್ನೋತಿ'' ಎಂಬ ಸ್ಮೃತಿಯೂ ಇರುವುದರಿಂದ ಕಾಲನಿಯಮವಿದೆ. ಹೆಚ್ಚು ಕಾಲ ಮಾರ್ಗ-ಮಧ್ಯದಲ್ಲಿರಲು ಅವಕಾಶವಿಲ್ಲ. ಜೀವರಿಗೆ ಅಲ್ಲಿರುವುದು ಇಷ್ಟವಾಗಿದ್ದರೂ ಅವರಿಗೆ ಸ್ವಾತಂತ್ರ್ಯವಿಲ್ಲ. ಸ್ವಾತಂತ್ರ್ಯವಿದ್ದಿದ್ದರೆ ಯಾರಿಗೂ ದುಃಖವೇ ಆಗುತ್ತಿದ್ದಿಲ್ಲ. ಆದ್ದರಿಂದ ಕಾಮ್ಯಕರ್ಮವು ಮಹಾಸುಖಕ್ಕೆ ಕಾರಣವಲ್ಲದ ಪ್ರಯುಕ್ತ ವೈರಾಗ್ಯ ಅವಶ್ಯಕ.

## ॥ ಓಂ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ಓಂ ॥
## ೩-೧-೧೮

ಪೂರ್ವಾಧಿಕರಣದಲ್ಲಿ ಶ್ರುತ್ಯಾದಿ ಪ್ರಮಾಣಗಳಿಂದ ಕರ್ಮಿಗಳು ಶೀಘ್ರ-ದಲ್ಲಿಯೇ ಮರಳಿ ಬರುತ್ತಾರೆಂದು ಹೇಳಿದ್ದು ಸರಿಯಲ್ಲ ಶ್ರುತಿಯಲ್ಲೇ ವಿಶ್ವಾಸವಿಲ್ಲದ್ದರಿಂದ ಎಂದು ಶಂಕೆಮಾಡಿದ್ದರಿಂದ ಈ ಅಧಿಕರಣ ಸಂಗತ.

ವೈರಾಗ್ಯವು ಬೇಡವೋ ಬೇಕೋ ''ನಿರ್ವೇದಮಾಯಾತ್'' ಎಂಬ ವೈರಾಗ್ಯವಿಧಾಯಕಶ್ರುತಿಯಲ್ಲಿ ವಿಶ್ವಾಸವು ಅಯುಕ್ತವೋ ಯುಕ್ತವೋ,

ವೇದವು ಕೆಲವು ಭಾಗದಲ್ಲಿ ಫಲವ್ಯಭಿಚಾರಿ ಆಗಿದೆಯೋ ಇಲ್ಲವೋ, ವೇದದಿಂದ ಸುಖಹೇತುವಾಗಿ ಹೇಳಲ್ಪಟ್ಟ ಕರ್ಮವನ್ನು ಮಾಡಿದವರು ಸ್ವರ್ಗದಿಂದ ಹಿಂತಿರುಗಿ ಬರುವಾಗ ದುಃಖ ಉಳ್ಳವರೋ ಅಲ್ಲವೋ ''ತ ಇಹವ್ರೀಹೀಯವಾಃ...'' ಎಂಬ ಶ್ರುತಿಯಲ್ಲಿ ಕರ್ಮಿಗಳಿಗೆ ಹೇಳಲ್ಪಟ್ಟ ವ್ರೀಹ್ಯಾದಿಭಾವವು (ಭಕ್ತ ಮೊದಲಾದ ಧಾನ್ಯಸ್ವರೂಪ) ಮುಖ್ಯವೋ ಅಥವಾ ಧೂಮಾದಿಭಾವದಂತೆ (ಧೂಮದಿದೇವತಾಪ್ರವೇಶದಂತೆ) ಗೌಣವೋ? ಗೌಣತ್ವಪಕ್ಷದಲ್ಲಿ ಕರ್ಮಿಗಳಿಗೆ ದುಃಖಕ್ಕೆ ಕಾರಣ ಇದೆಯೋ ಇಲ್ಲವೋ? ಎಂಬ ವಿಚಾರಗಳು ಇಲ್ಲಿ ನಿರ್ಣೀತವಾಗಿವೆ.

**ಪೂರ್ವಪಕ್ಷ** :- ವೇದವು 'ಸ್ವರ್ಗಕಾಮೋ ಯಜೇತ' ಎಂದು ಸುಖಸಾಧನತಯಾ ಕರ್ಮವನ್ನು ಹೇಳಿದಂತೆ ತದ್ಯ ಇಹ ವ್ರೀಹಿಯವಾಃ ಎಂಬಲ್ಲಿ ಕರ್ಮಿಗಳಿಗೆ ಧಾನ್ಯರೂಪತ್ವವನ್ನು ಹೇಳಿದೆ. ಜೀವರು ಧಾನ್ಯ-ರೂಪತ್ವವನ್ನು ಪಡೆದಾಗ ಕೊಯ್ಯುವುದು ಕುಟ್ಟುವುದು ಮೊದಲಾದಕ್ರಿಯೆ-ಯಿಂದ ದುಃಖವನ್ನು ಅವಶ್ಯ ಅನುಭವಿಸಲೇ ಬೇಕಾಗುತ್ತದೆ. ಹೀಗಾಗಿ ವೇದ ಹೇಳಿದ ಫಲ ವ್ಯತ್ಯಾಸವಾದ್ದರಿಂದ ವೇದದಲ್ಲಿ ಅವಿಶ್ವಾಸ ಉಂಟಾಗುತ್ತದೆ. ಧಾನ್ಯದಲ್ಲಿ ಪ್ರವೇಶ ಎಂಬ ಗೌಣಪಕ್ಷವಿಟ್ಟುಕೊಂಡರೂ ಕೂಡ ಆಯಾ ಧಾನ್ಯಾಭಿಮಾನಿಜೀವರೊಂದಿಗೆ ಕರ್ಮಿ ಜೀವರಿಗೂ ಸಹಾವಸ್ಥಾನ (ಜೊತೆಗೆ ವಾಸ) ಬಂದದ್ದರಿಂದ ದುಃಖವಾಗಲೇ ಬೇಕಾಗುತ್ತದೆ. ಮತ್ತು ಯಾಗಾದಿಗಳು ಪಶುಹಿಂಸಾರೂಪವಾದ್ದರಿಂದ ಪಾಪ ಕರ್ಮವಾದ ಪ್ರಯುಕ್ತ ದುಃಖ ಪ್ರಾಪಕವಾಗಲೇ ಬೇಕಾಗುತ್ತದೆ.

**ಸಿದ್ಧಾಂತ** :- ಕರ್ಮಿಜೀವರಿಗೆ ವೇದ ಹೇಳಿದಂತಹ ವ್ರೀಹ್ಯಾದಿ ಭಾವ (ಧಾನ್ಯಸ್ವರೂಪತ್ವ) ವೆಂದರೆ ಬೇರೆ ದುಃಖಿ ಜೀವರಿಂದ ಅಧಿಷ್ಠತವಾದ ಧಾನ್ಯದಲ್ಲಿ ಪ್ರವೇಶ ಮಾತ್ರ. ಪ್ರವೇಶದಿಂದ ಸಹಾವಸ್ಥಾನವಿದ್ದರೂ ಕರ್ಮಿ-ಗಳಿಗೆ ದುಃಖ ಭೋಗವಿಲ್ಲ ಎಂದು ವೇದ ಹೇಳಿದೆ. ಹಾಗೆಯೇ ಯಜ್ಞವು ಹಿಂಸಾರೂಪವಾದರೂ ವೇದವಿಹಿತವಾದ್ದರಿಂದ ಪಾಪಸಾಧನವಲ್ಲ. ಹೀಗೆ ಕರ್ಮಿಗಳಿಗೆ ದುಃಖವಿಲ್ಲದ ಪ್ರಯುಕ್ತ ವೇದದಲ್ಲಿ ಅವಿಶ್ವಾಸ ಮಾಡಬೇಕಾಗಿಲ್ಲ. ಆದ್ದರಿಂದ ವೇದವಿಹಿತವಾದ ವೈರಾಗ್ಯವು ಯುಕ್ತವೇ ಆಗಿದೆ.

## ॥ ಓಂ ರೇತಸ್ಸಿಗ್ಯೋಗೋಥ ಓಂ ॥ ೩-೧-೧೯

ಪೂರ್ವಾಧಿಕರಣದಲ್ಲಿ ಅನ್ಯಾದಿಷ್ಠಿತ ಧಾನ್ಯದಲ್ಲಿ ಕರ್ಮಿಜೀವರಿಗೆ ಪ್ರವೇಶ ಹೇಳಿದಂತೆ ಈ ಅಧಿಕರಣದಲ್ಲಿ ಪಿತೃಶರೀರದಲ್ಲಿ ಪ್ರವೇಶ ಸಮರ್ಥನೆ ಮಾಡಿದ್ದರಿಂದ ಸಂಗತಿ ಇದೆ.

ಕರ್ಮಾದಿಗಳಲ್ಲಿ ಅತಿವೈರಾಗ್ಯವು ಅನಗತ್ಯವೋ ಅಗತ್ಯವೋ, ಸ್ವರ್ಗದಿಂದ ಹಿಂತಿರುಗಿದ ಜೀವರಿಗೆ ಪಿತೃದೇಹ ಪ್ರವೇಶ ಇಲ್ಲವೋ ಇದೆಯೋ, ''ಯೋವಾರೇತಃಸಿಂಚತಿ'' ಎಂಬ ಶ್ರುತಿಯು ದುರ್ಬಲ ''ಮಾತುರೇವೋ-ದರಂ'' ಎಂಬುದು ಪ್ರಬಲವೋ? ಅಥವಾ ವಿಪರೀತವೋ ಮಾತುರೇವೋದರಂ ವ್ರಜೇತ್ ಎಂಬ ವಚನವು ಸಯುಕ್ತಿಕವೊ ಅಲ್ಲವೋ ಕರ್ಮಿಗಳಿಗೆ ಪಿತೃ-ಪ್ರವೇಶದಿಂದ ಪ್ರಯೋಜನ ಇಲ್ಲವೋ ಅಥವಾ ಇದೆಯೋ ಎಂಬುದು ಇಲ್ಲಿಯ ವಿಚಾರ.

**ಪೂರ್ವಪಕ್ಷ :-** ಕರ್ಮಿಗೆ ಪಿತೃದೇಹದಲ್ಲಿ ಪ್ರವೇಶಕ್ಕೆ ಏನೂ ಪ್ರಯೋಜನ-ವಿಲ್ಲವಾದ್ದರಿಂದ ಅದು ಬೇಕಾಗಿಲ್ಲ. ಯದ್ಯಪಿ ದೇಹವಾಗಿ ಪರಿಣಾಮಗೊಳ್ಳಲು ರೇತಸ್ಸು ಬೇಕು. ಆದರೂ ಮಾತೃಶರೀರದಲ್ಲಿ ರೇತಸ್ಸೇಚನಾನಂತರ ಜೀವನ ಪ್ರವೇಶದಿಂದಲೂ ದೇಹಪರಿಣಾಮವನ್ನು ಕೂಡಿಸಬಹುದು. ಜೀವನು ಮಾತೃಶರೀರವನ್ನು ಪ್ರವೇಶಿಸುತ್ತಾನೆ ಎನ್ನುವುದಕ್ಕೆ ಮಾತುರೇವೋದರಂ ವ್ರಜೇತ್ ಎಂಬ ವಚನವು ಆಧಾರವಾಗಿದೆ ಮತ್ತು ಅಲ್ಲಿ ಜೀವ ಪ್ರವೇಶಕ್ಕೆ ದೇಹಪರಿಣಾಮ ಪ್ರಯೋಜನ ಎಂಬ ಯುಕ್ತಿ ಇದೆ. ಆದ್ದರಿಂದ ಮತ್ತು ಮಾತುರೇವ ಎಂದು ಏವ(ಅವಧಾರಣ) ಕಾರವಿರುವುದರಿಂದ ವಚನವು ಪ್ರಬಲ. ಇದರ ಬಾಧದಿಂದ ಶ್ರುತಿಯನ್ನು ಕೈಬಿಡಬೇಕು. ಹೀಗಾಗಿ ಪಿತೃಪ್ರವೇಶ ಅನಗತ್ಯವಾದ್ದರಿಂದ ಕರ್ಮದಲ್ಲೂ ಅತಿವೈರಾಗ್ಯ ಬೇಕಾಗಿಲ್ಲ.

**ಸಿದ್ಧಾಂತ :-** ದೇಹವಾಗಿ ಪರಿಣಾಮ ಗೊಳ್ಳಲು ರೇತಸ್ಸು ಅಗತ್ಯವಾಗಿದ್ದರೂ ಅದು ಮಾತೃಶರೀರವನ್ನು ಸೇರಿಯೇ ಪರಿಣಾಮಗೊಳ್ಳುವುದರಿಂದ ಜೀವನಿಗೂ ಮಾತ್ರಶರೀರಪ್ರವೇಶವೇ ಇರಲಿ ಎಂದು ಕೂಡಿಸಬಹುದಾದರೂ ''ಈಶಕ್ಲಪ್ತ್ಯೈವ ಪಿತರಂ'' ಎಂಬ (ಈಶನ ಸಂಕಲ್ಪದಂತೆಯೇ ಜೀವನು ಪಿತೃಶರೀರವನ್ನು ಪ್ರವೇಶಿಸುತ್ತಾನೆ) ವಚನದಿಂದ ಮತ್ತು ''ರೇತಸ್ಸಿಚಮೇವ

ಅನುಪ್ರವಿಶತಿ'' ಎಂಬ ಶ್ರುತಿಯಿಂದಲೂ ಪಿತೃಪ್ರವೇಶವನ್ನು ಅಂಗೀಕರಿಸಲೇ-ಬೇಕು ಮಾತುರೇವ ಎಂಬಲ್ಲಿಯ ಏವಕಾರಕ್ಕೆ ಮಾತೃ ಶರೀರವನ್ನು ಪ್ರವೇಶಿಸಲೇಬೇಕು ಎಂದು ಅರ್ಥವೇ ಹೊರತು ಮಾತೃಶರೀರವನ್ನು ಮಾತ್ರ ಪ್ರವೇಶಿಸಬೇಕು ಎಂದಲ್ಲ. ಹೀಗೆ ಪಿತೃಪ್ರವೇಶ ಅನಿವಾರ್ಯವಾದ್ದರಿಂದ ಪರಂಪರಯಾ ಇದಕ್ಕೆ ಕಾರಣವಾದ ಕರ್ಮದಲ್ಲಿ ಅತಿವೈರಾಗ್ಯ ಅಗತ್ಯ.

## ॥ ಓಂ ಯೋನೇಃ ಶರೀರಂ ಓಂ ॥ ೩-೧-೨೦

ಪೂರ್ವಸೂತ್ರದಲ್ಲಿ ಹೇಳಲ್ಪಟ್ಟ ಪಿತೃದ್ವಾರಾ ಮಾತೃಪ್ರವೇಶವನ್ನೇ ಇಲ್ಲಿ ಸಮರ್ಥಿಸಲಾಗುವುದು. ಕರ್ಮಾದಿಗಳಲ್ಲಿ ಅತಿವೈರಾಗ್ಯ ಅನಾವಶ್ಯಕವೋ ಆವಶ್ಯಕವೋ ಕರ್ಮಿಗಳಿಗೆ ದೇಹ ಪ್ರಾಪ್ತಿಯಾಗುವಾಗ ಆಯಾಸವು ಇಲ್ಲವೋ ಇದೆಯೋ, ಪಿತೃದೇಹದಿಂದ ಯೋನಿದ್ವಾರಾ ತಾಯಿಯ ಉದರವನ್ನು ಸೇರಿ ಜನ್ಮಪಡೆಯುತ್ತಾನೋ ಅಥವಾ ಯೋನಿಪ್ರವೇಶವಿಲ್ಲದೆಯೇ ಜನ್ಮಪಡೆಯು-ವನೋ, ಪಿತೃ ರೇತಸ್ಸು ಯೋನಿ, ಮಾತೃ ಈ ಕ್ರಮವಿಲ್ಲದೇ ಜನ್ಮ ಸಂಭಾವಿತವೋ ಅಲ್ಲವೋ ಎಂಬ ವಿಚಾರ ಇಲ್ಲಿಯ ವಿಷಯ.

**ಪೂರ್ವಪಕ್ಷ** :- ಪೂರ್ವೋಕ್ತಕ್ರಮವಿಲ್ಲದೆಯೂ ಪಿತೃವಿನಿಂದ ಮಾತ್ರವೇ ಜನ್ಮವು ಸಂಭಾವಿತ. ಯುವನಾಶ್ವನೆಂಬ ಪಿತೃವಿನಲ್ಲೇ ಪ್ರವೇಶಮಾಡಿ ಮಾಂಧಾತ ಹುಟ್ಟಿದ್ದಾನೆ. ತಂದೆಯ ಹೊರಗೆ ದ್ರೋಣ (ತಂದೆಯ ರೇತಸ್ಸಿನಿಂದ ದ್ರೋಣವೆಂಬ ಪಾತ್ರದಲ್ಲಿ) ಹುಟ್ಟಿದ್ದಾನೆ. ಮಾತೃಪ್ರವೇಶವು ಆವಶ್ಯಕವೆಂದು ಇಟ್ಟುಕೊಂಡರೂ ''ದೇಹಂ ಗರ್ಭಸ್ಥಿತಂ'' ಎಂಬ ಪ್ರಮಾಣದ ಪ್ರಕಾರವಾಗಿ ತಾಯಿಯ ಗರ್ಭದಲ್ಲಿರುವ ದೇಹದಲ್ಲೇ ನೇರಪ್ರವೇಶಮಾಡಿ ಜನ್ಮತಾಳ-ಬಹುದು. ಅಥವಾ ತಂದೆಯು ತಾಯಿಯನ್ನು ಸ್ಪರ್ಶಮಾಡಿದರೂ ಅಷ್ಟ-ರಿಂದಲೇ ಆಸ್ತೀಕಾದಿಗಳಿಗಿದ್ದಂತೆ ಮಾತೃ ಉದರ ಪ್ರವೇಶವೂ ಸಂಭಾವಿತವಾದ್ದರಿಂದ ಯೋನಿಪ್ರಾಪ್ತಿಯು ಅನಾವಶ್ಯಕ. ದೇಹಂ ಗರ್ಭಸ್ಥಿತಂ ಎಂಬ ವಚನದಂತೆ ತಾಯಿಯು ಊಟ ಮಾಡುವ ಅನ್ನಾದಿ ಮೂಲಕವಾಗಿ ಮಾತೃ ಉದರ ಪ್ರವೇಶ ಸಂಭಾವಿತವಾದ್ದರಿಂದ ಮಾತೃದೇಹದಲ್ಲಿರುವ ರೇತಸ್ಸೇ ದೇಹವಾಗಿ ಪರಿಣಮಿಸಬಹುದಾದ್ದ-ರಿಂದ ಪಿತೃಪ್ರವೇಶವು ವ್ಯರ್ಥ. ಆದ್ದರಿಂದ ಜನ್ಮ ಪಡೆಯುವಾಗ ಅತಿ ಆಯಾಸವಿಲ್ಲವಾದ್ದರಿಂದ ಕರ್ಮದಲ್ಲಿ ಅತಿವೈರಾಗ್ಯ ಬೇಕಾಗಿಲ್ಲ.

**ಸಿದ್ಧಾಂತ :-** ಕರ್ಮಿಯಾದವನು ಮೊದಲು ಪಿತೃಪ್ರವೇಶಮಾಡಿ ಅನಂತರ ಯೋನಿದ್ವಾರಾ ಮಾತುರುದರ ಪ್ರವೇಶಮಾಡಿ ಹುಟ್ಟುತ್ತಾನೆ. ಬೇರೆ ರೀತಿ ಅಲ್ಲ. ''ದಿವಃ ಸ್ಥಾಸ್ನೂನ್...... ಪಿತುಃ ಮಾತುಃ ಶರೀರಂ'' ಇತ್ಯಾದಿ ಶ್ರುತಿಯೇ ಇದಕ್ಕೆ ಪ್ರಮಾಣ. ಪೂರ್ವಪಕ್ಷಿಗಳು ಉಲ್ಲೇಖಿಸಿದ ದೇಹಂ ಗರ್ಭಸ್ಥಿತಂ ಇತ್ಯಾದಿ ವಚನವು ಭಗವಂತನ ಪ್ರಸಾದದಿಂದ ವಿಶೇಷ ಸಾಮರ್ಥ್ಯವನ್ನು ಹೊಂದಿದ ಯೋಗಿಗಳ ಜನ್ಮಕ್ಕೆ ಸಂಬಂಧಿಸಿದ್ದು. ಹೊರತು ಕರ್ಮಿಗಳಿಗಲ್ಲ. ಆದ್ದರಿಂದ ಕರ್ಮಿಗಳಿಗೆ ದೇಹಪ್ರಾಪ್ತಿಯಾಗಲು ಆಯಾಸವಿರುವುದರಿಂದ ಕರ್ಮಾದಿಗಳಲ್ಲಿ ಅತಿವೈರಾಗ್ಯ ಬೇಕು.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ಮೂರನೆಯ ಅಧ್ಯಾಯದ ಮೊದಲನೆಯ ಪಾದವು ಸಮಾಪ್ತವಾಯಿತು.**

# ಮೂರನೆಯ ಅಧ್ಯಾಯದ ಎರಡನೆಯ ಪಾದ

## ॥ ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ ॥ ೩-೨-೧

ಯಾವ ಭಕ್ತಿಯ ದಾರ್ಢ್ಯಕ್ಕೋಸ್ಕರವಾಗಿ ಪೂರ್ವಪಾದದಲ್ಲಿ ವೈರಾಗ್ಯವು ನಿರೂಪಿತವಾಯಿತೋ ಮತ್ತು ಯಾವ ಭಕ್ತಿಯು ಮುಂದಿನ ಪಾದದಲ್ಲಿ ಹೇಳಲ್ಪಡುವ ಉಪಾಸನೆಗೆ ಸಹಾಯಕವಾಗಿದೆಯೋ ಅಂತಹ ಭಕ್ತಿಗೋಸ್ಕರ ಭಗವನ್ಮಹಿಮೆಯು ಈ ಪಾದದಲ್ಲಿ ನಿರುಪಿತವಾಗಿದೆ. ಹೀಗಾಗಿ ಕ್ರಮವಾಗಿ ವೈರಾಗ್ಯ ಪಾದ, ಭಕ್ತಿಪಾದ ಉಪಾಸನೆಗಳು ಬಂದಿವೆ. ಈ ಪಾದದ ಪ್ರಮೇಯವು ಭಾಷ್ಯಾದಿಗಳಲ್ಲಿ ಸ್ಪಷ್ಟವಾಗಿದೆ. ಪೂರ್ವಪಾದದ ಕೊನೆಯಲ್ಲಿ 'ಯೋನೇಃ ಶರೀರಂ' ಎಂಬಲ್ಲಿ ಜೀವರಿಗೆ ಜನ್ಮವಿದೆ ಎಂದು ತಿಳಿದ ಮೇಲೆ ಆ ಜೀವರ ಅವಸ್ಥೆಗಳನ್ನು ಹೇಳುವುದು ಸಂಗತವಾಗುತ್ತದೆ. ಅವಸ್ಥೆಗಳಲ್ಲಿಯೂ ಕೂಡ ಸ್ವಪ್ನಾವಸ್ಥೆಗೆ ಭಗವಂತನೇ ನಿಯಾಮಕ. ಎಂಬ ಮಹಿಮೆಯು ಮೊದಲು ಹೇಳಲಾಗಿದೆ. ಏಕೆಂದರೆ ಕಾಠಕದಲ್ಲಿ 'ಯೋನಿಮನ್ಯೇ ಪ್ರಪದ್ಯಂತೇ' ಎಂದು ಜೀವರಿಗೆ ಜನ್ಮ ಹೇಳಿದ ಬಳಿಕ ಸ್ವಪ್ನಾವಸ್ಥೆಯನ್ನೇ ಹೇಳಿದ್ದಾರೆ. ಆದ್ದರಿಂದ ಸೂತ್ರದಲ್ಲಿಯೂ ಅದೇ ಕ್ರಮ ಅನುಸರಿಸಲಾಗಿದೆ.

ಅನುಪ್ರವಿಶತಿ'' ಎಂಬ ಶ್ರುತಿಯಿಂದಲೂ ಪಿತೃಪ್ರವೇಶವನ್ನು ಅಂಗೀಕರಿಸಲೇ-ಬೇಕು ಮಾತುರೇವ ಎಂಬಲ್ಲಿಯ ಏವಕಾರಕ್ಕೆ ಮಾತೃ ಶರೀರವನ್ನು ಪ್ರವೇಶಿಸಲೇಬೇಕು ಎಂದು ಅರ್ಥವೇ ಹೊರತು ಮಾತೃಶರೀರವನ್ನು ಮಾತ್ರ ಪ್ರವೇಶಿಸಬೇಕು ಎಂದಲ್ಲ. ಹೀಗೆ ಪಿತೃಪ್ರವೇಶ ಅನಿವಾರ್ಯವಾದ್ದರಿಂದ ಪರಂಪರಯಾ ಇದಕ್ಕೆ ಕಾರಣವಾದ ಕರ್ಮದಲ್ಲಿ ಅತಿವೈರಾಗ್ಯ ಅಗತ್ಯ.

## ॥ ಓಂ ಯೋನೇಃ ಶರೀರಂ ಓಂ ॥ ೩-೧-೨೦

ಪೂರ್ವಸೂತ್ರದಲ್ಲಿ ಹೇಳಲ್ಪಟ್ಟ ಪಿತೃದ್ವಾರಾ ಮಾತೃಪ್ರವೇಶವನ್ನೇ ಇಲ್ಲಿ ಸಮರ್ಥಿಸಲಾಗುವುದು. ಕರ್ಮಾದಿಗಳಲ್ಲಿ ಅತಿವೈರಾಗ್ಯ ಅನಾವಶ್ಯಕವೋ ಆವಶ್ಯಕವೋ ಕರ್ಮಿಗಳಿಗೆ ದೇಹ ಪ್ರಾಪ್ತಿಯಾಗುವಾಗ ಆಯಾಸವು ಇಲ್ಲವೋ ಇದೆಯೋ, ಪಿತೃದೇಹದಿಂದ ಯೋನಿದ್ವಾರಾ ತಾಯಿಯ ಉದರವನ್ನು ಸೇರಿ ಜನ್ಮಪಡೆಯುತ್ತಾನೋ ಅಥವಾ ಯೋನಿಪ್ರವೇಶವಿಲ್ಲದೆಯೇ ಜನ್ಮಪಡೆಯು-ವನೋ, ಪಿತೃ ರೇತಸ್ಸು ಯೋನಿ, ಮಾತೃ ಈ ಕ್ರಮವಿಲ್ಲದೇ ಜನ್ಮ ಸಂಭಾವಿತವೋ ಅಲ್ಲವೋ ಎಂಬ ವಿಚಾರ ಇಲ್ಲಿಯ ವಿಷಯ.

**ಪೂರ್ವಪಕ್ಷ** :- ಪೂರ್ವೋಕ್ತಕ್ರಮವಿಲ್ಲದೆಯೂ ಪಿತೃವಿನಿಂದ ಮಾತ್ರವೇ ಜನ್ಮವು ಸಂಭಾವಿತ. ಯುವನಾಶ್ವನೆಂಬ ಪಿತೃವಿನಲ್ಲೇ ಪ್ರವೇಶಮಾಡಿ ಮಾಂಧಾತ ಹುಟ್ಟಿದ್ದಾನೆ. ತಂದೆಯ ಹೊರಗೆ ದ್ರೋಣ (ತಂದೆಯ ರೇತಸ್ಸಿನಿಂದ ದ್ರೋಣವೆಂಬ ಪಾತ್ರದಲ್ಲಿ) ಹುಟ್ಟಿದ್ದಾನೆ. ಮಾತೃಪ್ರವೇಶವು ಆವಶ್ಯಕವೆಂದು ಇಟ್ಟುಕೊಂಡರೂ ''ದೇಹಂ ಗರ್ಭಸ್ಥಿತಂ'' ಎಂಬ ಪ್ರಮಾಣದ ಪ್ರಕಾರವಾಗಿ ತಾಯಿಯ ಗರ್ಭದಲ್ಲಿರುವ ದೇಹದಲ್ಲೇ ನೇರಪ್ರವೇಶಮಾಡಿ ಜನ್ಮತಾಳ-ಬಹುದು. ಅಥವಾ ತಂದೆಯು ತಾಯಿಯನ್ನು ಸ್ಪರ್ಶಮಾಡಿದರೂ ಅಷ್ಟ-ರಿಂದಲೇ ಆಸ್ತೀಕಾದಿಗಳಿಗಿದ್ದಂತೆ ಮಾತೃ ಉದರ ಪ್ರವೇಶವೂ ಸಂಭಾವಿತವಾದ್ದರಿಂದ ಯೋನಿಪ್ರಾಪ್ತಿಯು ಅನಾವಶ್ಯಕ. ದೇಹಂ ಗರ್ಭಸ್ಥಿತಂ ಎಂಬ ವಚನದಂತೆ ತಾಯಿಯು ಊಟ ಮಾಡುವ ಅನ್ನಾದಿ ಮೂಲಕವಾಗಿ ಮಾತೃ ಉದರ ಪ್ರವೇಶ ಸಂಭಾವಿತವಾದ್ದರಿಂದ ಮಾತೃದೇಹದಲ್ಲಿರುವ ರೇತಸ್ಸೇ ದೇಹವಾಗಿ ಪರಿಣಮಿಸಬಹುದಾದ್ದ-ರಿಂದ ಪಿತೃಪ್ರವೇಶವು ವ್ಯರ್ಥ. ಆದ್ದರಿಂದ ಜನ್ಮ ಪಡೆಯುವಾಗ ಅತಿ ಆಯಾಸವಿಲ್ಲವಾದ್ದರಿಂದ ಕರ್ಮದಲ್ಲಿ ಅತಿವೈರಾಗ್ಯ ಬೇಕಾಗಿಲ್ಲ.

**ಸಿದ್ಧಾಂತ :-** ಕರ್ಮಿಯಾದವನು ಮೊದಲು ಪಿತೃಪ್ರವೇಶಮಾಡಿ ಅನಂತರ ಯೋನಿದ್ವಾರಾ ಮಾತುರುದರ ಪ್ರವೇಶಮಾಡಿ ಹುಟ್ಟುತ್ತಾನೆ. ಬೇರೆ ರೀತಿ ಅಲ್ಲ. ''ದಿವಃ ಸ್ಥಾಸ್ನೂನ್...... ಪಿತುಃ ಮಾತುಃ ಶರೀರಂ'' ಇತ್ಯಾದಿ ಶ್ರುತಿಯೇ ಇದಕ್ಕೆ ಪ್ರಮಾಣ. ಪೂರ್ವಪಕ್ಷಿಗಳು ಉಲ್ಲೇಖಿಸಿದ ದೇಹಂ ಗರ್ಭಸ್ಥಿತಂ ಇತ್ಯಾದಿ ವಚನವು ಭಗವಂತನ ಪ್ರಸಾದದಿಂದ ವಿಶೇಷ ಸಾಮರ್ಥ್ಯವನ್ನು ಹೊಂದಿದ ಯೋಗಿಗಳ ಜನ್ಮಕ್ಕೆ ಸಂಬಂಧಿಸಿದ್ದು. ಹೊರತು ಕರ್ಮಿಗಳಿಗಲ್ಲ. ಆದ್ದರಿಂದ ಕರ್ಮಿಗಳಿಗೆ ದೇಹಪ್ರಾಪ್ತಿಯಾಗಲು ಆಯಾಸ-ವಿರುವುದರಿಂದ ಕರ್ಮಾದಿಗಳಲ್ಲಿ ಅತಿವೈರಾಗ್ಯ ಬೇಕು.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ಮೂರನೆಯ ಅಧ್ಯಾಯದ ಮೊದಲನೆಯ ಪಾದವು ಸಮಾಪ್ತವಾಯಿತು.**

# ಮೂರನೆಯ ಅಧ್ಯಾಯದ ಎರಡನೆಯ ಪಾದ

## ॥ ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ ॥ ೩-೨-೧

ಯಾವ ಭಕ್ತಿಯ ದಾರ್ಢ್ಯಕ್ಕೋಸ್ಕರವಾಗಿ ಪೂರ್ವಪಾದದಲ್ಲಿ ವೈರಾಗ್ಯವು ನಿರೂಪಿತವಾಯಿತೋ ಮತ್ತು ಯಾವ ಭಕ್ತಿಯು ಮುಂದಿನ ಪಾದದಲ್ಲಿ ಹೇಳಲ್ಪಡುವ ಉಪಾಸನೆಗೆ ಸಹಾಯಕವಾಗಿದೆಯೋ ಅಂತಹ ಭಕ್ತಿಗೋಸ್ಕರ ಭಗವನ್ಮಹಿಮೆಯು ಈ ಪಾದದಲ್ಲಿ ನಿರುಪಿತವಾಗಿದೆ. ಹೀಗಾಗಿ ಕ್ರಮವಾಗಿ ವೈರಾಗ್ಯ ಪಾದ, ಭಕ್ತಿಪಾದ ಉಪಾಸನೆಗಳು ಬಂದಿವೆ. ಈ ಪಾದದ ಪ್ರಮೇಯವು ಭಾಷ್ಯಾದಿಗಳಲ್ಲಿ ಸ್ಪಷ್ಟವಾಗಿದೆ. ಪೂರ್ವಪಾದದ ಕೊನೆಯಲ್ಲಿ 'ಯೋನೇಃ ಶರೀರಂ' ಎಂಬಲ್ಲಿ ಜೀವರಿಗೆ ಜನ್ಮವಿದೆ ಎಂದು ತಿಳಿದ ಮೇಲೆ ಆ ಜೀವರ ಅವಸ್ಥೆಗಳನ್ನು ಹೇಳುವುದು ಸಂಗತವಾಗುತ್ತದೆ. ಅವಸ್ಥೆಗಳಲ್ಲಿಯೂ ಕೂಡ ಸ್ವಪ್ನಾವಸ್ಥೆಗೆ ಭಗವಂತನೇ ನಿಯಾಮಕ. ಎಂಬ ಮಹಿಮೆಯು ಮೊದಲು ಹೇಳಲಾಗಿದೆ. ಏಕೆಂದರೆ ಕಾಠಕದಲ್ಲಿ 'ಯೋನಿಮನ್ಯೇ ಪ್ರಪದ್ಯಂತೇ' ಎಂದು ಜೀವರಿಗೆ ಜನ್ಮ ಹೇಳಿದ ಬಳಿಕ ಸ್ವಪ್ನಾವಸ್ಥೆಯನ್ನೇ ಹೇಳಿದ್ದಾರೆ. ಆದ್ದರಿಂದ ಸೂತ್ರದಲ್ಲಿಯೂ ಅದೇ ಕ್ರಮ ಅನುಸರಿಸಲಾಗಿದೆ.

ಈ ಅಧಿಕರಣದಲ್ಲಿ ಜಿಜ್ಞಾಸಾಸೂತ್ರದಲ್ಲಿರುವ ಅಥ ಶಬ್ದದಿಂದ ಸೂಚಿತವಾದ ಅಧಿಕಾರಿಗಳಲ್ಲಿರಬೇಕಾದ ಹರಿಭಕ್ತಿಯು ಬೇಡವೋ ಬೇಕೋ ಎಂಬ ವಿಚಾರ. ಅದಕ್ಕಾಗಿ ಸ್ವಾಪ್ನಪದಾರ್ಥಗಳು ಪರಮಾತ್ಮನ ಅಧೀನವಲ್ಲವೋ ಅಥವಾ ಅಧೀನವೋ? ಅದಕ್ಕಾಗಿ ಸ್ವಾಪ್ನಪದಾರ್ಥಗಳು ಅಸತ್ಯವೋ ಸತ್ಯವೋ? ಎಂಬ ವಿಚಾರ. ಅದಕ್ಕಾಗಿ ಸ್ವಾಪ್ನಸತ್ಯತ್ವಕ್ಕೆ ಸಾಧಕವಿಲ್ಲದೇ ಬಾಧಕವೇ ಇದೆಯೋ ಅಥವಾ ಬಾಧಕವಿಲ್ಲದೇ ಸಾಧಕವಿದೆಯೋ? ಎಂಬ ವಿಚಾರ ಪರಂಪರೆ ನಡೆದಿದೆ.

**ಪೂರ್ವಪಕ್ಷ** :- ಸ್ವಾಪ್ನಪದಾರ್ಥವು ಅಸತ್ಯವಾದ್ದರಿಂದ ಈಶಾಧೀನವಲ್ಲ. ಯದ್ಯಪಿ ಅಸತ್ತಾದ ಶಶವಿಷಾಣಾದಿಗಳು ಈಶಾಧೀನವಾಗಿಯೇ ಅಸತ್ತಾಗಿವೆ. ಆದರೆ ಘಟಾದಿಗಳಿಗೆ ಇರುವಂತೆ ಈಶಾಧೀನತ್ವವು ಅಸತ್ಯಕ್ಕೆ ಇರಲಾರದು. ಘಟಾದಿಗಳ ಯೋಗಕ್ಷೇಮವು ಈಶಾಧೀನ. ಆದರೆ ಅಸತ್ಯಕ್ಕೆ ಯೋಗ-ಕ್ಷೇಮಗಳೇ ಇರುವುದಿಲ್ಲವಾದ್ದರಿಂದ ಈಶಾಧೀನವಲ್ಲ. ಸ್ವಾಪ್ನಪದಾರ್ಥಗಳು ಅಸತ್ಯವೆನ್ನುವುದಕ್ಕೆ ಏನು ಆಧಾರವೆಂದರೆ, ಸತ್ಯವೆಂಬುದಕ್ಕೆ ಪ್ರಮಾಣವಿಲ್ಲ ಮತ್ತು ಬಾಧಕವಿದೆ. ಅದೇನೆಂದರೆ ಸ್ವಾಪ್ನಪದಾರ್ಥಗಳು ನಿತ್ಯವೆಂದು ಹೇಳಿದರೆ ಸ್ವಪ್ನಕ್ಕಿಂತ ಮೊದಲು ಮತ್ತು ಆಮೇಲೂ ಕಾಣಬೇಕು. ಅನಿತ್ಯವೆಂದರೂ ಸ್ವಪ್ನಕಾಲದಲ್ಲಿಯೇ ಹುಟ್ಟಿ ನಾಶವಾಗುತ್ತದೆ ಎಂಬುದಕ್ಕೆ ಪ್ರಮಾಣ-ವಿಲ್ಲವಾದ್ದರಿಂದ ಅದರ ಪೂರ್ವಾಪರಕಾಲದಲ್ಲಿಯೂ ಗೋಚರವಾಗಲಿ ಎಂಬ ಪ್ರಸಂಗ ಬರುತ್ತದೆ. ಮತ್ತು ಆ ಸ್ವಪ್ನಪದಾರ್ಥಗಳಿಗೆ ಕರ್ತೃ, ಉಪಾ-ದಾನಕಾರಣ, ನಿಮಿತ್ತಕಾರಣ, ಯಾವುದೂ ಇಲ್ಲವಾದ್ದರಿಂದ ಅಸತ್ಯ. ಬಾಹ್ಯವಾದ ಉಪಾದಾನಾದಿಗಳೇ ಸ್ವಾಪ್ನಪದಾರ್ಥಕ್ಕೂ ಕಾರಣ ಎಂದರೆ, ಸ್ವಪ್ನದಲ್ಲಿ ತೋರಿದ ಘಟಾದಿಗಳಿಗೆ ಕಪಾಲಕುಲಾಲಾದಿಗಳು ತೋರಬೇಕಾದೀತು ಎಂಬ ಆಪತ್ತಿ ಬರುತ್ತದೆ. ಉಪಾದಾನಾದಿಗಳಿಂದ ಜನ್ಯವಿಲ್ಲ ಎಂದರೆ ಅಸತ್ಯವೆಂದೇ ಹೇಳಿದಂತಾಯಿತು. ಮತ್ತು 'ಅಸತ್ತಾದ ಗಜವೇ ಸ್ವಪ್ನದಲ್ಲಿ ಕಂಡಿತು' ಎಂಬ ಬಾಧಜ್ಞಾನವು ಇದೆ. ಇದೇ ರೀತಿ ಸ್ವಪ್ನಸತ್ಯತ್ವ ಪಕ್ಷದಲ್ಲಿ ಟೀಕೋಕ್ತವಾದ ಇತರ ಬಾಧಕಗಳನ್ನು ತಿಳಿಯಬೇಕು.

**ಸಿದ್ಧಾಂತ** :- 'ಯದಾ ಕರ್ಮಸು ಕಾಮ್ಯೇಷು' ಎಂಬ ಶ್ರುತಿಸ್ಮೃತಿಗಳ ಆಧಾರದಿಂದ ಸ್ವಾಪ್ನಪದಾರ್ಥಗಳು ಶಾಕುನದಂತೆ ಶುಭಾಶುಭಸೂಚಕ-

ವಾಗಿವೆ. ಆದ್ದರಿಂದ ಸತ್ಯವೇ ಆಗಬೇಕು. ಮತ್ತು 'ನ ತತ್ರ ರಥಾ' ಎಂಬ ಶ್ರುತಿಯು ಸ್ವಾಪ್ನಪದಾರ್ಥಗಳಿಗೆ ಸ್ವಪ್ನಕಾಲದಲ್ಲಿಯೇ ಉತ್ಪತ್ತಿನಾಶಗಳನ್ನು ಹೇಳುವುದರಿಂದ ಮೊದಲು ಮತ್ತು ಅನಂತರವೂ ಕಾಣಲಿ ಎಂಬ ಪ್ರಸಂಗವೂ ಇಲ್ಲ. 'ಏತಸ್ಮಾದ್ಧ್ಯೇವ ಪುತ್ರೋ ಜಾಯತೇ' ಎಂಬ ಶ್ರುತಿಯು ಸ್ವಪ್ನ-ಪದಾರ್ಥಗಳಿಗೆ ಪರಮಾತ್ಮನೇ ಕರ್ತೃ ಎಂದು ಹೇಳಿದೆ. ಸ್ವಾಪ್ನಪದಾರ್ಥಗಳು ಅಸ್ಫುಟವಾದುದರಿಂದ ಬಾಹ್ಯೋಪಾದಾನಗಳಿಂದ ನಿರ್ಮಿತವಲ್ಲ. ಆದರೆ :ಮನೋಗತಾಂಸ್ತು ಸಂಸ್ಕಾರಾನ್' ಎಂಬ ಸ್ಮೃತಿಯ ಪ್ರಕಾರ ಮಾನಸ-ಸಂಸ್ಕಾರವೇ ಉಪಾದಾನವಾಗಿದೆ. ಇನ್ನು ಸ್ವಾಪ್ನಪದಾರ್ಥಗಳಿಗೆ ಸತ್ಯ-ತ್ವವಿದ್ದರೂ ಜಾಗ್ರತ್ವ ಅಥವಾ ಬಾಹ್ಯತ್ವ ಇಲ್ಲದೇ ಇರುವುದರಿಂದ 'ಅಸತ್ತಾದ ಗಜಾದಿಗಳೇ ಸ್ವಪ್ನದಲ್ಲಿ ಕಂಡವು' ಎಂಬ ಬಾಧಜ್ಞಾನವನ್ನು ಕೂಡಿಸಬಹುದು. ಆದ್ದರಿಂದ ಸ್ವಾಪ್ನಪದಾರ್ಥಗಳು ಸತ್ಯವೇ. ಅದರ ಪ್ರತಿಭಾಸ ಮತ್ತು ತಿರೋಧಾನ ಪರಮಾತ್ಮನ ಅಧೀನ. ಪೂರ್ವಾಧ್ಯಾಯದಲ್ಲಿ ಹೇಳಲ್ಪಟ್ಟ ಸರ್ವನಿಯಮಾಕತ್ವರೂಪ ಮಹಿಮೆಯ ಆಕ್ಷೇಪದ್ವಾರಾ ಭಕ್ತಿಯ ಆಕ್ಷೇಪ ಮತ್ತು ಸಮಾಧಾನಗಳೇ ಫಲ.

**ಸೂತ್ರಕ್ರಮ** :- ಬಾಧಕನಿರಾಸದ ಬಳಿಕವೇ ಸಾಧಕವು ದೃಢವಾಗುತ್ತದೆ. ಆದ್ದರಿಂದ ಮೊದಲ ಮೂರು ಸೂತ್ರದಲ್ಲಿ ಬಾಧಕವನ್ನು ಪರಿಹರಿಸಿ ಕೊನೆಯಲ್ಲಿ ಸಾಧಕ ಹೇಳಿದ್ದಾರೆ. ಆದ್ದರಿಂದಲೇ 'ದೋಷಪರಿಹಾರಾಯ ಸೂತ್ರಮ್' ಎಂದು ಟೀಕೆಯಲ್ಲಿ ಹೇಳಲಾಗಿದೆ. ಅದರಲ್ಲಿಯೂ ಸೃಷ್ಟಿ ಸಿದ್ಧವಾದ ಬಳಿಕವೇ ಕರ್ತೃ, ಉಪಾದಾನ ಇವುಗಳ ವಿಚಾರ ಪ್ರಾರಂಭ-ವಾಗುವುದರಿಂದ ಮೊದಲು ಸೃಷ್ಟಿವಿಚಾರಮಾಡಲಾಗಿದೆ. ಅನಂತರ ಕರ್ತೃ ಮತ್ತು ಉಪಾದಾನಗಳ ಪೈಕಿ ಕರ್ತೃ ಪ್ರಧಾನವಾದ್ದರಿಂದ ಅದರ ವಿಚಾರ ಮೊದಲು ಬಂದಿದೆ.

## ॥ ಓಂ ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ ಓಂ ॥ ೩-೨-೨

ಹಿಂದಿನ ಅಧಿಕರಣದಲ್ಲಿ ಹೇಳಿದಂತೆ ಸ್ವಾಪ್ನಪದಾರ್ಥಗಳು ಈಶಾಧೀನ-ವಾಗಲಿ. ಆದರೆ ಅದರ ಜ್ಞಾನ ಮತ್ತು ತಿರೋಧಾನವು ಬಾಹ್ಯಾರ್ಥದ

ಅಜ್ಞಾನ ಮತ್ತು ಜ್ಞಾನಗಳಿಂದಲೇ ಹೊರತು ಈಶನಿಂದಲ್ಲ ಎಂದು ಶಂಕಿಸುವುದರಿಂದ ಸಂಗತಿ ಇದೆ.

ಭಕ್ತಿಯು ಅನಗತ್ಯವೋ ಅಥವಾ ಅಗತ್ಯವೋ, ಸ್ವಾಪ್ನಪದಾರ್ಥಗಳ ಜ್ಞಾನ ಮತ್ತು ತಿರೋಧಾನಗಳು ಪರಮಾತ್ಮನ ಅನಧೀನವೋ ಅಥವಾ ಅಧೀನವೋ ಬಾಹ್ಯಾರ್ಥ ಅಜ್ಞಾನ ಮತ್ತು ಜ್ಞಾನಗಳು ಸ್ವಾಪ್ನಪದಾರ್ಥದ ಜ್ಞಾನ ಮತ್ತು ತಿರೋಧಾನಕ್ಕೆ ಸ್ವತಂತ್ರಹೇತುವೋ ಅಥವಾ ನಿಮಿತ್ತಮಾತ್ರವೋ? ಎಂಬ ವಿಚಾರಗಳು ಈ ಅಧಿಕರಣದಲ್ಲಿ ಮಾಡಲ್ಪಟ್ಟಿವೆ.

**ಪೂರ್ವಪಕ್ಷ** :- ಸ್ವಾಪ್ನಪದಾರ್ಥ ಜ್ಞಾನವು ಹೊರಗಿನ ಪದಾರ್ಥಜ್ಞಾನ ಇಲ್ಲದೇ ಇರುವಾಗಲೇ ಕಂಡಿದೆ. ಹೊರಗಿನ ಪದಾರ್ಥಗಳ ಜ್ಞಾನ ಬಂದಾಗ ಸ್ವಾಪ್ನಾರ್ಥದ ತಿರೋಧಾನವು ಅನುಭವಸಿದ್ಧವಾಗಿದೆ. ಆದ್ದರಿಂದ ಸ್ವಾಪ್ನಪದಾರ್ಥದ ಜ್ಞಾನ ಮತ್ತು ತಿರೋಧಾನಗಳು ಬಾಹ್ಯಾರ್ಥ ಅಜ್ಞಾನ ಮತ್ತು ಜ್ಞಾನಗಳ ಅಧೀನ ಎಂದು ಹೇಳಲು ಬರುವಾಗ ಭಗವಂತನ ಕೆಲಸವೇನು. ಬಾಹ್ಯಾರ್ಥ ಅಜ್ಞಾನ ಜ್ಞಾನಗಳು ಸ್ವನಿಮಿತ್ತಕವಾದ ಸ್ವಾಪ್ನಾರ್ಥಜ್ಞಾನ ತಿರೋಧಾನಗಳನ್ನು ಹುಟ್ಟಿಸಲು ಮತ್ತೊಂದನ್ನು ಏಕೆ ಅಪೇಕ್ಷಿಸಬೇಕು.

**ಸಿದ್ಧಾಂತ** :- ಈಶನ ಅಜ್ಞಾನದಿಂದ ಬಂಧ, ಜ್ಞಾನದಿಂದ ಮೋಕ್ಷ ಎಂದು ಪ್ರಸಿದ್ಧಿ ಇದ್ದರೂ ಆ ಅಜ್ಞಾನ ಜ್ಞಾನಗಳು ಜಡತ್ವನಿಮಿತ್ತಕವಾಗಿ ಅಸ್ವತಂತ್ರವಾದ್ದರಿಂದ ಅವುಗಳು ಬಂಧಕ ಮತ್ತು ಮೋಚಕವಲ್ಲ. 'ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ' ಎಂಬ ವಚನದಂತೆ ಬಂಧಮೋಕ್ಷಗಳು ಈಶಾ-ಧೀನವೇ ಆಗಿವೆ. ಅದರಂತೆ ಬಾಹ್ಯಾರ್ಥ ಅಜ್ಞಾನ ಜ್ಞಾನಗಳು ಜಡತ್ವ ನಿಮಿತ್ತಕವಾಗಿ ಅಸ್ವತಂತ್ರವಾದ್ದರಿಂದ ಸ್ವಾಪ್ನಾವಿರ್ಭಾವ ತಿರೋಭಾವಗಳು ತನ್ನಿಮಿತ್ತಕವಾಗಿ ಕಂಡರೂ ಅವುಗಳ ಅಧೀನವಲ್ಲ. 'ಸ್ವಪ್ನಾದಿಬುದ್ಧಿಕರ್ತಾ ಚ ತಿರಸ್ಕರ್ತಾ ಸ ಏವ ಚ' ಎಂಬ ಪ್ರಮಾಣದಿಂದ ಈಶಾಧೀನವೇ ಆಗಿವೆ.

ತತ್ತ್ವಪ್ರಕಾಶಿಕೆಯಲ್ಲಿ ಸ್ವಾಪ್ನತಿರೋಧಾನವನ್ನು ಮಾತ್ರ ಪ್ರಧಾನವಾಗಿ ಇಟ್ಟುಕೊಂಡು ಪೂರ್ವಪಕ್ಷ ಮಾಡಿದ್ದಾರೆ. ಸೂತ್ರದಲ್ಲಿ 'ತಿರೋಹಿತಂ' ಎಂದು ಏಕವಚನಾಂತಶಬ್ದದಿಂದ ನಿರ್ದೇಶ ಮಾಡಿದ್ದರಿಂದ ಅದಕ್ಕನುಗುಣವಾಗಿ ತಿರೋಧಾನದ ಬಗ್ಗೆ ಮಾತ್ರ ಮಾಡಿದ್ದಾರೆ. ಆದರೆ ಸ್ವಾಪ್ನ ಆವಿರ್ಭಾವ

ಮತ್ತು ತಿರೋಧಾನ ಎರಡರ ಬಗ್ಗೆಯೂ ಪೂರ್ವಪಕ್ಷ ಅಭಿಮತ ಎಂದು ಭಾವಿಸಬೇಕು. ಏಕೆಂದರೆ -

೧. ಸೂತ್ರದಲ್ಲಿ 'ಬಂಧವಿಪರ್ಯಯೌ' ಎಂದು ದ್ವಿವಚನವಿದೆ. 'ಸ್ವಪ್ನಾದಿಬುದ್ಧಿಕರ್ತಾ' ಎಂಬ ಸ್ಮೃತಿಯಲ್ಲಿ ಆವಿರ್ಭಾವವನ್ನು ಸೇರಿಸಿದ್ದಾರೆ. ಅದರ ಸ್ವಾರಸ್ಯಕ್ಕನುಗುಣವಾಗಿ ಆವಿರ್ಭಾವವು ಪೂರ್ವಪಕ್ಷವಿಷಯತ್ವೇನ ಟೀಕೆಗೆ ಅಭಿಮತವೇ ಆಗಿದೆ.

೨. ಆವಿರ್ಭಾವವು ಅಜ್ಞಾನಾಧೀನ ಎಂಬ ಪೂರ್ವಪಕ್ಷಕ್ಕೆ ನಿರಾಸಕವಾದ ಅಧಿಕರಣಾಂತರವು ಇಲ್ಲವಾದ್ದರಿಂದ ಆ ಪೂರ್ವಪಕ್ಷವನ್ನು ಇಲ್ಲಿಯೇ ಸೇರಿಸುವುದು ಅಭಿಮತ.

೩. ತಿರೋಧಾನ ವಿಷಯಕವಾದ ಪೂರ್ವಪಕ್ಷವನ್ನು ನಿರಾಸಮಾಡುವ ನ್ಯಾಯವು ಆವಿರ್ಭಾವವಿಷಯಕ್ಕೂ ಸಮಾನವೇ ಆಗಿದೆ.

೪. ಈ ಅಧಿಕರಣದ 'ತಿರೋಹಿತಂ' ಎಂಬ ಶಬ್ದವು ಆವಿರ್ಭಾವದ ಉಪಲಕ್ಷಣವೂ ಆಗಿದೆ.

೫. ಟೀಕಾಕೃತ್ಪಾದರೇ ಸಿದ್ಧಾಂತವನ್ನು ವಿವರಿಸುವಾಗ 'ಸ್ವಪ್ನಾವಿರ್ಭಾವತಿರೋಧಾನಯೋಃ' ಎಂದು ಸಮಾನವಾಗಿ ದ್ವಂದ್ವಸಮಾಸದಿಂದ ನಿರ್ದೇಶ-ಮಾಡಿದ್ದಾರೆ. ಆದ್ದರಿಂದ ಪೂರ್ವಪಕ್ಷದಲ್ಲಿಯೂ ಆವಿರ್ಭಾವವನ್ನು ಸೇರಿಸುವುದು ಅವರಿಗೆ ಅಭಿಮತವೇ ಆಗಿದೆ.

## ॥ ಓಂ ದೇಹಯೋಗಾದ್ವಾಸೋಽಪಿ ಓಂ ॥ ೩-೨-೩

ಕಾಣ್ವಶ್ರುತಿಯಲ್ಲಿ ಆರನೇ ಜ್ಯೋತಿರ್ಬ್ರಾಹ್ಮಣದಲ್ಲಿ 'ಸ ವಾ ಏಷ ಏತಸ್ಮಿನ್' ಇತ್ಯಾದಿ ವಾಕ್ಯದಿಂದ ಸ್ವಪ್ನವನ್ನು ಹೇಳಿದ ಬಳಿಕ ಜಾಗ್ರದವಸ್ಥೆಯನ್ನು ಹೇಳಿದ್ದರಿಂದ ಹಿಂದಿನ ಅಧಿಕರಣದಲ್ಲಿ ಸ್ವಪ್ನದ ಆವಿರ್ಭಾವಾದಿ ವಿಚಾರ ಮಾಡಿದ್ದರಿಂದ ಈ ಅಧಿಕರಣದಲ್ಲಿ ಜಾಗ್ರದ್ವಿಚಾರವು ಸಂಗತವಾಗುತ್ತದೆ. ಸಂಧ್ಯಾಧಿಕರಣದಲ್ಲಿ ಸ್ವಾಪ್ನಪದಾರ್ಥಗಳ ಮಿಥ್ಯಾತ್ವವನ್ನು ಚರ್ಚಿಸಲಾಗಿತ್ತು. ಆ ವಿಷಯದಲ್ಲಿ ಬಹುಜನವಿವಾದವಿದ್ದದ್ದರಿಂದ ಮತ್ತು ಬಾಧಕ ಇದ್ದದ್ದರಿಂದ.

ಆದರೆ, ಈ ಅಧಿಕರಣದಲ್ಲಿ ಜಾಗ್ರದವಸ್ಥೆಗೆ ಈಶಾಧೀನತ್ವವನ್ನು ಮಾತ್ರ ವಿಚಾರಿಸಲಾಗಿದೆ. ಅದರ ಸತ್ಯತ್ವ ಮಿಥ್ಯಾತ್ವಗಳ ವಿಚಾರ ಮಾಡಿಲ್ಲ. ಏಕೆಂದರೆ, ಬಹುಜನವಿವಾದವಿಲ್ಲ ಮತ್ತು ಬಾಧಕ ಕಂಡಿಲ್ಲ. ಅಲ್ಪಜನವಿವಾವದವನ್ನು 'ನಾಭಾವ ಉಪಲಬ್ಧೇಃ' ಮತ್ತು 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಎಂಬಲ್ಲಿ ನಿರಾಸಮಾಡಲಾಗಿದೆ.

ದೇಹಾಭಿಮಾನಪೂರ್ವಕವಾದ ಅವಸ್ಥಿತಿಯೇ ಜಾಗ್ರದವಸ್ಥೆ. ಇದು ಹಗಲೇ ಮೊದಲಾದ ಕಾಲಾಧೀನವೇ ಹೊರತು ಈಶಾಧೀನವಲ್ಲ ಎಂದು ಪೂರ್ವಪಕ್ಷ.

**ಸಿದ್ಧಾಂತ** :- ಕಾಲವು ಅಸ್ವತಂತ್ರವಾದ್ದರಿಂದ ಜಾಗ್ರದವಸ್ಥೆಯು ಅದರ ಅಧೀನವಲ್ಲ. ಹಿಂದಿನ ಅಧಿಕರಣಕ್ಕಿಂತ ಈ ಅಧಿಕರಣದಲ್ಲಿ ವಿಶೇಷ ಶಂಕಾ ಏನೆಂದರೆ ಪೂರ್ವಾಧಿಕರಣದಲ್ಲಿ ಶಂಕಿಸಲ್ಪಟ್ಟ ಅಜ್ಞಾನಜ್ಞಾನಗಳಿಗೆ ಸ್ವಾತಂತ್ರ್ಯ ವಿದೆ ಎಂಬ ಬುದ್ಧಿಯು ಬಾಧಕವಶಾತ್ ಭ್ರಮವಾದ್ದರಿಂದ ಅವುಗಳು ಸ್ವತಂತ್ರ ಕಾರಣಗಳಲ್ಲ, ನಿಮಿತ್ತವೆಂದು ಹೇಳಲಾಗಿತ್ತು. ಆದರೆ ಕಾಲವು ಸ್ವತಂತ್ರಕಾರಣ ಎಂಬ ಬುದ್ಧಿಗೆ ಬಾಧಕವಿಲ್ಲವಾದ್ದರಿಂದ ಭ್ರಮವೂ ಇಲ್ಲ. ಆದ್ದರಿಂದ ಕಾಲವೂ ಕೇವಲ ನಿಮಿತ್ತಕಾರಣ ಅಲ್ಲ. ಸ್ವತಂತ್ರಕಾರಣ (ಜಾಗ್ರದಾವಸ್ಥೆಗೆ) ಎಂದು ಅಧಿಕಾರಶಂಕಾ.

**ಪರಿಹಾರ** :- 'ಸ ಏವ ಜಾಗರಿತೇ ಸ್ಥಾಪಯತಿ' ಎಂಬ ಶ್ರುತಿಬಲದಿಂದ ವಿಷ್ಣುವೇ ಸ್ವತಂತ್ರಕಾರಣ. ಕಾಲವು ನಿಮಿತ್ತಮಾತ್ರ. ಈಶ್ವರನ ಸರ್ವನಿಯಾಮಕತ್ವದ ಆಕ್ಷೇಪ ಮತ್ತು ಸಮಾಧಾನಗಳೇ ಫಲ.

## ।। ಓಂ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಹ ಓಂ ।।

## ೩-೨-೪

ಕಾಲಾದಿಗಳಿಗೆ ಅಸ್ವಾತಂತ್ರ್ಯ ಇರುವುದರಿಂದ ಸ್ವಪ್ನ ಜಾಗರಗಳಿಗೆ ಈಶಾಧೀನತ್ವ ಹೇಳಲಾಯಿತು. ಈ ವಿಷಯದಲ್ಲಿ ಬಾಧಕ ಇಲ್ಲದೆ ಇರುವುದರಿಂದ ಅವಶಿಷ್ಟವಾದ ಸುಪ್ತ್ಯವಸ್ಥೆಗೂ ಕೂಡ ಪೂರ್ವನ್ಯಾಯ-ದಿಂದಲೇ ಈಶಾಧೀನತ್ವವು ಸಿದ್ಧವಾಯಿತು. ಈ ಅಧಿಕರಣದಲ್ಲಿ ಸುಪ್ತ

ಜೀವರು ಈಶನಲ್ಲಿ ಸೇರುತ್ತಾರೆ ಎಂಬುದನ್ನು ಸಮರ್ಥಿಸಲು ಸುಪ್ತಿಸ್ವರೂಪವೇ ನಿರೂಪಿಸಲ್ಪಟ್ಟಿದೆ. ಜೀವನ ಸುಪ್ತಿಯು ನಾಡಿ ಮತ್ತು ಪರಮಾತ್ಮರ ಪೈಕಿ ಎಲ್ಲಿ ಯಾದರೂ ಒಂದು ಕಡೆ ಆಗುತ್ತದೋ ಅಥವಾ ಎರಡೂ ಕಡೆಯೋ? 'ಸತಾ ಸೋಮ್ಯ ತದಾ ಸಂಪನ್ನಃ' (ಸುಪ್ತಿಕಾಲದಲ್ಲಿ ಜೀವನು ಪರಮಾತ್ಮನಲ್ಲಿ ಸೇರುತ್ತಾನೆ) ಎಂಬ ಶ್ರುತಿಯು ಮತ್ತು 'ಆಸು ತದಾ ನಾಡೀಷು ಸುಪ್ತೋ ಭವತಿ' (ಜೀವನು ನಾಡಿಗಳಲ್ಲಿ ಸುಪ್ತನಾಗುತ್ತಾನೆ) ಎಂಬ ಶ್ರುತಿ ಇವೆರಡೂ ಶ್ರುತಿಗಳೂ ಜೀವನಿಗೆ ಎರಡು ಕಡೆಯಲ್ಲಿ ಸುಪ್ತಿ ಎಂಬುದಕ್ಕೆ ಆಧಾರವಾಗುವು ದಿಲ್ಲವೋ ಆಗುತ್ತದೋ? ಎರಡು ಕಡೆ ಸುಪ್ತಿಯು ವಿರುದ್ಧವೋ ಅಲ್ಲವೋ? ವಿರುದ್ಧವೆಂಬ ಪಕ್ಷದಲ್ಲಿ ಪರಮಾತ್ಮನಲ್ಲಿ ಸುಪ್ತಿಯೋ ಅಥವಾ ನಾಡಿಯ ಲ್ಲಿಯೋ? ನಾಡಿಯಲ್ಲಿ ಸುಪ್ತಿ ಎಂಬ ಪಕ್ಷದಲ್ಲಿ ಉತ್ತರಕಾಲದ ಪ್ರತ್ಯಭಿಜ್ಞೆಯು (ಸುಖವಾಗಿ ನಿದ್ದೆ ಬಂತು ಎಂಬ ಜ್ಞಾನ) ಅಯುಕ್ತವೋ ಯುಕ್ತವೋ? ಆ ಜ್ಞಾನವು ಸುಪ್ತಿಕಾಲದ ಸುಖಾನುಭವದಿಂದ ಉಂಟಾದ ಸ್ಮರಣೆಯೋ ಅಥವಾ ದುಃಖಾಭಾವದ ಅನುಮಿತಿಯೋ ಎಂಬ ಇಷ್ಟು ವಿಚಾರಗಳು ಈ ಅಧಿಕರಣದಲ್ಲಿ ಮಾಡಲ್ಪಟ್ಟಿವೆ.

ಮೊದಲನೇ ಪಕ್ಷದಲ್ಲಿ (ಅಂದರೆ ಉತ್ತರಕಾಲೀನ ಅನುಸ್ಮೃತಿಯು ಸುಪ್ತಿಕಾಲೀನ ಸುಖಾನುಭವದಿಂದ ಹುಟ್ಟಿದ ಸ್ಮೃತಿರೂಪ ಎಂದು) ಸುಖಾನುಸ್ಮೃತಿಯಿಂದ ಸಿದ್ಧವಾದ ಸುಪ್ತಿಕಾಲೀನ ಕೇವಲ ಸುಖಾನುಭವವು, ಜೀವನು ಈಶ್ವರನಲ್ಲಿ ಪ್ರವೇಶಮಾಡದೇ ಬೇರೆಕಡೆ ಇದ್ದರೆ, ಸಿದ್ಧವಾಗುವುದಿಲ್ಲವಾದ್ದರಿಂದ ಪರಮಾತ್ಮನಲ್ಲೇ ಸುಪ್ತಿಕಾಲದಲ್ಲಿ ಇರುತ್ತಾನೆಂದು ಸಿದ್ಧವಾಗುವುದು. ಹೇಗೆ ಸ್ವಪ್ನಾವಸ್ಥೆಯಲ್ಲಿ ಜೀವನು ಈಶ್ವರನಿಗಿಂತ ಇತರ ಕಡೆಯಲ್ಲಿ ಇರುವುದರಿಂದ ಅವನಿಗೆ ಆ ಕಾಲದಲ್ಲಿ ಕೇವಲ ಸುಖವಿಲ್ಲವೋ ಹಾಗೇ ಎಂದರ್ಥ.

ಕೊನೆಯ ಪಕ್ಷದಲ್ಲಿ, (ಅಂದರೆ, ಉತ್ತರಕಾಲೀನ ಅನುಸ್ಮೃತಿಯು ದುಃ ಖಾಭಾವಾನುಮಿತಿರೂಪ ಎಂದು) ಸುಪ್ತಿಕಾಲದಲ್ಲಿ ಸುಖಾನುಭವವೇ ಇಲ್ಲವಾದ್ದರಿಂದ, ಜೀವನು ಸುಪ್ತಿಕಾಲದಲ್ಲಿ ನಾಡಿಯಲ್ಲಿ ಪ್ರವೇಶ ಮಾಡುತ್ತಾನೆಂದು ಒಪ್ಪಿದರೆ ಯಾವುದೇ ಬಾಧಕವಿಲ್ಲ.

**ಪೂರ್ವಪಕ್ಷ** :- ಜೀವನು ಸುಪ್ತಿಕಾಲದಲ್ಲಿ ಪರಮಾತ್ಮ ಹಾಗು ನಾಡಿ ಎರಡೂ ಕಡೆ ಇರುತ್ತಾನೆಂದರೆ ಅದು ವಿರುದ್ಧವಾದ್ದರಿಂದ ಎರಡು ಶ್ರುತಿಗಳು ('ಸತಾ ಸೌಮ್ಯ'' ಹಾಗು 'ಆಸು ತದಾ ....') ಉಭಯತ್ರ ಸುಪ್ತಿವ್ಯವಸ್ಥೆಯನ್ನು ಮಾಡಲು ಸಮರ್ಥವಾಗುವುದಿಲ್ಲ. ಹಾಗಾಗಿ ಜೀವನು ಸುಪ್ತಿಕಾಲದಲ್ಲಿ ಎರಡರಲ್ಲಿ ಒಂದು ಕಡೆ ಮಾತ್ರ ಇರುತ್ತಾನೆಂದು ಅವಶ್ಯವಾಗಿ ಹೇಳಬೇಕು.

ಉತ್ತರಕಾಲೀನ ಅನುಸ್ಮೃತಿಯು ದುಃಖಾಭಾವಾನುಮಿತಿರೂಪ ಎಂದು ಹೇಳಿದ್ದು ತಪ್ಪು. ಏಕೆಂದರೆ, ಅನುಮಾನದಲ್ಲಿ ಸುಪ್ತಿಕಾಲವನ್ನು ಪಕ್ಷವನ್ನಾಗಿ ಮಾಡಬೇಕು. ಅದು ಸಾಧ್ಯವಿಲ್ಲ. ಸುಪ್ತಿಕಾಲದ ಜ್ಞಾನವೇ ಇರುವುದಿಲ್ಲ-ವಾದ್ದರಿಂದ. ಹಾಗಾಗಿ ಅನುಮಾನವೇ ಹುಟ್ಟಲು ಸಾಧ್ಯವಿಲ್ಲ. ಆದ್ದರಿಂದ ''ಏತಾವಂತಂ ಕಾಲಂ ಸುಖಮಹಂ ಅಸ್ವಾಪ್ಸಂ'' (ನಾನು ಇಲ್ಲಿಯವರೆಗೆ ಸುಖವಾಗಿ ಮಲಗಿದ್ದೆ) ಎಂಬುದನ್ನು ಸ್ಮೃತಿ ಎಂದೇ ಹೇಳಬೇಕು. ಸ್ಮೃತಿಯು ಅನುಭವವಿಲ್ಲದೇ ಹುಟ್ಟಲು ಸಾಧ್ಯವಿಲ್ಲವಾದ್ದರಿಂದ ಸುಖಾನುಭವ ಸಿದ್ಧವಾಗುತ್ತದೆ. ಆ ಸುಖವು ಭಗವಂತನನ್ನು ಬಿಟ್ಟು ಉಳಿದ ಕಡೆ ಜೀವ ಇದ್ದರೆ ಸಾಧ್ಯವಾಗುವುದಿಲ್ಲವಾದ್ದರಿಂದ ಜೀವನು ಸುಪ್ತಿಕಾಲದಲ್ಲಿ ಪರಮಾತ್ಮನಲ್ಲೇ ಇರುತ್ತಾನೆಂದು ಸಿದ್ಧವಾಗುತ್ತದೆ. ''ಸತಾ ಸೌಮ್ಯ ತದಾ ಸಂಪನ್ನೋ ಭವತಿ'' ಎಂಬ ಶ್ರುತಿಯೂ ಈ ವಿಷಯದಲ್ಲಿ ಪ್ರಮಾಣವಾಗಿದೆ. ''ನಾಡೀಷು ಸುಪ್ತೋ ಭವತಿ'' ಎಂಬ ಶ್ರುತಿಯ ವಿರೋಧ ಬರುವುದಿಲ್ಲವೇ? ಎಂದರೆ ಇಲ್ಲ. ''ಸತಾ ಸೌಮ್ಯ ...'' ಎಂಬ ಶ್ರುತಿಯು ಯುಕ್ತಿಸಹಿತವಾದ್ದರಿಂದ ಪ್ರಬಲವಾಗಿದೆ. (ಪ್ರಬಲವಾದ ಈ ಶ್ರುತಿಯಿಂದ ''ನಾಡೀಷು....'' ಎಂಬ ಶ್ರುತಿಗೆ ಬಾಧವನ್ನು ಹೇಳಬೇಕು.)

**ಸಿದ್ಧಾಂತ** :- ಜೀವನು ಸುಪ್ತಿಕಾಲದಲ್ಲಿ ನಾಡಿಯಲ್ಲಿರುವ ಪರಮಾತ್ಮನಲ್ಲಿ ಪ್ರವೇಶ ಮಾಡುತ್ತಾನೆ ಎಂದೇ ಹೇಳಬೇಕು. ಏಕೆಂದರೆ ಉದಾಹರಿಸಿದ ಎರಡೂ ಪ್ರಮಾಣಗಳು ಶ್ರುತಿರೂಪವಾಗಿದೆ. ಶ್ರುತಿಯು ನಿತ್ಯ ನಿರ್ದೋಷವಾದ್ದರಿಂದ ಪ್ರಮಾಣವಾಗಿದೆ. ಅಂತಹ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬಾರದು. ವಿರೋಧಪರಿಹಾರ ಹೇಗೆ ? ಎಂದರೆ, ಸಾಕ್ಷಾತ್ತ್ವ ಹಾಗು ಅಸಾಕ್ಷಾತ್ತ್ವವನ್ನು ಇಟ್ಟುಕೊಂಡು ವ್ಯವಸ್ಥೆ ಮಾಡಬೇಕು. ಅಂದರೆ, ಜೀವನು ಸಾಕ್ಷಾತ್

ಪರಮಾತ್ಮನಲ್ಲಿ ಪ್ರವೇಶ ಮಾಡುತ್ತಾನೆ. ಪರಮಾತ್ಮನು ನಾಡಿಯಲ್ಲಿರುವುದರಿಂದ ಅಸಾಕ್ಷಾತ್ ನಾಡಿಯಲ್ಲೂ ಪ್ರವೇಶ ಸಿದ್ಧವಾಗುತ್ತದೆ.

**ಅಧಿಕರಣ ಫಲ** :- ಸುಪ್ತಿಯಲ್ಲಿ ವ್ಯವಸ್ಥೆಯನ್ನು ಹೇಳದೇ ಹೋದರೆ ಭಕ್ತಿ ಪ್ರಚೋದಕವಾದ ಶಾಸ್ತ್ರದಲ್ಲಿ ಅನಾಸ್ಥೆ ಉಂಟಾಗಿ ಭಕ್ತಿಯೇ ಹುಟ್ಟುವುದಿಲ್ಲ. ಇದೇ ಪೂರ್ವಪಕ್ಷ ಫಲ. ಸುಪ್ತಿಯಲ್ಲಿ ವ್ಯವಸ್ಥೆಯನ್ನು ಮಾಡಿದರೆ ಆಗ ಅಂತಹ ಶಾಸ್ತ್ರದಲ್ಲಿ ಆಸ್ಥೆ ಹುಟ್ಟಿ ಭಕ್ತಿ ಉಂಟಾಗುತ್ತದೆ. ಇದೇ ಸಿದ್ಧಾಂತ ಫಲ. ತತ್ವಪ್ರಕಾಶಿಕಾದಲ್ಲಿ ಅನ್ಯತರತ್ರ (ಎರಡರಲ್ಲಿ ಒಂದು ಕಡೆ) ಎಂಬ ಪಕ್ಷವನ್ನು ಸಿದ್ಧ ಎಂದು ಇಟ್ಟುಕೊಂಡು ಪರಮಾತ್ಮನಲ್ಲೋ? ನಾಡಿಗಳಲ್ಲೋ? ಎಂದು ಸಂದೇಹವನ್ನು ತೋರಿಸಿದ್ದಾರೆ. ನಾಡಿಗಳಲ್ಲೇ ಎಂದು ಹೇಳುವವರ ಪಕ್ಷವನ್ನು ತಿರಸ್ಕರಿಸಿ ಪರಮಾತ್ಮನಲ್ಲೇ ಎಂದು ಪೂರ್ವಪಕ್ಷ ಮಾಡಿಕೊಂಡು ಆ ನೆಪದಿಂದ ಪರಮಾತ್ಮನಲ್ಲಿ ಪ್ರವೇಶವನ್ನು ಸ್ಥಾಪನೆ ಮಾಡಿ ಕೊನೆಗೆ ಉಭಯತ್ರ (ನಾಡೀಸ್ಥಪರಮಾತ್ಮನಲ್ಲಿ) ಎಂಬುದನ್ನೇ ಸಿದ್ಧಾಂತವಾಗಿ ಹೇಳಿದ್ದಾರೆ. (ಹಾಗಾಗಿ ಇಲ್ಲಿ ಹೇಳಿದ್ದು ಟೀಕಾನುಸಾರವಾಗಿಯೇ ಇದೆ.)

## ॥ ಓಂ ಅತಃ ಪ್ರಬೋಧೋಽಸ್ಮಾತ್ ಓಂ ॥ ೩-೨-೫

ಹಿಂದೆ ಹೇಳಿದ ಸುಪ್ತಪ್ರಾಪ್ಯತ್ವ ಎಂಬ ಹೇತುವಿನಿಂದಲೇ ಇಲ್ಲಿ ಸಿದ್ಧಾಂತ ಮಾಡುತ್ತಿರುವುದರಿಂದ ಸಂಗತಿಯಿದೆ. ಸುಪ್ತಪ್ರಬೋಧವು ಕೆಲವೊಮ್ಮೆ ಭೇರೀತಾಡನಾದಿಗಳಿಂದಲೂ ಆಗುತ್ತದೋ ಅಥವಾ ಯಾವಾಗಲೂ ಸುಪ್ತಪ್ರಬೋಧವು ಕೇವಲ ಪರಮಾತ್ಮಾಧೀನವೇ ಆಗಿದೆಯೋ? ಭೇರೀತಾಡನಾದಿಗಳಿಂದಲೂ ಎಚ್ಚರವಾಗಿರುವುದು ಕಂಡಿರುವುದರಿಂದ ಭೇರಿತಾಡನಾದಿಗಳು (ಕಾಲಾದಿಗಳಂತೆ) ಕೇವಲ ನಿಮಿತ್ತ ಎಂದು ಹೇಳಲು ಕಲ್ಪಕವಿಲ್ಲವೋ ಅಥವಾ ಇದೆಯೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ** :- ಕೆಲವೊಮ್ಮೆ ಭೇರೀತಾಡನಾದಿಗಳಿಂದಲೂ ಪ್ರಬೋಧವಾಗಿರುವುದು ಅನುಭವಸಿದ್ಧವಾಗಿದೆ. ಬೇರೆ ಕಾರಣಗಳಿರುವಾಗಲೂ ಪ್ರಬೋಧವು ಈಶ್ವರನಿಂದಲೇ ಆಗುತ್ತದೆ ಎನ್ನುವುದಕ್ಕೆ ಯಾವುದೇ ಪ್ರಮಾಣವಿಲ್ಲ. ಹಾಗಾಗಿ ಬೇರೆ ಕಾರಣಗಳಿಲ್ಲದಿರುವಾಗ ಪ್ರಬೋಧವು

ಈಶ್ವರನಿಂದಾದರೂ ಬೇರೆ ಕಾರಣಗಳಿರುವಾಗ ಆ ಕಾರಣಗಳೇ ಸ್ವತಂತ್ರವಾಗಿ ಪ್ರಬೋಧಕ್ಕೆ ಹೇತುವಾಗುತ್ತದೆ. ಈ ಕಾರಣಾಂತರಗಳು ನಿಮಿತ್ತಮಾತ್ರ ಎಂದು ಹೇಳಲು ಯಾವುದೇ ಪ್ರಮಾಣವಿಲ್ಲ.

**ಸಿದ್ಧಾಂತ** :- ಸುಪ್ತಪ್ರಬೋಧಕ ಈಶ್ವರನೇ. ಭೇರೀತಾಡನಾದಿಗಳಿಗೆ ಈ ವಿಷಯದಲ್ಲಿ ಸ್ವಾತಂತ್ರ್ಯವಿಲ್ಲ. ''ಏಷ ಏವ ಸುಪ್ತಂ ಪ್ರಬೋಧಯತಿ'' ಎಂಬ ಅವಧಾರಣ (ಏವಕಾರ) ಸಹಿತವಾದ ಶ್ರುತಿಯು ಈಶ್ವರನಿಂದಲೇ ಪ್ರಬೋಧ ಎಂದು ಹೇಳುತ್ತಿರುವುದರಿಂದ ಬೇರೆ ಕಾರಣಗಳಿಗೆ ಸ್ವಾತಂತ್ರ್ಯವನ್ನು ಒಪ್ಪಿದರೆ ಈ ಶ್ರುತಿಯ ವಿರೋಧ ಬರುತ್ತದೆ. ಆದ್ದರಿಂದ ಭೇರೀತಾಡನಾದಿಗಳು ನಿಮಿತ್ತಮಾತ್ರ ಎನ್ನಬೇಕು.

**ಅಧಿಕರಣ ಫಲ** :- 'ಅಥ' ಶಬ್ದದಿಂದ ಹೇಳಲ್ಪಟ್ಟ ಭಕ್ತಿಯ ಆಕ್ಷೇಪ ಹಾಗು ಸಮಾಧಾನವೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ. (ಸುಪ್ತ-ಪ್ರಬೋಧಕತ್ವವು ಭಗವಂತನಲ್ಲಿ ಸಿದ್ಧವಾಗದೇ ಹೋದರೆ ಅತಿಶಯಭಕ್ತಿ ಹುಟ್ಟುವುದಿಲ್ಲ. ಸಿದ್ಧವಾದರೆ ಹುಟ್ಟುತ್ತದೆ. ಎಂದರ್ಥ.।

## ॥ ಓಂ ಸ ಏವ ಚ ಕರ್ಮಾನುಸ್ಮೃತಿ ಶಬ್ದ ವಿಧಿಭ್ಯಃ ಓಂ ॥
## ೩-೨-೬

ಪೂರ್ವಾಧಿಕರಣದಲ್ಲಿ ವಿಷ್ಣುವೇ ಸ್ವಪ್ನಾದಿ ಅವಸ್ಥಾ ಪ್ರೇರಕನೆಂದು ಸಾಮಾನ್ಯವಾಗಿ ಹೇಳಲ್ಪಟ್ಟಿತು (ಯಾವ ಯಾವ ಜೀವರ ಸ್ವಪ್ನಾದಿಗಳು ಎಷ್ಟು ಕಾಲದ ವರೆಗೆ ನಿಯಮಾಕ ಎಂಬ ವಿಷಯಗಳನ್ನು ಸ್ಪರ್ಶಿಸದೇ ಕೇವಲ ಸ್ವಪ್ನಾದ್ಯವಸ್ಥಾ ಪ್ರೇರಕ) ಎಂದು ಹೇಳಲ್ಪಟ್ಟಿತು. ಈ ಅಧಿಕರಣದಲ್ಲಿ ಸಾರ್ವಜನೀನವಾದ ಸಾರ್ವಕಾಲಿಕವಾದ ಸ್ವಪ್ನಾದಿಗಳು ಈಶಾಧೀನ ಎಂದು ಹೇಳಲಾಗುವುದು. ಆದ್ದರಿಂದ ಸಂಗತವಾಯಿತು. ಸ್ವಪ್ನಾದಿ ಪ್ರೇರಕತ್ವೇನ ಪ್ರಕೃತನಾದ ವಿಷ್ಣುವು ಕೆಲವರಿಗೆ ಕೆಲವು ಕಾಲದಲ್ಲಿ ಮಾತ್ರ ಪ್ರೇರಕನೋ ಅಥವಾ ಸರ್ವಜೀವರಿಗೆ ಸರ್ವಕಾಲದಲ್ಲೂ ಪ್ರೇರಕನೋ? ಎಂಬ ವಿಚಾರ. ಅದಕ್ಕಾಗಿ ಲೋಕದೃಷ್ಟಿಯು ನಿಯಾಮಕವಾಗುತ್ತದೋ ಇಲ್ಲವೋ? ರಾಜಾದಿಗಳಲ್ಲಿರುವ ಲೋಕದೃಷ್ಟಿಗೆ

ಅಪವಾದಕವಾದ ಪ್ರಮಾಣ ವಿಷ್ಣು ವಿಷಯದಲ್ಲಿ ಇಲ್ಲವೋ ಇದೆಯೋ? ಎಂಬ ಚರ್ಚೆಯು ಇಲ್ಲಿ ಮಾಡಲ್ಪಟ್ಟಿದೆ.

**ಪೂರ್ವಪಕ್ಷ** :- ಈಶನು ಕೆಲವರಿಗೆ ಮಾತ್ರ ಕೆಲವು ಕಾಲದಲ್ಲಿ ಮಾತ್ರ ಸ್ವಪ್ನಾದಿ ಅವಸ್ಥಾಪ್ರೇರಕ. ಎಲ್ಲರಿಗೆ ಎಲ್ಲ ಕಾಲದಲ್ಲಿ ಅಲ್ಲ. ಲೋಕದಲ್ಲಿ ರಾಜಾದಿಗಳಿಗೆ ಖಂಡಾಧಿಪತಿತ್ವವೇ ಕಂಡಿದೆ ಹೊರತು ಸರ್ವಾಧಿಪತಿತ್ವವಲ್ಲ.

**ಪ್ರಶ್ನೆ** :- ಈಶನ ವಿಷಯದಲ್ಲಿ ಲೋಕದೃಷ್ಟಿಯು ಅಪ್ರಯೋಜಕ! ಅದನ್ನು ಇಲ್ಲಿ ಅನ್ವಯಿಸಲಾಗದು.

**ಪರಿಹಾರ** :- ಶಂಕೆ ಸರಿಯಲ್ಲ. ಏಕೆಂದರೆ ಲೋಕದೃಷ್ಟಿಯನ್ನು ಅನುಸರಿಸಿಯೇ ಸ್ವಪ್ನಾದಿಗಳಿಗೆ ಬಾಹ್ಯಾಜ್ಞಾನ, ಕಾಲ, ಭೇರಿತಾಡನಾದಿಗಳನ್ನು ನಿಮಿತ್ತ ಎಂದು ಒಪ್ಪಿದ್ದು ಸರಿಯಾಗಲಿಕ್ಕಿಲ್ಲ.

**ಪ್ರಶ್ನೆ** :- ಅನ್ಯಭಾವ ವ್ಯಾವೃತ್ತೇಶ್ಚ ಎಂಬ ಸೂತ್ರದಲ್ಲಿ ಲೋಕದೃಷ್ಟಿಯನ್ನು ಬಿಟ್ಟು ಈಶನಲ್ಲಿ ಅಣುತ್ವ-ಮಹತ್ತ್ವ, ಸ್ತ್ರೀತ್ವ-ಪುಂಸ್ತ್ವಗಳನ್ನು ಅಂಗೀ-ಕರಿಸಿದ್ದಾರೆ. ಮತ್ತು ಅಲ್ಪಶ್ರುತೇರಿತಿ ಚೇತ್ ತದುಕ್ತಂ ಎಂಬಲ್ಲಿ ಅಕಾಶಾಂಶಕ್ಕೆ ಅಪೂರ್ಣತ್ವವಿದ್ದರೂ ಆ ಲೋಕದೃಷ್ಟಿಯನ್ನು ಬಿಟ್ಟು ಈಶಾಂಶಕ್ಕೆ ಪೂರ್ಣತ್ವವನ್ನು ಹೇಳಿದ್ದಾರೆ. ಹಾಗೆಯೇ ಶ್ರುತೇಸ್ತು ಎಂಬಲ್ಲಿಯೂ ನಿರಂಶನಾದ ಜೀವನಿಗೆ ಏಕದೇಶದಿಂದ ಪ್ರವೃತ್ಯಭಾವ ಇದ್ದರೂ ಈ ಲೋಕದೃಷ್ಟಿಯನ್ನೂ ಬಿಟ್ಟು ಈಶನಿಗೆ ನಿರಂಶನಾಗಿದ್ದರೂ ಏಕದೇಶದಿಂದ ಪ್ರವೃತ್ತಿಯನ್ನು ಒಪ್ಪಿದ್ದಾರೆ. ಅದರಂತೆಯೇ ಲೋಕದಲ್ಲಿ ಖಂಡೇಶತ್ವ ಕಂಡಿದ್ದರೂ ಈಶನಲ್ಲಿ ಸರ್ವಪ್ರೇರಕತ್ವ ಬರಲಿ.

**ಪರಿಹಾರ** :- ಈಶನಲ್ಲಿ ಅಣುತ್ವ-ಮಹತ್ತ್ವಾದಿಗಳನ್ನು ಅಂಗೀಕರಿಸಲು ಆಧಾರವಾಗಿ ಅಣೋರಣೀಯಾನ್ - ಅಸ್ಥೂಲಮನಣು ಏಷ ಮ ಆತ್ಮಾ.. ಯೇಸೌ ವಿರುದ್ಧಃ ಅವಿರುದ್ಧಃ ಇತ್ಯಾದಿ ಪ್ರಮಾಣಗಳಿವೆ. ಆದ್ದರಿಂದ ಲೋಕ ದೃಷ್ಟಿಯನ್ನು ಕೈಬಿಡಲಾಗಿದೆ. ಆದರೆ ಸರ್ವಪ್ರೇರಕತ್ವಕ್ಕೆ ಯಾವ ಪ್ರಮಾಣವಿಲ್ಲ ವಾದ್ದರಿಂದ ಲೋಕದೃಷ್ಟಿಯಂತೆ ಅಲ್ಪ ಪ್ರೇರಕತ್ವವನ್ನೇ ಹೇಳಬೇಕು.

**ಸಿದ್ಧಾಂತ** :- ಏಷ ಹ್ಯೇವ ಸಾಧು ಕರ್ಮ ಕಾರಯತಿ ಎಂಬ ಶ್ರುತಿಯಲ್ಲಿ ಇವನೇ ಎಲ್ಲ ಕರ್ಮ ಮಾಡಿಸುವವನು ಎಂದು ಅವಧಾರಣ ಇರುವುದರಿಂದ ವಿಷ್ಣುವೇ ಸರ್ವಜೀವರಿಗೂ ಸರ್ವಕಾಲದಲ್ಲಿಯೂ ಪ್ರೇರಕ. ಯಾವ ಕಾಲದಲ್ಲಿ ಯಾರಿಗೂ ಬೇರೊಬ್ಬರಿಲ್ಲ. ಮತ್ತು ಅರ್ಥಾಪತ್ತಿ ಪ್ರಮಾಣವೂ ಇದೆ. ಹೇಗೆಂದರೆ.... 'ಆತ್ಮಾನಮೇವ ಲೋಕಮುಪಾಸೀತ (ವಿಷ್ಣುವನ್ನೇ ಉಪಾಸನೆ ಮಾಡಬೇಕು) ಎಂದು ಶ್ರುತಿ ಇದೆ. ಇತರರೂ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆಯವರಿಗೆ ಪ್ರೇರಕರಾಗಿದ್ರೆ ಇವನೊಬ್ಬನೇ ಉಪಾಸ್ಯ ಎಂದು ಹೇಳಿದ್ದು ಸರಿಯಾಗುವುದಿಲ್ಲ. ಆದರೆ ಶ್ರುತಿಯಲ್ಲಿ ಹೇಳಿದ್ದಾರೆ ಅದನ್ನು ಸರಿ-ಗೂಡಿಸಬೇಕಾದರೆ ಇವನೊಬ್ಬನೇ ಸರ್ವಪ್ರೇರಕ ಎನ್ನಬೇಕು. ಲೌಕಿಕ ಧೇನುವಿನಲ್ಲಿ ಕಾಣದ ಮಹಿಮೆಯನ್ನು ಕಾಮಧೇನುವಿನಲ್ಲಿ ಒಪ್ಪುವಂತೆ ಶ್ರುತ್ಯಾದಿ ಪ್ರಮಾಣಗಳಿಂದ ಲೋಕದೃಷ್ಟಿಯನ್ನು ಬಿಟ್ಟು ಈಶನಿಗೆ ಸರ್ವಪ್ರೇರಕತ್ವ ಒಪ್ಪಿದರೆ ವಿರೋಧವೇನೂ ಇಲ್ಲ.

ವಿಷ್ಣುವಿನ ಜಗತ್ಕರ್ತೃತ್ವದ ಆಕ್ಷೇಪ ಮತ್ತು ಸಮಾಧಾನಗಳೇ ಫಲ.

## ॥ ಓಂ ಮುಗ್ಧೇಽರ್ಧಸಂಪತ್ತಿಃ ಪರಿಶೇಷಾತ್ ಓಂ ॥
## ೩-೨-೭

ಇದುವರೆಗೆ ಪ್ರಧಾನವಾದ ಅವಸ್ಥೆಗಳ ವಿಚಾರ ಮಾಡಲಾಯಿತು. ಈ ಅಧಿಕರಣದಲ್ಲಿ ಅವಾಂತರ ಅವಸ್ಥೆಯ ವಿಚಾರ ಮಾಡುವುದರಿಂದ ಪೂರ್ವಾಧಿಕಾರಣದಿಂದ ಸಂಗತಿ. ಪೂರ್ವಾಧಿಕರಣದಲ್ಲಿ ಸ್ವಪ್ನಾದಿ ಅವಸ್ಥಾವಿಚಾರ ಮಾಡಿದ್ದರಿಂದ ಅದರಿಂದ ಸ್ಮರಣೆಗೆ ಬಂದಂತಹ ಮೋಹಾವಸ್ಥೆಯು ಸ್ವಪ್ನ, ಸುಪ್ತಿ, ಜಾಗ್ರತ್ ಈ ಅವಸ್ಥೆಗಳಲ್ಲಿ ಸೇರುತ್ತದೆಯೋ ಎಂಬ ವಿಚಾರ ಇಲ್ಲಿ ಮಾಡಲಾಗಿದೆ. ಅದಕ್ಕಾಗಿ ಆ ಮೋಹವು ಭಗವತ್ಪ್ರಾಪ್ತಿ - ಅನ್ಯತ್ರ ಸ್ಥಿತಿ ಇವುಗಳ ಪೈಕಿ ಒಂದೋ ಅಥವಾ ಬೇರೆ ವಿಧವೋ? ಬೇರೆ ವಿಧ ಎನ್ನುವುದಕ್ಕೆ ಪ್ರಮಾಣ ಇಲ್ಲವೋ ಇದೆಯೋ? ಇಲ್ಲವೆಂದರೆ ಅದು ಅವಸ್ಥಾಂತರವಲ್ಲ. ಇದೆ ಎಂದರೆ ಅದು ಅವಸ್ಥಾಂತರ ಎಂದು ಫಲ. ಹಾಗೆಯೇ ಭಗವತ್ಪ್ರಾಪ್ತಿ ಮತ್ತು ಅನ್ಯತ್ರಸ್ಥಿತಿ ಇವುಗಳ ಪೈಕಿ ಒಂದು ಎಂಬ ಪಕ್ಷದಲ್ಲಿ ಭಗವತ್ಪ್ರಾಪ್ತಿರೂಪ ಅಥವಾ ಅನ್ಯತ್ರಸ್ಥಿತಿಯೋ ಎಂದು ಸಂದೇಹ.

ಅದಕ್ಕಾಗಿ ಮೋಹವು ಸುಪ್ತಿಯಧರ್ಮವುಳ್ಳದ್ದೋ ಅಥವಾ ಜಾಗ್ರತ್-ಸ್ವಪ್ನಧರ್ಮವುಳ್ಳದ್ದೋ ಎಂಬ ವಿಚಾರಗಳು ಇಲ್ಲಿ ಮಾಡಲ್ಪಟ್ಟಿವೆ. ಸುಪ್ತಿಯ ಧರ್ಮವುಳ್ಳದ್ದಾದರೆ ಭಗವತ್ಪ್ರಾಪ್ತಿರೂಪವಾಗುತ್ತದೆ ಎಂಬುದೇ ಫಲಫಲಿಭಾವ. ತತ್ತ್ವಪ್ರಕಾಶಿಕೆಯಲ್ಲಿಯಾದರೂ 'ಸ್ವಪ್ನಾದಿ ಅವಸ್ಥಾತ್ರಯದಲ್ಲಿ ಒಂದೋ ಅಥವಾ ಬೇರೆಯೋ ಎಂಬ ಸಂದೇಹವನ್ನು ತೋರಿಸಿಲ್ಲ. ಸಿದ್ಧಾಂತದಲ್ಲಿ ಹೇಳಿದ ಮಾರ್ಗದಿಂದ ಸುಜ್ಞೇಯವಾಗಿದೆ. (ಹೇಗೆಂದರೆ ಮೋಹಾವಸ್ಥೆಯಲ್ಲಿ ನಾಲ್ಕು ಪ್ರಕಾರಗಳು ಸಂಭಾವಿತ. ೧. ಪರಮಾತ್ಮ ವಿದೂರತ್ವ, ೨. ಸಾಮೀಪ್ಯ, ೩. ಪ್ರವೇಶ, ೪. ಅರ್ಧಪ್ರವೇಶಗಳು. ಇವುಗಳ ಪೈಕಿ ಮೊದಲ ಮೂರು ಜಾಗ್ರತ್‌ಸ್ವಪ್ನಸುಪ್ತಿಧರ್ಮಗಳಾದ್ದರಿಂದ ಮೋಹದಲ್ಲಿ ಅವುಗಳು ಪ್ರಸಕ್ತವಲ್ಲ. ಆದ್ದರಿಂದ ಅರ್ಧಪ್ರವೇಶವನ್ನೇ ಹೇಳಬೇಕು. ಇದರಿಂದ ಮೇಲೆ ತೋರಿಸಲ್ಪಟ್ಟ ಸಂದೇಹವು ಸುಜ್ಞೇಯವೇ ಆಗುತ್ತದೆ). ಮೋಹವು ಪ್ರಧಾನ ವಾದ ಅವಸ್ಥಾಂತರವಲ್ಲ ಎಂಬುದನ್ನು ತೋರಿಸಲು ಸ್ವಪ್ನಾದಿತ್ರಯ ಅನ್ಯ-ತಮತ್ವವನ್ನು ಸಿದ್ಧವೆಂದು ಭಾವಿಸಿ 'ಮೋಹಾವಸ್ಥೆಯಲ್ಲಿ ಜೀವನಿಗೆ ಈಶ್ವರನಲ್ಲಿ ಪ್ರವೇಶವೋ ಅಥವಾ ಬೇರೆ ಕಡೆಯೋ ಎಂಬ ಸಂದೇಹವನ್ನು ಮಾತ್ರ ತೋರಿಸಿದ್ದಾರೆ. ಪೂರ್ವಪಕ್ಷವನ್ನು ಅದಕ್ಕನುಗುಣವಾಗಿ ಮಾಡಿದ್ದಾರೆ. ಮೋಹಾವಸ್ಥೆಯಲ್ಲಿ ಜೀವನಿಗೆ ಬ್ರಹ್ಮಪ್ರವೇಶವನ್ನೇ ಹೇಳಬೇಕು. ಅದು ಜಾಗ್ರತ್‌ಸ್ವಪ್ನಕ್ಕಿಂತ ಬೇರೆಯಾದ್ದರಿಂದ ಎಂದು ಪೂರ್ವಪಕ್ಷವನ್ನು ತೋರಿ-ಸಿದ್ದಾರೆ. ನ್ಯಾಯವಿವರಣದಲ್ಲಿ ಪೃಥಗವಸ್ಥಾತ್ವಾತ್ ಎಂದು ಹೇಳಲ್ಪಟ್ಟಿದೆ. ಟೀಕಾಕೃತ್ಪಾದರು ಇದಕ್ಕೆ ಜಾಗ್ರತ್ಸ್ವಪ್ನಗಳಿಗಿಂತ ಪೃಥಕ್ಕಾದ್ದ-ರಿಂದ ಎಂದು ಅರ್ಥೈಸಿದ್ದಾರೆ. ಹಾಗಾಗಿ ಮೊದಲನೆಯ ಸಂದೇಹವು ಕೈಬಿಡಲಾಗಿದೆ. ಅಷ್ಟೇ ಹೊರತು ಅಭಿಹಿತವಲ್ಲ ಎಂದು ಭಾವಿಸಬಾರದು. ಆದ್ದರಿಂದಲೇ ಸಿದ್ಧಾಂತದಲ್ಲಿ 'ಮೋಹಸ್ಯ ಅವಸ್ಥಾತ್ರಯಾತಿರಿಕ್ತತ್ವೇ ಸ್ಯಾದೇತತ್' ಎಂಬುದು ಕೂಡುತ್ತದೆ.

**ಪೂರ್ವಪಕ್ಷ** :- ಮೋಹವು ಸ್ವಪ್ನಾದಿ ಮೂರು ಅವಸ್ಥಾಗಳಲ್ಲಿ ಅಂತ-ರ್ಭೂತವಾಗಿದೆ. ಅತಿರಿಕ್ತವಲ್ಲ. ಏಕೆಂದರೆ, ಹಾಗೆನ್ನಲು ಪ್ರಮಾಣವಿಲ್ಲ. ಜೀವ ನಿಗೆ ಬ್ರಹ್ಮಪ್ರವೇಶ ಮತ್ತು ಅನ್ಯತ್ರಸ್ಥಿತಿಗಳು ಎರಡು ಪ್ರಸಕ್ತ. ಬೇರೆ ವಿಧವಾದ

ಸ್ಥಿತಿ ಇಲ್ಲವೇ ಇಲ್ಲ. ಇವೆರಡಾದರೂ ಸುಪ್ತಿ - ಜಾಗ್ರದವಸ್ಥಾರೂಪ-ಗಳಾದ್ದರಿಂದ ಮೋಹವು ಅತಿರಿಕ್ತಾವಸ್ಥೆಯಾಗಲು ಶಕ್ಯವಿಲ್ಲ. ಬಾಹ್ಯಾರ್ಥ ಅಜ್ಞಾನಾದಿಗಳ ಸಾಮ್ಯವಿರುವುದರಿಂದ ಅವಸ್ಥಾತ್ರಯದಲ್ಲಿ ಸೇರುವುದೇ ಸಂಭಾವಿತ. ಅಂತರ್ಭಾವಪಕ್ಷದಲ್ಲಿಯೂ ಅನ್ಯತ್ರಸ್ಥಿತಿರೂಪವಾದ ಜಾಗ್ರತ್ಸ್ವಪ್ನ-ಗಳಲ್ಲಿ ಸೇರುವುದಿಲ್ಲ. ಏಕೆಂದರೆ ಜಾಗ್ರತ್ತಿನಲ್ಲಿ ಬಾಹ್ಯ ಪದಾರ್ಥಜ್ಞಾನ-ವಿರುತ್ತದೆ. ಸ್ವಪ್ನದಲ್ಲಿ ಸ್ವಾಪ್ನಾರ್ಥಜ್ಞಾನವಿರುತ್ತದೆ. ಮೋಹದಲ್ಲಿ ಯಾವ ಜ್ಞಾನವೂ ಇರುವುದಿಲ್ಲ. ಆದ್ದರಿಂದ ಸುಪ್ತಿಗೆ ಸಮಾನವಾಯಿತು. ಹೀಗಾಗಿ ಸಮಗ್ರಭಗವತ್ಪ್ರವೇಶರೂಪವಾದ ಸುಪ್ತಿಯಲ್ಲೇ ಸೇರುತ್ತದೆ.

**ಸಿದ್ಧಾಂತ** :- ಮೋಹದಲ್ಲಿ 'ದುಃಖಮಾತ್ರಪ್ರತಿಸ್ಮೃತೇಃ' ಎಂಬ ವಚನದ ಆಧಾರದಿಂದ ದುಃಖ-ಆತ್ಮ-ಕಾಲ ಇವುಗಳನ್ನು ಬಿಟ್ಟು ಯಾವ ಜ್ಞಾನವೂ ಇರುವುದಿಲ್ಲ. ಸುಪ್ತಿಯಲ್ಲಿಯಾದರೆ ಸುಖಾದಿಜ್ಞಾನವಿರುತ್ತದೆ. ಆದ್ದರಿಂದ ಮೋಹವು ದುಃಖಮಾತ್ರಾನುಭವರೂಪವಾಗಿದೆ. ಎಂಬ ಯುಕ್ತಿಯಿಂದ ಈ ಮೂರಕ್ಕಿಂತ ಅತಿರಿಕ್ತವೇ ಆಗಿದೆ. ಪರಮಾತ್ಮವಿದೂರತ್ವ ಸಾಮೀಪ್ಯ ಪ್ರವೇಶ-ಗಳನ್ನು ಜೀವನಿಗೆ ಮೋಹಾವಸ್ಥೆಯಲ್ಲಿ ಹೇಳಲು ಬರದಿದ್ದರೂ ಪರಿಶೇಷಾತ್ ಅರ್ಧಪ್ರವೇಶವನ್ನು ಹೇಳಬಹುದು. 'ಹೃದಯಸ್ಥಾತ್ ಪರೋ ಜೀವಃ' ಎಂಬ ಸ್ಮೃತಿಯಿಂದ ಇದು ಸಿದ್ಧವಾಗಿದೆ.

**ಫಲ** :- ಮೋಹಾವಸ್ಥೆಯಲ್ಲಿರುವ ಜೀವನಿಂದ ಪ್ರಾಪ್ಯನಲ್ಲ ಎಂಬ ಕಾರಣದಿಂದ ಮಹಾಮಹಿಮೆ ಇಲ್ಲದ ಪ್ರಯುಕ್ತ ಭಕ್ತಿ ಬೇಕಾಗಿಲ್ಲ ಎಂಬ ಆಕ್ಷೇಪ ಹಾಗೂ ಸಮಾಧಾನಗಳೇ ಫಲ.

ಮೋಹಾವಸ್ಥೆಯು ಬಾಹ್ಯಕಾರಣಾಧೀನವೋ ಈಶಾಧೀನವೋ ಎಂದು ಸಂದೇಹ ಬಂದಾಗ ಬಲವಾದ ಹೊಡೆತದಿಂದ ಮೋಹ (ಮೂರ್ಛೆ) ಬರುವುದರಿಂದ ಈಶಾಧೀನವಲ್ಲ ಎಂದು ಪೂರ್ವಪಕ್ಷವೂ ಬಂದಾಗ 'ಸ ಏವ ಚ' ಎಂಬ ಹಿಂದಿನ ಸೂತ್ರದಿಂದಲೇ ಈಶಾಧೀನವೆಂದೇ ಸಿದ್ಧಾಂತ. ಪ್ರಬಲವಾದ ಹೊಡೆತ ಮೊದಲಾದವುಗಳು ನಿಮಿತ್ತಮಾತ್ರವೇ ಆಗಿವೆ. 'ಮೂರ್ಛಾ ಪ್ರಬೋಧನಂ' ಎಂಬ ಸ್ಮೃತಿಯೇ ಇದಕ್ಕೆ ಆಧಾರ ಎಂಬ ಈ ವಿಚಾರವು ಪೂರ್ವಾಧಿಕರಣದಿಂದಲೇ ಸಿದ್ಧವಾಗುವುದರಿಂದ ಅದನ್ನು ಇಲ್ಲಿ ಸ್ಪರ್ಶ ಮಾಡದೇ ಕೇವಲ ಮೋಹಸ್ವರೂಪದ ವಿಚಾರ ಮಾತ್ರ ಮಾಡಲಾಗಿದೆ.

## ॥ ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ ॥ ೩-೨-೮

ಪೂರ್ವಾಧಿಕರಣದಲ್ಲಿ ಭಗವಂತನಿಗೆ ಸರ್ವಾವಸ್ಥಾ ಪ್ರೇರಕತ್ವವನ್ನು ಹೇಳಲಾಯಿತು. ಇಲ್ಲಿ ಆ ಪ್ರವರ್ತಕರೂಪಗಳ ವಿಷಯದಲ್ಲಿ ಬರುವ ಭೇದ ಶಂಕೆಯನ್ನು ಪರಿಹರಿಸುವುದರಿಂದ ಅನಂತರ ಸಂಗತಿ. ಪ್ರತಿ ಶರೀರದಲ್ಲಿ ಜಾಗ್ರಾದಿ ಸ್ಥಾನಗಳಲ್ಲಿ (ಅಕ್ಷಿ, ಕಂಠ, ಹೃದಯ) ಇರುವ ಭಗವದ್ರೂಪಗಳು (ವಿಶ್ವಾದಿಗಳು) ಪರಸ್ಪರ ಭಿನ್ನವೋ, ಅಭಿನ್ನವೋ? ಭೇದಕ್ಕೆ ಸಾಧಕವಾದ ಅನೇಕ ಸ್ಥಾನಸ್ಥಿತತ್ವ ಕಾರ್ಯಕಾರಣ ಬದ್ಧತ್ವಾದಿಗಳು ನಿರಕಾಶವೋ ಅಥವಾ ಗೌಣತ್ವದಿಂದ ಸಾವಕಾಶವೋ, ಭೇದಕಧರ್ಮಗಳಿಗೆ ಗೌಣತ್ವಕಲ್ಪಕವಾದ ಪ್ರಬಲವಾದ ಶ್ರುತ್ಯಾದಿಪ್ರಮಾಣಗಳು ಇಲ್ಲವೋ, ಇವೆಯೋ? ಎಂಬುದು ಇಲ್ಲಿಯ ವಿಚಾರ.

**ಪೂರ್ವಪಕ್ಷ** :- ಅಕ್ಷಿ, ಕಂಠ, ಇತ್ಯಾದಿ ಭಿನ್ನ ಸ್ಥಾನದಲ್ಲಿರುವುದರಿಂದ ಘಟಪಟಾದಿಗಳಂತೆ ಭಗವದ್ರೂಪಗಳು ಭಿನ್ನವೇ ಆಗಬೇಕು. ಆಕಾಶವು ಅಂಶಗಳಿಂದ ಅನೇಕ ಸ್ಥಾನಸ್ಥಿತವಾದಂತೆ ಅಭಿನ್ನವೇ ಆದ ಭಗವಂತನು ಅಂಶಗಳಿಂದ ಅನೇಕ ಸ್ಥಾನಸ್ಥಿತನಾಗಲಿ ಎನ್ನುವುದೂ ಸರಿಯಲ್ಲ. ಭಗವಂತನ ವಿಶ್ವಾದಿರೂಪಗಳೂ ಕೂಡ 'ಸಪ್ತಾಂಗ ಏಕೋನವಿಂಶತಿಮುಖಃ' ಇತ್ಯಾದಿ ಪ್ರಮಾಣಗಳಿಂದ ಒಂದೊಂದು ಸಮಗ್ರವೇ ಆಗಿದೆ. ಆಕಾಶದ ದೃಷ್ಟಾಂತ ಇಲ್ಲಿ ಸರಿಯಾಗುವುದಿಲ್ಲ ಮತ್ತು ವಿಶ್ವ, ತೈಜಸರೂಪಗಳು ಕಾರ್ಯಕಾರಣಬದ್ಧ. ಪ್ರಾಜ್ಞರೂಪವು ಕಾರಣಬದ್ಧ, ತುರ್ಯರೂಪ ಇದರಿಂದ ಬದ್ಧವಲ್ಲ. (ಕಾರ್ಯಕಾರಣ ಬದ್ಧೌ ತೌ) ಎಂದು ಭೇದವನ್ನು ಹೇಳಿದ್ದರಿಂದ ಭೇದವಿಲ್ಲದೇ ಈ ಉಪದೇಶವನ್ನು ಕೂಡಿಸಲು ಬರುವುದಿಲ್ಲವಾದ್ದರಿಂದ ಪರಮಾತ್ಮನು ವಿಶ್ವಾದಿರೂಪಗಳಿಂದ ಪರಸ್ಪರ ಭಿನ್ನನೇ ಆಗಿದ್ದಾನೆ.

**ಸಿದ್ಧಾಂತ** :- ಅನೇಕ ಸ್ಥಾನಗಳಲ್ಲಿರುವ ರೂಪಗಳಿಂದ ಪರಮಾತ್ಮನು ಪರಸ್ಪರ ಅಭಿನ್ನನೇ ಆಗಿದ್ದಾನೆ. 'ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಲ್ಲಾ ಶರೀರಗಳಲ್ಲಿ ಚಕ್ಷುರಾದಿಸ್ಥಾನಗಳಲ್ಲಿ ಭಗವಂತನೊಬ್ಬನನ್ನೇ ಪೂರ್ಣಗುಣನನ್ನಾಗಿ ಹೇಳುತ್ತಾರೆ. ಎಂದು ಏಷ ತ ಆತ್ಮಾ

ಅಂತರ್ಯಾಮ್ಯಮೃತಃ ಪೃಥಿವಿಯ ಅಂತರ್ಯಾಮಿಯೇ ನಿನ್ನ ಅಂತರ್ಯಾಮಿ (ಇದು ಉದ್ದಾಲಕರನ್ನು ಕುರಿತು ಯಾಜ್ಞವಲ್ಕ್ಯರ ವಚನ) ಎಂದು. ಹಾಗೆಯೇ 'ಅಯಮೇವ ಸಃ ಯೋಽಯಮಾತ್ಮಾ' ಎಂಬ ಶ್ರುತಿಯಲ್ಲೂ ಅನೇಕಸ್ಥಾನಗಳಲ್ಲಿರುವ ಭಗವದ್ರೂಪಗಳಿಗೆ ಪರಸ್ಪರ ಅಭೇದವನ್ನೇ ಹೇಳಿದ್ದಾರೆ. (ಯಃ ಪೃಥಿವ್ಯಾಂ ತಿಷ್ಠನ್.. ಇಲ್ಲಿಯೂ ಕೊನೆಗೆ 'ಏಷ ತೇ ಅಂತರ್ಯಾಮೀ' ಎಂದು ಹೇಳಲಾಗಿದೆ. ಇದೇ ರೀತಿ 'ವಾಯೌ ತಿಷ್ಠನ್' ಎಂಬಲ್ಲಿ ಮತ್ತು 'ಅಗ್ನೌ ತಿಷ್ಠನ್...', 'ಏಷ ತೇ ಆತ್ಮಾ ಅಂತರ್ಯಾಮೀ' ಎಂದು ಪ್ರತ್ಯೇಕ ಪ್ರತ್ಯೇಕವಾಗಿ ಅಭೇದ ಹೇಳಿದ್ದಾರೆ. ಮತ್ತು 'ಯಃ ಪೃಥಿವ್ಯಾಂ ತೇಜೋಮಯಃ..' ಎಂಬಲ್ಲಿ ಯಃ ವಾಯೌ ತೇಜೋಮಯಃ ಎಂಬಲ್ಲಿ ಯಃ ಅಗ್ನೌ ತೇಜೋಮಯಃ ಎಂಬಲ್ಲಿ ಪ್ರತ್ಯೇಕವಾಗಿ ಅಭೇದ ಹೇಳಿದ್ದಾರೆ) ಮತ್ತು ಅಯಂ ವೈ ಹರಯಃ ಎಂಬಲ್ಲಿ ಮೂಲರೂಪಕ್ಕೆ ಇತರ ರೂಪಗಳಿಗೂ ಐಕ್ಯ ಹೇಳಲಾಗಿದೆ. ಮತ್ತು 'ಅಮಾತ್ರೋಽನಂತಮಾತ್ರಶ್ಚ' ಭಿನ್ನಾಂಶ ಶೂನ್ಯನೂ ಅನಂತಾಂಶ ಉಳ್ಳವನೂ ಆಗಿದ್ದಾನೆ ಎಂದು ವಿಶ್ವಾದಿ ಅನಂತರೂಪಗಳಿಗೆ ಅಭೇದವನ್ನು ಹೇಳಿದ್ದಾರೆ. ಭಗವದ್ರೂಪಗಳಿಗೆ ಭೇದವಿದೆ ಎಂಬುದಕ್ಕೆ ಹೇಳಿದ ಯುಕ್ತಿಯನ್ನು ಭೇದ ಪ್ರತಿನಿದಿ ವಿಶೇಷದಿಂದ ಕೂಡಿಸಬೇಕು. ಅಥವಾ ಅನೇಕ ಶ್ರುತಿಬಾಧಿತವಾದ ಪ್ರಯುಕ್ತ ಅಪ್ರಾಮಾಣ್ಯವನ್ನು ಹೇಳಬೇಕು. ಭೇದ-ವ್ಯಪದೇಶವನ್ನು 'ಭಿನ್ನೋ ಭಿನ್ನೇಷು ಸಂಸ್ಥಿತೇಃ' ಎಂಬ ಪ್ರಮಾಣದಂತೆ ಸ್ಥಾನ ಭೇದದಿಂದ ಕೂಡಿಸಬೇಕು. ಅಂದರೆ ಸ್ಥಾನಗತ ಭೇದವನ್ನು ಸ್ಥಾನಿಯಲ್ಲಿ ಔಪಚಾರಿಕವಾಗಿ ಹೇಳಿದ್ದಾರೆ ಎಂದರ್ಥ 'ಗಾವಃ ಗೋಷ್ಠೇ ಏಕೀಭವಂತಿ ಎಂದು ಗೋಷ್ಠದಲ್ಲಿರುವ ಅಭೇದವನ್ನು ಗೋವುಗಳಲ್ಲಿ ಹೇಳುವುದು ಕಂಡಿದೆ. ವ್ಯಾಪ್ತನೇ ಆದ ಹರಿಯಲ್ಲಿ ಅಂಗುಷ್ಠ ಪರಿಮಿತತ್ವವನ್ನು ಹೃದಯ-ರೂಪಸ್ಥಾನದ ಅಪೇಕ್ಷೆಯಿಂದ ಹೇಳುವುದು ಕಂಡಿದೆ. ಅಥವಾ ಭೇದ-ವ್ಯಪದೇಶ ಮುಖ್ಯವೇ ಎಂದು ಇಟ್ಟುಕೊಂಡು ಒಬ್ಬನೇ ಸೂರ್ಯ ಬಹುರೂಪ ತಾಳುವಂತೆ ಭಗವಂತನಲ್ಲಿ ಬಹುರೂಪವನ್ನು ಹೇಳಿ ಭೇದ-ವ್ಯಪದೇಶವನ್ನು ಕೂಡಿಸಬಹುದು. ಒಬ್ಬನಿಗೆ ಸ್ಥಾನಭೇದವನ್ನೂ ಕೂಡ ಅಚಿಂತ್ಯ ಶಕ್ತಿ ಎಂಬ ಉಪಾಯದಿಂದ ಹೇಳಬಹುದು. 'ಶ್ರುತಿಬಲಾತ್' ಇತ್ಯಾದಿಯಾಗಿ ನ್ಯಾಯವಿವರಣದಲ್ಲಿ ಇದನ್ನು ಹೇಳಿದ್ದಾರೆ.

ಈಶನ ರೂಪಗಳಿಗೆ ಭೇದವಿದೆ ಎಂದಾದರೆ ಒಂದು ರೂಪ ಅನುಗ್ರಾಹಕ, ಮತ್ತೊಂದು ಅನುಗ್ರಾಹ್ಯ ಎಂದಾಗಿ 'ಸ ಏವಚ' ಎಂಬಲ್ಲಿ ಹೇಳಲ್ಪಟ್ಟ ಮಹಿಮೆ ಇಲ್ಲದಂತಾಗಿ ಭಕ್ತಿ ಬೇಡ ಎಂಬ ಆಕ್ಷೇಪ ಮತ್ತು ಸಮಾಧಾನಗಳೇ ಕ್ರಮವಾಗಿ ಪೂರ್ವಪಕ್ಷ ಸಿದ್ಧಾಂತ ಫಲಗಳು.

## ॥ ಓಂ ಅರೂಪವದೇವ ಹಿ ತತ್ಪ್ರಧಾನತ್ವಾತ್ ಓಂ ॥ ೩-೨-೯

ಪೂರ್ವಾಧಿಕರಣದಲ್ಲಿ 'ಉಭಯಲಿಂಗಂ' ಎಂಬಲ್ಲಿ ಲಿಂಗಪದದಿಂದ ಪ್ರಕೃತವಾದ ವಿಷ್ಣುಶರೀರಗಳಿಗೆ ಈ ಅಧಿಕರಣದಲ್ಲಿ ಅಪ್ರಾಕೃತತ್ವವನ್ನು ಸಮರ್ಥಿಸಲಾಗುವುದು. ಯಾವ ಭಕ್ತಿಗೋಸ್ಕರವಾಗಿ ಹಿಂದೆ ಭಗವಂತನ ಮಹಿಮೆ ಹೇಳಲ್ಪಟ್ಟಿತೋ ಆ ಭಕ್ತಿಯು ಅಯುಕ್ತವೋ, ಯುಕ್ತವೋ, ಪರಮಾತ್ಮನಲ್ಲಿ ಮಾಹಾತ್ಮ್ಯವು ಅಯುಕ್ತವೋ, ಯುಕ್ತವೋ? ಪರಮಾತ್ಮನಿಗೆ ಶರೀರ ಒಪ್ಪುವ ಪಕ್ಷದಲ್ಲಿ ಮತ್ತು ಒಪ್ಪದೇ ಇರುವ ಪಕ್ಷದಲ್ಲಿ ದೋಷವಿದೆಯೋ, ಇಲ್ಲವೋ? ಹಾಗೆಯೇ ಶರೀರವತ್ತ್ವ ಅಶರೀರವತ್ವ ಶ್ರುತಿಗಳಿಗೆ ಏಕ-ವಿಷಯತ್ವವೋ, ಭಿನ್ನವಿಷಯತ್ವವೋ? ಎಂಬ ವಿಷಯಗಳು ಇಲ್ಲಿ ನಿರ್ಧರಿಸಲ್ಪಡುತ್ತವೆ.

**ಪೂರ್ವಪಕ್ಷ** :- ಹರಿಯಲ್ಲಿ ಭಕ್ತಿ ಮಾಡುವುದು ಯುಕ್ತವಲ್ಲ. ಏಕೆಂದರೆ ಅವನಿಗೆ ಶರೀರ ಒಪ್ಪಿದ ಪಕ್ಷದಲ್ಲಿ ಆ ಶರೀರವು ಚೈತ್ರನ ಶರೀರದಂತೆ ಅನಿತ್ಯವಾಗಬೇಕಾಗಿ ಬರುವುದರಿಂದ ಮಾಹಾತ್ಮ್ಯ ಕೂಡುವುದಿಲ್ಲ. ಶರೀರ ಒಪ್ಪದಿದ್ದರೆ ಅಶರೀರತ್ವವೇ ದೋಷವಾಗುವುದರಿಂದ ಮಾಹಾತ್ಮ್ಯ ಕೂಡುವುದಿಲ್ಲ. ಆದ್ದರಿಂದ ಭಕ್ತಿಯು ಸರಿಯಲ್ಲ. 'ನಾತ್ಮಾ ಶ್ರುತೇಃ' ಎಂಬ ಸೂತ್ರದಲ್ಲಿ ನಿತ್ಯದೇಹತ್ವವನ್ನು ಒಪ್ಪಲಾಗಿದೆ ಎಂದರೆ ಅದನ್ನೇ ಇಲ್ಲಿ ಆಕ್ಷೇಪ ಮಾಡುತ್ತಿರುವುದು. ಶರೀರವಿದೆ ಎಂಬ ವಾದವು 'ಅರೂಪಮವ್ಯಯಂ' ಎಂಬ ಶ್ರುತಿಗೆ ಅಪ್ರಾಮಾಣ್ಯಪ್ರಸಂಜಕವೂ ಆಗಿರುವುದರಿಂದ ಅದು ಸರಿಯಲ್ಲ. ಮತ್ತು ಶರೀರವಿಲ್ಲವೆಂದರೆ ಸೌಂದರ್ಯಾದಿ ಸಲ್ಲಕ್ಷಣಗಳು ಇಲ್ಲವೆಂದಾದೀತು. 'ರುಗ್ಮವರ್ಣಂ', 'ಆದಿತ್ಯವರ್ಣಂ' ಎಂಬ ಶ್ರುತಿಯು ಅಪ್ರಮಾಣವಾಗಬೇಕಾದೀತು. ಯದ್ಯಪಿ ಶರೀರತ್ವ ಅಶರೀರತ್ವ ಶ್ರುತಿಗಳು ಅಪ್ರಾಕೃತ, ಪ್ರಾಕೃತ ಪರ ಎಂದು ವಿರೋಧ ಪರಿಹರಿಸಿ ಯಾವ ದೋಷವೂ

ಇಲ್ಲವೆನ್ನಬಹುದು. ಆದರೆ, ಈ ರೀತಿ ಹೇಳಲು ಪ್ರಮಾಣವಿಲ್ಲ. ಆದ್ದರಿಂದ ಶರೀರ, ಅಶರೀರ ಎರಡು ಪಕ್ಷಗಳಲ್ಲಿಯೂ ಭಗವಂತನಲ್ಲಿ ಮಾಹಾತ್ಮ್ಯ ಕೂಡುವುದಿಲ್ಲವಾದ್ದರಿಂದ ಭಕ್ತಿಯು ಯುಕ್ತವಲ್ಲ.

**ಸಿದ್ಧಾಂತ** :- 'ಐಕಾತ್ಮ್ಯಪ್ರತ್ಯಯಸಾರಂ' ಪ್ರಧಾನವಾದ ಪೂರ್ಣವಾದ ಜ್ಞಾನಾತ್ಮಕವಾದ ದೇಹವುಳ್ಳವನು 'ಆನಂದಮಾತ್ರಮಜರಂ' ಸದಾ ದೃಢವಾದ ಆನಂದಾತ್ಮಕದೇಹವುಳ್ಳವನು, 'ಆನಂದರೂಪಮಮೃತಂ' ಇತ್ಯಾದಿ ಶ್ರುತಿ-ಸ್ಮೃತಿಮೂಲದಿಂದ ವಿಷ್ಣುವು ದಿವ್ಯದೇಹವುಳ್ಳವನು, ಶರೀರವತ್ತ್ವಶ್ರುತಿಯು ಅಪ್ರಾಕೃತದೇಹಪರ, ಶರೀರಾಭಾವಶ್ರುತಿಯು ಭೌತಿಕದೇಹಾಭಾವ ಪರವಾಗಿದೆ. ಮನೆಯ ಒಳಗೆ ಚಕ್ಷುರಿಂದ್ರಿಯದ ಪ್ರಕಾಶವಿದ್ದರೂ ಪ್ರಕಾಶವಿಲ್ಲ ಎಂದು ಹೇಳುವಂತೆ, ಅಪ್ರಾಕೃತ ದೇಹವಿದ್ದರೂ, ಪ್ರಾಕೃತ-ದೇಹವಿಲ್ಲದ್ದರಿಂದ ದೇಹವಿಲ್ಲ ಎಂಬ ವ್ಯವಹಾರ ಕೂಡುತ್ತದೆ. ಅಪ್ರಾಕೃತ-ದೇಹವಿದ್ದದ್ದರಿಂದ ಸೌಂದರ್ಯಾದಿಗಳನ್ನೂ ಹೇಳಬಹುದು. ಮತ್ತು ಅದು ಅನಿತ್ಯತ್ವ ಪ್ರಸಂಜಕವಾಗುವುದಿಲ್ಲ. ಮಾಹಾತ್ಮ್ಯಕ್ಕೂ ಚ್ಯುತಿಯಿಲ್ಲ. ಆದ್ದರಿಂದ ಭಕ್ತಿ ಮಾಡುವುದು ಸರಿಯೇ ಆಗಿದೆ. ಭಕ್ತಿಯ ಆಕ್ಷೇಪ ಮತ್ತು ಸಮಾಧಾನಗಳೇ ಫಲ.

## ॥ ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ ॥
## ೩-೨-೧೦

ಹಿಂದಿನ ಎರಡು ಅಧಿಕರಣಗಳಲ್ಲಿ ಭಗವಂತನ ಅಂಶಗಳಿಗೆ ಐಕ್ಯವನ್ನು ಹೇಳಿದ್ದು ಮತ್ತು ಭಗವಂತನಿಗೆ ಪ್ರಾಕೃತರೂಪರಾಹಿತ್ಯ ಹೇಳಿದ್ದು ಸರಿಯಲ್ಲ. ಏಕೆಂದರೆ ಜೀವರ ಸಮುದಾಯವೇ ಬ್ರಹ್ಮ. ಜೀವನಿಗಾದರೂ ಪರಮಾತ್ಮ-ನಿಂದ ಭೇದಾಭೇದವಿದೆ. ಮತ್ತು ಜೀವನಿಗೆ ಪ್ರಾಕೃತರೂಪವಿದೆ ಎಂದು ಶಂಕಾ ಮಾಡಿದ್ದರಿಂದ ಸಂಗತಿ. ಭಗವದ್ಭಕ್ತಿಯು ಅಯುಕ್ತವೋ ಯುಕ್ತವೋ? ಜೀವನು ಪರಮಾತ್ಮನಿಂದ ಭಿನ್ನಾಭಿನ್ನನೋ ಭಿನ್ನಮಾತ್ರನೋ? ಜೀವ ಮತ್ತು ಪರಮಾತ್ಮರಿಗೆ ಸಮುದಾಯಸಮುದಾಯಿ ಭಾವವೋ ಅಥವಾ ಬಿಂಬಪ್ರತಿ-ಬಿಂಬ ಭಾವವೋ? (ಪರಮಾತ್ಮನು ಅನೇಕ ಜೀವರ ಸಮುದಾಯರೂಪ. ಒಬ್ಬೊಬ್ಬ ಜೀವನು ಸಮುದಾಯಿ ಎಂದು ಅಭಿಪ್ರಾಯವೋ ಅಥವಾ

ಪರಮಾತ್ಮನು ಬಿಂಬ ಜೀವನು ಪ್ರತಿಬಿಂಬ ಎಂಬ ಅಭಿಪ್ರಾಯವೋ?) ಪ್ರತಿಬಿಂಬತ್ವವು ಔಪಾಧಿಕತ್ವರೂಪವೋ ಅಥವಾ ತದಧೀನತ್ವರೂಪವೋ? (ಔಪಾಧಿಕತ್ವವೆಂದರೆ ದರ್ಪಣರೂಪ ಉಪಾಧಿಯಿಂದಾಗಿ (ನಿಮಿತ್ತದಿಂದಾಗಿ) ಹುಟ್ಟುವಿಕೆ. ಪ್ರತಿ ಮುಖದಲ್ಲಿ ಇಂತಹ ಉಪಾಧಿಜನ್ಯತ್ವವಿದೆ.) ಉಪಾಧಿ-ಕೃತತ್ವ ಪಕ್ಷದಲ್ಲಿ ಅನಾದಿನಿತ್ಯರಾದ ಜೀವರಿಗೆ ಔಪಾಧಿಕ ಪ್ರತಿಬಿಂಬತ್ವ ಕೂಡುವುದಿಲ್ಲವಾದ್ದರಿಂದ ಸಮುದಾಯಿತ್ವರೂಪವಾದದ್ದನ್ನು ಹೇಳಬೇಕು. ಆಗ ಸಮುದಾಯರೂಪನಾದ ಈಶನಿಂದ ಜೀವರಿಗೆ ಭೇದಾಭೇದಗಳನ್ನು ಹೇಳಬೇಕು. ಅವುಗಳಲ್ಲಿಯೂ ಭೇದ ಔಪಾಧಿಕ, ಅಭೇದ ಸ್ವಾಭಾವಿಕ ಎನ್ನ ಬೇಕು. ಆಗ ತನ್ನಲ್ಲಿ ತನಗೆ ಭಕ್ತಿ ಹೇಗೆ ಸರಿ ಅಲ್ಲವೋ ಅದರಂತೆ ತನ್ನಿಂದ ಅಭಿನ್ನನಾದ ಪರಮಾತ್ಮನಲ್ಲಿಯೂ ಭಕ್ತಿ ಮಾಡುವುದು ಸರಿಯಲ್ಲ ಎಂಬುದು ಫಲ. ಪ್ರತಿಬಿಂಬತ್ವವು ತದಧೀನತ್ವರೂಪ ಎನ್ನುವ ಅಂತ್ಯ ಪಕ್ಷದಲ್ಲಿ ಅದು ಅನಾದಿನಿತ್ಯಜೀವರಿಗೂ ಯುಕ್ತವಾಗುವುದರಿಂದ ಪರಮಾತ್ಮನು ಅತ್ಯಂತ ಭಿನ್ನ ನೆಂದು ಸಿದ್ಧವಾಗಿ ಭಕ್ತಿಯು ಯುಕ್ತವಾಗುತ್ತದೆ ಎಂಬುದು ಫಲ.

**ಪೂರ್ವಪಕ್ಷ** :- 'ಪೃಥಗುಪದೇಶಾತ್' ಎಂಬ ಸೂತ್ರದಲ್ಲಿ ಜೀವೇಶಭೇದ ಹೇಳಿದ್ದರೂ ಸರ್ವಜೀವಸಮುದಾಯನೇ ಬ್ರಹ್ಮನಾದ್ದರಿಂದ ಒಬ್ಬೊಬ್ಬ ಜೀವ ನಿಗೆ ಬ್ರಹ್ಮನಿಂದ ಭೇದಾಭೇದ ಇರುವುದರಿಂದ ಆ ಭೇದವು ವಿರುದ್ಧವೇನಲ್ಲ. ಭೇದಾಭೇದಗಳ ಪೈಕಿ ಭೇದವು ಔಪಾಧಿಕವಾದ್ದರಿಂದ ಸ್ವಾಭಾವಿಕವಾದ ಅಭೇದದ ಕಾರ್ಯಕ್ಕೆ ಪ್ರತಿಬಂಧಕವಾಗುವುದಿಲ್ಲವಾದ್ದರಿಂದ ಸ್ವಾಭಿನ್ನನಾದ ಪರಮಾತ್ಮನಲ್ಲಿ ಭಕ್ತಿಯು ಸಲ್ಲಲ್ಲ. ಜೀವಪರಮಾತ್ಮರ ಅಭೇದವಾದರೂ 'ಜೀವರು ಮತ್ಸ್ಯಾದಿರೂಪದಂತೆ ಚೇತನ ಮತ್ತು ಅಂಶರಾದ್ದರಿಂದ ಅಭಿನ್ನ-ರಾಗಿದ್ದಾರೆ' ಎಂದು ಯುಕ್ತಿಯಿಂದ ಸಿದ್ಧವಾಗುತ್ತದೆ. ಪ್ರತಿಬಿಂಬತ್ವವು ಔಪಾಧಿಕವಾದ್ದರಿಂದ ಅನಾದಿನಿತ್ಯರಾದ ಜೀವರಲ್ಲಿ ಅದು ಕೂಡುವುದಿಲ್ಲವಾದ್ದ ರಿಂದ ಅಭೇದಕ್ಕೆ ಪ್ರತಿಬಂಧಕವಾಗುವುದಿಲ್ಲ.

**ಸಿದ್ಧಾಂತ** :- ಪ್ರತಿಬಿಂಬತ್ವವನ್ನು 'ಪೃಥಗುಪದೇಶಾತ್' ಎಂಬಲ್ಲಿ ಹೇಳಿದಂತೆ ಭಿನ್ನತ್ವ, 'ಸಂಧ್ಯೇ ಸೃಷ್ಟಿರಾಹ ಹಿ' ಎಂಬಲ್ಲಿ ಹೇಳಿದಂತೆ ತದಧೀನತ್ವ, 'ತದ್ಗುಣಸಾರತ್ವಾತ್' ಎಂಬಲ್ಲಿ ಹೇಳಿದಂತೆ ತತ್ಸಾದೃಶ್ಯ ಎಂಬ ಧರ್ಮಗಳಿಂದಲೇ ಹೇಳಬೇಕು. ಇಂತಹ ಪ್ರತಿಬಿಂಬತ್ವವು ಜೀವರಲ್ಲಿ

ಯುಕ್ತವಾಗುತ್ತದೆ. ಏಕೆಂದರೆ ಇಂತಹ ಪ್ರತಿಬಿಂಬತ್ವವನ್ನು ಒಪ್ಪದೇ ಸ್ವರೂಪಾಂಶತ್ವವನ್ನು ಒಪ್ಪಿದರೆ ಮತ್ಸ್ಯಾದಿಗಳ ಸಾಮ್ಯ ಬಂದು ಆ ರೂಪಗಳ ಜ್ಞಾನೈಶ್ವರ್ಯಾದಿಗಳು ಜೀವರಿಗೆ ಬರಬೇಕಾಗುತ್ತವೆ ಎಂಬ ಯುಕ್ತಿಯಿಂದ ಜೀವರಿಗೆ ಪ್ರತಿಬಿಂಬತ್ವವು ಸಿದ್ಧವಾಗುತ್ತದೆ. 'ರೂಪಂ ರೂಪಂ ಪ್ರತಿರೂಪೋ ಬಭೂವ' ಎಂಬ ಶ್ರುತಿಯಿಂದಲೂ 'ಬಹವಸ್ಸೂರ್ಯಕಾ ಯದ್ವತ್' ಎಂಬ ಸ್ಮೃತಿಯಿಂದಲೂ ಜೀವರಿಗೆ ಇಂತಹ ಪ್ರತಿಬಿಂಬತ್ವವು ಸಿದ್ಧವಾಗುತ್ತದೆ. ಯಾರು ಯಾರಿಗೆ ಪ್ರತಿಬಿಂಬರೋ ಅವರಿಗೆ ಅಭೇದವಿರುವುದಿಲ್ಲ ಎಂದು ನಿಯಮ. ಉದಾಹರಣೆಗೆ ಸೂರ್ಯನಿಗೂ ಸೂರ್ಯನ ಪ್ರತಿಬಿಂಬಕ್ಕೂ ಅಭೇದವಿಲ್ಲ. ಆದರಂತೆ ಜೀವನು ಈಶನ ಪ್ರತಿಬಿಂಬನಾದ್ದರಿಂದ ಈಶಾಭಿನ್ನನಲ್ಲ.

## ।। ಓಂ ಅಂಬುವದಗ್ರಹಣಾತ್ತು ನ ತಥಾತ್ವಂ ಓಂ ।।
## ೩-೨-೧೧

ಹಿಂದಿನ ಅಧಿಕರಣದಲ್ಲಿ ಜೀವನಿಗೆ ಬಿಂಬರೂಪಿ ಪರಮಾತ್ಮನ ಸಾದೃಶ್ಯವಿರುವುದರಿಂದ ಜೀವನು ಅವನ ಪ್ರತಿಬಿಂಬ ಎಂದು ಹೇಳಲಾಯಿತು. ಇಲ್ಲಿ ಸಾದೃಶ್ಯವೆಂದರೆ ಜ್ಞಾನಾನಂದಾದಿರೂಪವಾದದ್ದು. ಅದು ಜೀವನಿಗೆ ನಿತ್ಯಸಿದ್ಧವಾಗಿದೆ. ಮುಕ್ತಿ ಎಂದರೆ ಅದರ ಅಭಿವ್ಯಕ್ತಿ . ಇಂತಹ ನಿತ್ಯಸಿದ್ಧವಾದ ಜ್ಞಾನಾನಂದಾದಿಗಳ ಅಭಿವ್ಯಕ್ತಿಗೆ ಭಕ್ತಿ ಬೇಕಾಗಿಲ್ಲ. ಎಂದು ಶಂಕಿಸಿದ್ದರಿಂದ ಸಂಗತಿ ಇದೆ. ಜಿಜ್ಞಾಸಾ ಸೂತ್ರದಲ್ಲಿ ಅಥ ಪದವಾಚ್ಯವಾದ ಭಕ್ತಿಯು ಅನಾವಶ್ಯಕವೋ ಅವಶ್ಯಕವೋ? ಆನಂದಾದಿರೂಪವಾದ ಬ್ರಹ್ಮಸಾದೃಶ್ಯಾಭಿ-ವ್ಯಕ್ತಿಯು ಈಶಜ್ಞಾನ ಮತ್ತು ಪ್ರಸಾದ ದ್ವಾರಾ ಭಕ್ತಿಯ ಫಲವಾಗುವುದಿಲ್ಲವೋ ಆಗುತ್ತದೋ? ಎನ್ನುವುದು ಇಲ್ಲಿಯ ವಿಚಾರ.

**ಪೂರ್ವಪಕ್ಷ** :- ಜ್ಞಾನಾನಂದಾದಿರೂಪವಾದ ಬ್ರಹ್ಮಸಾದೃಶ್ಯವು 'ಪುಂಸ್ತ್ವಾದಿವತ್ತು' ಎಂಬ ಸೂತ್ರದಲ್ಲಿ ಹೇಳಿದಂತೆ ಜೀವ ಸ್ವರೂಪವಾದ್ದರಿಂದ ನಿತ್ಯಸಿದ್ಧ-ವಾಗಿದೆ. ಅನುಬಂಧಾದಿಭ್ಯಃ ಎಂಬ ಸೂತ್ರದಲ್ಲಿ ಹೇಳಿದಂತೆ ಜ್ಞಾನವು ಭಕ್ತಿಯ ಫಲ. ಆನಂದಾಭಿವ್ಯಕ್ತಿಯು ಭಕ್ತಿಯ ಫಲವಲ್ಲ. ಜ್ಞಾನ-ಪ್ರಸಾದದ್ವಾರಾ ಭಕ್ತಿಯ ಫಲ ಎನ್ನುವುದೂ ಸರಿಯಲ್ಲ. ಸುಪ್ತಿಕಾಲದಲ್ಲಿ ಅಪರೋಕ್ಷಜ್ಞಾನ ಪ್ರಸಾದವಿಲ್ಲದಿದ್ದಾಗಲೂ ತಾನಾಗಿಯೇ ಆನಂದಾಭಿವ್ಯಕ್ತಿ ಕಂಡಿದೆ. ಹೀಗಾಗಿ ನಿಷ್ಫಲವಾದ್ದರಿಂದ ಭಕ್ತಿಯು ಅನಾವಶ್ಯಕ.

**ಸಿದ್ಧಾಂತ :-** ಭಕ್ತಿ ಎಂದರೆ ಆನಂದದ ಪೂರ್ಣ ಅಭಿವ್ಯಕ್ತಿ . ಸುಪ್ತಿಕಾಲದಲ್ಲಿ ಭಕ್ತಿ ಇಲ್ಲದೇ ಇದ್ದರೂ ಸ್ವಲ್ಪ ಮಾತ್ರ ಆನಂದದ ಅಭಿವ್ಯಕ್ತಿಯಾಗುತ್ತದೆ. ಪೂರ್ಣ ಅಭಿವ್ಯಕ್ತಿಗೆ ಭಕ್ತಿಯೇ ಬೇಕು. ಇದು ಯಮೇವೈಷ ವೃಣುತೇ ಎಂಬ ಸ್ಮೃತಿಯಿಂದ ಸಿದ್ಧವಾಗಿದೆ.

## ॥ ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯಸಾಮಂಜಸ್ಯಾದೇವಂ ಓಂ ॥ ೩-೨-೧೨

ಪೂರ್ವಾಧಿಕರಣದಲ್ಲಿ ಮುಕ್ತಿಹೇತು ಎಂದು ಹೇಳಲ್ಪಟ್ಟ ಭಕ್ತಿ ಮತ್ತು ತದುಪಲಕ್ಷಿತವಾದ ಸಮಸ್ತ ಸಾಧನಗಳಲ್ಲಿ ತಾರತಮ್ಯವನ್ನು ಈ ಅಧಿಕರಣದಲ್ಲಿ ಸಮರ್ಥಿಸಿದ್ದರಿಂದ ಅನಂತರ ಸಂಗತಿ. ಭಕ್ತಿ ಮತ್ತು ಇತರ ಸಾಧನಗಳು ಭಕ್ತರಲ್ಲಿ ಒಂದೇ ರೀತಿ ಇರುತ್ತವೋ ಅಥವಾ ನಾನಾಪ್ರಕಾರವಾಗಿರುತ್ತವೋ? ಭಕ್ತಿಯ ಫಲವೆಂದು ಹೇಳಲ್ಪಟ್ಟ ಆನಂದಾದಿರೂಪವಾದ ಬ್ರಹ್ಮಸಾದೃಶ್ಯದ ಅಭಿವ್ಯಕ್ತಿಯು ಎಲ್ಲಾ ಜೀವರಲ್ಲಿ ಏಕರೀತಿಯಿಂದಾಗುತ್ತದೋ ನಾನಾ-ರೀತಿಯಿಂದಲೋ? ಎಂಬುದು ಇಲ್ಲಿ ವಿಚಾರ ವಿಷಯ.

**ಪೂರ್ವಪಕ್ಷ :-** 'ಸೈಷಾನಂದಸ್ಯ ಮೀಮಾಂಸಾ' ಎಂಬ ಶ್ರುತಿಯು ವೈರಾಗ್ಯ ಪ್ರಶಂಸಾಪರವೇ ಹೊರತು ಆನಂದತಾರತಮ್ಯ ಪರವಲ್ಲ. ಹೀಗಾಗಿ ಪ್ರಮಾಣವಿಲ್ಲವಾದ್ದರಿಂದ ಫಲತಾರತಮ್ಯವಿಲ್ಲ. ಆದ್ದರಿಂದ ಸಾಧನ ತಾರತಮ್ಯವೂ ಇಲ್ಲ. ಒಂದು ಪಕ್ಷದಲ್ಲಿ ಫಲತಾರತಮ್ಯವಿದ್ದರೂ ಸಾಧನದಲ್ಲಿ ತಾರತಮ್ಯ ಒಪ್ಪದಿದ್ದರೆ ಬಾಧಕವೇನೂ ಇಲ್ಲ. ಹಾಗಆಗಿ ಸಾಧನವು ಏಕರೀತಿಯಿಂದಲೇ ಇರುತ್ತದೆ.

**ಸಿದ್ಧಾಂತ :-** ಸೈಷಾನಂದಸ್ಯ ಎಂಬ ಶ್ರುತಿಯು ವೈರಾಗ್ಯ ಪ್ರಶಂಸಾಪರವೆಂದಿಟ್ಟುಕೊಂಡರೆ ಆ ವಾಕ್ಯಕ್ಕೆ ವೈಯರ್ಥ್ಯಾದಿ ದೋಷ ಬರುತ್ತದೆಂದು ಹೇಳಿ ಆಚಾರ್ಯರೇ ಬೃಹದ್ ಭಾಷ್ಯದಲ್ಲಿ ನಿರಾಸ ಮಾಡಿದ್ದಾರೆ. ಮತ್ತು ನ್ಯಾಯಾಮೃತದಲ್ಲಿಯೂ ಅದಕ್ಕೆ ವೈರಾಗ್ಯ ಪ್ರಶಂಸಾ ಪರತ್ವವನ್ನು ಖಂಡಿಸಲಾಗಿದೆ. ಆ ವಾಕ್ಯವು ಫಲತಾರತಮ್ಯ ಪರವೇ ಆಗಿದೆ. ಆ

ಫಲತಾರತಮ್ಯವನ್ನು ಸರಿಕೂಡಿಸಬೇಕಾದರೆ ಸಾಧನ ತಾರತಮ್ಯವನ್ನು ಅಂಗೀಕರಿಸಲೇ ಬೇಕು. ಇಲ್ಲದಿದ್ದರೆ ಸುಮ್ಮನೇ ಫಲತಾರತಮ್ಯ ಉಂಟು ಮಾಡಿದ ಭಗವಂತನಿಗೆ ವೈಷಮ್ಯಾದಿದೋಷ ಬರಬೇಕಾಗುತ್ತದೆ. ಅದು ಇಲ್ಲ ಎಂದು ವೈಷಮ್ಯಾಧಿಕರಣದಲ್ಲಿ ಹೇಳಲಾಗಿದೆ. ಮತ್ತು ಸಾಧನಸ್ಯೋತ್ತಮತ್ವೇನ ಎಂಬ ಭಾಷ್ಯೋಕ್ತ ಸ್ಮೃತಿಯ ವಿರೋಧವೂ ಬರುತ್ತದೆ. ಸೈಷಾನಂದಸ್ಯ ಎಂಬ ಶ್ರುತಿಯಾದರೂ ಮುಕ್ತರಿಗೆ ಸಂಬಂಧಿಸಿದ್ದು ಎಂಬುದು ಮುಂದೆ ಅಕ್ಷರಧಿಯಾಂ ತು ಎಂಬ ಸೂತ್ರದಲ್ಲಿ ಸ್ಪಷ್ಟವಾಗುತ್ತದೆ.

## ॥ ಓಂ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ಓಂ ॥ ೩-೨-೧೩

ಪೂರ್ವಾಧಿಕರಣದಲ್ಲಿ ಶ್ರುತಿಸಿದ್ಧವಾದ ಆನಂದತಾರತಮ್ಯಾನ್ಯಥಾನುಪಪತ್ತಿಯಿಂದ ಸಾಧನತಾರತಮ್ಯವನ್ನು ನಿರ್ಣಯಿಸಲಾಯಿತು. ಅದರಂತೆ ಈ ಅಧಿಕರಣದಲ್ಲೂ, ಸೃಷ್ಟಿ ಸಂಹಾರಕ್ಕಿಂತ ಅಧಿಕವಾದ ಒಂದು ಭಗವಂತನ ಕ್ರಿಯೆಯನ್ನು ಶ್ರುತಿ ಹೇಳುವುದರಿಂದ ಅದನ್ನು ಸರಿಗೂಡಿಸಲು ಭಗವಂತನಿಗೆ ಪಾಲಕತ್ವವನ್ನು ಅಂಗೀಕರಿಸಬೇಕೆಂದು ನಿರ್ಣಯಿಸಲಾಗಿದೆ.

ಭಕ್ತಿಯು ಅಯುಕ್ತವೋ ಯುಕ್ತವೋ? ಪಾಲಕತ್ವ ಎಂಬ ಗುಣ ಭಗವಂತನಲ್ಲಿ ಇಲ್ಲವೋ ಇದೆಯೋ? ಪಾಲನ ಎಂಬ ಒಂದು ಕ್ರಿಯೆ ಇಲ್ಲವೋ ಇದೆಯೋ? ಎಂಬುದು ಈ ಅಧಿಕರಣದ ಚಿಂತಾಪರಂಪರೆ.

**ಪೂರ್ವಪಕ್ಷ** :- ಒಂದು ವಸ್ತುವನ್ನು ನಿರ್ಮಾಣ ಮಾಡಿದ ಮೇಲೆ ನಾಶ ಮಾಡುವವರೆಗೆ ಅದರ ಸ್ಥಿತಿಯು ಸ್ವತಃ ಸಿದ್ಧವೇ ಆದ್ದರಿಂದ ಅಸಂಹಾರ (ನಾಶಪಡಿಸದೇ ಇರುವುದು)ಕ್ಕಿಂತ ಅಧಿಕವಾದ ಯಾವ ಕ್ರಿಯೆಯೂ ಇಲ್ಲ- ವಾದ್ದರಿಂದ ಪಾಲಕತ್ವ ಎಂಬ ಪ್ರತ್ಯೇಕ ಗುಣವನ್ನು ಭಗವಂತನಿಗೆ ಹೇಳುವುದು ಸರಿಯಲ್ಲ.

**ಸಿದ್ಧಾಂತ** :- ಅಸಂಹಾರಕ್ಕಿಂತ ಅತಿರಿಕ್ತವಾದ ರಕ್ಷಣೆ ಎಂಬ ಪ್ರತ್ಯೇಕ ಕ್ರಿಯೆಯನ್ನು 'ನೈತಾವದೇನಾಪರೋ ಅನ್ಯದಸ್ತಿ' (ಸೃಷ್ಟಿ ಮತ್ತು ಸಂಹಾರಗಳು ಮಾತ್ರ ಭಗವಂತನ ಕ್ರಿಯೆಗಳಲ್ಲ, ಅದಕ್ಕಿಂತ ಅಧಿಕವಾದ ಲೋಕಭರಣ

ಎಂಬ ಕ್ರಿಯೆ ಇದೆ) ಎಂಬ ಶ್ರುತಿಯು ಪ್ರತಿಪಾದಿಸುತ್ತದೆ. ಆದ್ದರಿಂದ ಅಸಂಹಾರಕ್ಕಿಂತ ವ್ಯತಿರಿಕ್ತವಾದ ಅನ್ನಾದಿದಾನದ ಮೂಲಕ ಪೋಷಣ ಎಂಬ ಪಾಲಕತ್ವ ಸಿದ್ಧವಾಗುತ್ತದೆ. 'ಸೃಷ್ಟಿಂ ಚ ಪಾಲನಂ ಚೈವ' ಇತ್ಯಾದಿ ಸ್ಮೃತಿಯೂ ಆಧಾರವಾಗಿದೆ.

ಭಕ್ತಿಯ ಆಕ್ಷೇಪ ಮತ್ತು ಸಮಾಧಾನಗಳೇ ಫಲ.

## ॥ ಓಂ ತದವ್ಯಕ್ತಮಾಹ ಹಿ ಓಂ ॥ ೩-೨-೧೪

ಪೂರ್ವಾಧಿಕರಣದಲ್ಲಿ ಜನ್ಮಾಸೂತ್ರೋಕ್ತವಾದ ಸೃಷ್ಟ್ಯಾದ್ಯಷ್ಟಕದಲ್ಲಿ ಪಾಲಕತ್ವವನ್ನು ಸಮರ್ಥಿಸಲಾಯಿತು. ಇಲ್ಲಿ ಅದೇ ಅಷ್ಟಕದಲ್ಲಿ ಸೇರಿದ ಅಜ್ಞಾನಪ್ರದತ್ವವನ್ನು ಸಮರ್ಥಿಸುವುದರಿಂದ ಸಂಗತಿ ಇದೆ. ಭಕ್ತಿಯನ್ನು ಮಾಡಬಾರದೋ ಮಾಡಬೇಕೋ? ಅದು ನಿಷ್ಫಲವೋ, ಸಫಲವೋ? ಈಶನು ವ್ಯಕ್ತನೇ ಆಗಲಿ ಅಥವಾ ಅವ್ಯಕ್ತನೇ ಆಗಲಿ ಎರಡು ಪಕ್ಷದಲ್ಲಿಯೂ ಭಕ್ತಿಯು ಈಶಾಪರೋಕ್ಷಕ್ಕೆ ಹೇತುವಲ್ಲವೋ ಅಥವಾ ಅವ್ಯಕ್ತನಾದರೂ ಅವನ ಪ್ರಸಾದದ್ವಾರಾ ಅವನ ಪ್ರತ್ಯಕ್ಷಕ್ಕೆ ಹೇತುವಾಗಿದೆಯೋ ಎಂಬ ವಿಚಾರಗಳು ಇಲ್ಲಿಯ ವಿಷಯ.

**ಪೂರ್ವಪಕ್ಷ** :- ಭಗವಂತನು ವ್ಯಕ್ತನೆಂಬ ಪಕ್ಷದಲ್ಲಿ ವ್ಯಕ್ತವಾದ ಸ್ತಂಭಾದಿಗಳ ಪ್ರತ್ಯಕ್ಷಕ್ಕೆ ಭಕ್ತಿ ಹೇಗೆ ಬೇಕಿಲ್ಲವೋ ಅದರಂತೆ ಈಶನ ಪ್ರತ್ಯಕ್ಷಕ್ಕೂ ಭಕ್ತಿ ಬೇಕಿಲ್ಲ. ಇನ್ನೂ ಭಗವಂತನು ಅವ್ಯಕ್ತಸ್ವಭಾವನೆಂದಾದರೆ ಅಂತಹ ಧರ್ಮಾದಿಗಳು ಭಕ್ತ್ಯಾದಿಗಳಿಂದ ಹೇಗೆ ಪ್ರತ್ಯಕ್ಷವಾಗುವುದಿಲ್ಲವೋ ಅದರಂತೆ ಈಶನು ಭಕ್ತಿಯಿಂದಲೂ ಪ್ರತ್ಯಕ್ಷನಾಗಲಾರ. ಅವ್ಯಕ್ತಸ್ವಭಾವದವನಾದರೂ ಪ್ರತ್ಯಕ್ಷನಾಗುವುದಾದರೆ ಸಮಾರಾಧನೆಯಿಂದಲೇ ಯಕ್ಷಾದಿಗಳ ಸಾಕ್ಷಾತ್ಕಾರ-ವಾಗುವಂತೆ ಅವನ ಸಾಕ್ಷಾತ್ಕಾರವು ಆಗಬಹುದು. ಅಗ್ನ್ಯಾದಿಗಳು ಸ್ಥೂಲ-ರೂಪದಿಂದ ಪ್ರತ್ಯಕ್ಷವು ಸೂಕ್ಷ್ಮರೂಪದಿಂದ ಅಪ್ರತ್ಯಕ್ಷವೂ ಆಗುವಂತೆ ಈಶನು ಮೂಲರೂಪದಿಂದ ಅವ್ಯಕ್ತನಾದರೂ ಅವತಾರರೂಪದಿಂದ ಪ್ರತ್ಯಕ್ಷನಾಗಬಹುದಾದ್ದರಿಂದ ಭಕ್ತಿಯು ಅಪರೋಕ್ಷಹೇತುವಲ್ಲ. ಹೀಗೆ ನಿಷ್ಫಲವಾದ್ದರಿಂದ ಅದನ್ನು ಮಾಡಬೇಕಾಗಿಲ್ಲ.

**ಸಿದ್ಧಾಂತ** :- 'ಅರೂಪಮಕ್ಷರಂ ಬ್ರಹ್ಮ ಸದಾऽವ್ಯಕ್ತಂ' ಎಂಬ ಶ್ರುತಿಯ ಪ್ರಕಾರ ಬ್ರಹ್ಮನು ಅವ್ಯಕ್ತಸ್ವಭಾವನೇ ಆಗಿದ್ದಾನೆ. ಆದರೂ 'ಆತ್ಮಾ ವಾ ಅರೇ ದ್ರಷ್ಟವ್ಯಃ' ಎಂಬ ಶ್ರುತಿಬಲದಿಂದ ಶ್ರವಣಾದ್ಯಭ್ಯಾಸದಿಂದ ಪ್ರಸನ್ನನಾದ ಅಚಿಂತ್ಯಶಕ್ತಿಯುಳ್ಳ ಪರಮಾತ್ಮನಿಂದಲೇ ಅವನ ಅಪರೋಕ್ಷವು ಆಗುತ್ತದೆ. 'ನಿತ್ಯಾವ್ಯಕ್ತೋऽಪಿ ಭಗವಾನ್ ಈಕ್ಷ್ಯತೇ ನಿಜಶಕ್ತಿತಃ' ಎಂಬ ಸ್ಮೃತಿಯಿಂದ ಅಚಿಂತ್ಯಶಕ್ತಿಯಿಂದ ಸಾಕ್ಷಾತ್ಕಾರವು ಕೂಡುತ್ತದೆ. 'ತಸ್ಯಾಭಿಧ್ಯಾನಾತ್' ಎಂಬ ಶ್ರುತಿಯು 'ಮೋಕ್ಷವು ಜ್ಞಾನಜನ್ಯಪ್ರಸಾದಸಾಧ್ಯ' ಎಂದು ತಿಳಿಸುತ್ತದೆ. ಅಭಿಧ್ಯಾನ ಎಂದರೆ ಇಚ್ಛೆ. ಇಚ್ಛೆ ಎಂದರೆ ಪ್ರಸಾದ. ಹೀಗೆ ಈ ಶ್ರುತಿಯು ಪ್ರಸಾದಕ್ಕೆ ಮೋಕ್ಷಸಾಧ್ಯತ್ವವನ್ನು ತಿಳಿಸುತ್ತದೆ. 'ದೃಷ್ಟ್ವೈವ ತಂ' ಎಂಬ ಶ್ರುತಿಯು ಮೋಕ್ಷಕ್ಕೆ ಅಪರೋಕ್ಷಸಾಧ್ಯತ್ವವನ್ನು ಹೇಳಿದೆ. ಇವೆರಡನ್ನು ಸರಿ ಪಡಿಸಬೇಕಾದರೆ ಪ್ರಸಾದದಿಂದ ದರ್ಶನ, ದರ್ಶನದಿಂದ ಮೋಕ್ಷ ಎಂದು ಒಪ್ಪಬೇಕು. ಮತ್ತು ಭಗವಂತನಿಗೆ ಅವ್ಯಕ್ತತ್ವವನ್ನು ಹೇಳುವ ಶ್ರುತಿಯೂ ಇದೆ. ಪ್ರತ್ಯಕ್ಷತ್ವವನ್ನು ಹೇಳುವ ಶ್ರುತಿಯೂ ಇದೆ. ಇವೆರಡನ್ನೂ ಸರಿಗೂಡಿಸಬೇಕಾದರೆ ಅವನು ಅವ್ಯಕ್ತನಾದರೂ ಪ್ರಸಾದದಿಂದ ಪ್ರತ್ಯಕ್ಷ-ನಾಗುತ್ತಾನೆಂದು ಒಪ್ಪಬೇಕು.

ಸಮಾರಾಧನೆಯಿಂದ ಪ್ರತ್ಯಕ್ಷನಾಗಲಿ ಎಂಬ ಪೂರ್ವಪಕ್ಷವು ಸರಿಯಲ್ಲ. ಆರಾಧನೆ ಮಾಡಿದಾಗಲೂ ಪ್ರತ್ಯಕ್ಷನಾಗದೇ ಇದ್ದದ್ದು ಮಹಾತ್ಮರ ಅನುಭವಸಿದ್ಧವಾಗಿದೆ ಎಂದು 'ನ ತಮಾರಾಧಯಿತ್ವಾऽಪಿ' ಎಂಬ ಸ್ಮೃತಿಯು ಹೇಳಿದೆ. ಸೂಕ್ಷ್ಮರೂಪದಿಂದ ಅವ್ಯಕ್ತನಾದರೂ ಗೃಹೀತವಾದ ಸ್ಥೂಲ-ರೂಪದಿಂದ ಪ್ರತ್ಯಕ್ಷನಾಗುತ್ತಾನೆ ಎಂಬುದು ಸರಿಯಲ್ಲ. ಏಕೆಂದರೆ 'ನಾಸೌ ಸೂಕ್ಷ್ಮೋ ನ ಸ್ಥೂಲಃ' ಎಂಬ ಶ್ರುತಿಯ ಪ್ರಕಾರ ಅವನಲ್ಲಿ ಸೂಕ್ಷ್ಮಸ್ಥೂಲ ಎಂಬ ವಿಶೇಷ ಇರುವುದಿಲ್ಲ. ಕಿಂತು ಸರ್ವತ್ರ ಪರಮಸೂಕ್ಷ್ಮನೇ ಆಗಿದ್ದಾನೆ. (ಅವ್ಯಕ್ತ ಲಿಂಗದಿಂದ ಅವನಲ್ಲಿ ಅತಿಸೂಕ್ಷ್ಮತ್ವವನ್ನು ಅನುಮಾನ ಮಾಡಲು ಬರುವುದರಿಂದ). ಅವನು ಪ್ರತ್ಯಕ್ಷನಾಗಲು ಸಾಧ್ಯವಿಲ್ಲ. ಶ್ರವಣಾದಿ ಸಹಿತ ವಾದ ಭಕ್ತಿಯೇ ಪ್ರತ್ಯಕ್ಷಕ್ಕೆ ಹೇತು.. ಆದ್ದರಿಂದ ಅವಶ್ಯಕರ್ತವ್ಯವೂ ಆಗಿದೆ.

## ॥ ಓಂ ಉಭಯವ್ಯಪದೇಶಾತ್ತ್ವಹಿ ಕುಂಡಲವತ್ ಓಂ ॥
## ೩-೨-೧೫

ಹಿಂದಿನ ಅಧಿಕರಣದಲ್ಲಿ ಪರಮಾತ್ಮನಿಗೆ ಅವ್ಯಕ್ತತ್ವ ಮತ್ತು ಪ್ರತ್ಯಕ್ಷತ್ವ ವಿಷಯದಲ್ಲಿ ಪ್ರಮಾಣವಿರುವುದರಿಂದ ಅವ್ಯಕ್ತನಾದವನಿಗೂ ವ್ಯಕ್ತತ್ವವನ್ನು ಹೇಳಿದಂತೆ ಇಲ್ಲಿಯೂ ಗುಣಾತ್ಮಕತ್ವ ಮತ್ತು ಗುಣಿತ್ವ, ಕೂಡುತ್ತದೆ ಎಂದು ಹೇಳಿರುವುದರಿಂದ ಸಂಗತಿ ಇದೆ. ಹರಿಭಕ್ತಿಯು ಬೇಡವೋ ಅಥವಾ ಬೇಕೋ? ಪರಮಾತ್ಮನಿಗೆ ಗುಣವತ್ತ್ವವು ಇಲ್ಲವೋ ಇದೆಯೋ? ಗುಣಾತ್ಮಕನಾದ ಶ್ರೀಹರಿಗೆ ಗುಣವತ್ತ್ವವಿಷಯದಲ್ಲಿ ಸಂಭಾವನಾ ಹಾಗೂ ಪ್ರಮಾಣಗಳಿಲ್ಲದೇ ಯುಕ್ತಿವಿರುದ್ಧವಾಗಿದೆಯೋ ಅಥವಾ ಸಂಭಾವನಾಪ್ರಮಾಣಗಳಿಂದ ಕೂಡಿ ಯುಕ್ತಿಯುಕ್ತವಾಗಿದೆಯೋ? ಎಂಬುದು ಇಲ್ಲಿ ಚರ್ಚಿಸಲ್ಪಟ್ಟಿದೆ.

**ಪೂರ್ವಪಕ್ಷ** :- ತನ್ನಲ್ಲಿ ತಾನಿರುವುದು ಎಲ್ಲಿಯೂ ಕಂಡಿಲ್ಲವಾದ್ದರಿಂದ ಗುಣಸ್ವರೂಪನಾದ ಶ್ರೀಹರಿಯು ಗುಣವುಳ್ಳವನು ಎಂಬ ವಿಷಯದಲ್ಲಿ ಸಂಭಾವನೆಯೂ ಇಲ್ಲ. (ಸಂಭಾವನೆ ಎಂದರೆ ಹೀಗಿರಬಹುದು ಎಂಬ ಅನಿಸಿಕೆ. ಉದಾ: ಕಿವಿಯಲ್ಲಿ ಒಂದು ಹುಳುವು ಹೊಕ್ಕಿತು ಎಂಬ ವಿಷಯದಲ್ಲಿ ಸಂಭಾವನೆ ಇದೆ. ಆದರೆ ನನ್ನ ಕಿವಿಯಲ್ಲಿ ಆನೆ ಹೊಕ್ಕಿತು ಎಂಬಲ್ಲಿ ಸಂಭಾವನೆ ಇಲ್ಲ). ಆದ್ದರಿಂದ ಪ್ರಮಾಣವು ಇಲ್ಲ. ಮತ್ತು 'ಹರಿಃ ನ ಗುಣವಾನ್ ಗುಣಾತ್ಮಕತ್ವಾತ್' ಹಾಗೂ 'ಹರಿಃ ನ ಗುಣಾತ್ಮಕಃ ಗುಣವತ್ತ್ವಾತ್' ಇತ್ಯಾದಿ ಯುಕ್ತಿಗಳಿಂದ ವಿರುದ್ಧವೂ ಆಗಿದೆ. ಭಗವಂತನಲ್ಲಿ ಗುಣಸ್ವರೂಪತ್ವೇ ಇಲ್ಲ ಎಂದು ಶಂಕಿಸಬಾರದು. ಏಕೆಂದರೆ 'ಸಮವಾಯಾಭ್ಯುಪಗಮಾಚ್ಚ' ಎಂಬ ಸೂತ್ರದಲ್ಲಿ ಸಮವಾಯಸಂಬಂಧವನ್ನು ನಿರಾಕರಿಸಿದ್ದರಿಂದ ಮತ್ತು 'ಏಕವೇವಾದ್ವಿತೀಯಂ' ಎಂಬ ಶ್ರುತಿಯಲ್ಲಿ ಗುಣಗುಣಿಭೇದವನ್ನು ನಿರಾಕರಣೆ ಮಾಡಿದ್ದರಿಂದಲೂ ಗುಣಸ್ವರೂಪತ್ವವು ಸಿದ್ಧವಾಗಿದೆ. ಇದರಿಂದಾಗಿ ಗುಣವತ್ತ್ವವಿಲ್ಲದ ಪ್ರಯುಕ್ತವಾಗಿ ಭಕ್ತಿಯು ಮಾಡಬೇಕಾಗಿಲ್ಲ.

**ಸಿದ್ಧಾಂತ** :- ಕುಂಡಲಾತ್ಮಕವಾದ ಹಾವು ವಿಶೇಷ ಎಂಬ ಶಕ್ತಿಯಿಂದಾಗಿ (ವಿಶೇಷ ಎಂದರೆ ಆ ವಸ್ತುವು ಒಂದೇ ಆಗಿದ್ದರೂ ಭೇದವ್ಯವಹಾರಾಸ್ಪದವಾಗುತ್ತದೆ. ಅಂತಹ ಭೇದವ್ಯವಹಾರಕ್ಕೆ ಕಾರಣೀಭೂತವಾದ ವಸ್ತುಸ್ವಭಾವವನ್ನು

ವಿಶೇಷ ಎಂದು ಕರೆಯುತ್ತಾರೆ) ಕುಂಡಲಾಕಾರವುಳ್ಳದ್ದೂ ಆಗಿದೆ. ಪ್ರಕಾಶ-ಸ್ವರೂಪನಾದ ಸೂರ್ಯನು 'ಪೂರ್ವಃ ಕಾಲಃ' ಎಂಬಲ್ಲಿ 'ಪೂರ್ವ'ವು ಕಾಲವೇ ಆಗಿದ್ದರೂ ಕಾಲಕ್ಕೆ ವಿಶೇಷಣವಾಗುವಂತೆ ಗುಣಸ್ವರೂಪನೇ ಆದ ಪರಮಾತ್ಮನು ಭೇದಪ್ರತಿನಿಧಿಯಾದ 'ವಿಶೇಷ'ದ ಬಲದಿಂದ ಗುಣ-ವುಳ್ಳವನಾಗುವುದು ಅಸಂಭಾವಿತವೇನಲ್ಲ. ಮತ್ತು 'ಆನಂದಂ ಬ್ರಹ್ಮಣೋ ವಿದ್ವಾನ್' ಎಂಬ ಶ್ರುತಿಯು ಗುಣವತ್ತ್ವವನ್ನು 'ಅಥೈಷ ಪರಮ ಆನಂದಃ' ಎಂಬ ಶ್ರುತಿಯು ಗುಣಸ್ವರೂಪವತ್ತ್ವವನ್ನು ಹೇಳುವುದರಿಂದ ಎರಡೂ ಪ್ರಮಾಣಿಕವೇ ಆಗಿವೆ. ಪರಮಾತ್ಮನು ಶಾಸ್ತ್ರಯೋನಿತ್ವಾಧಿಕರಣದಲ್ಲಿ ಹೇಳಿದಂತೆ ಕೇವಲ ಯುಕ್ತಿಗಮ್ಯನೇ ಅಲ್ಲ. ಆದ್ದರಿಂದ 'ಶ್ರುತೇಸ್ತು' ಎಂಬ ಅಧಿಕರಣನ್ಯಾಯದಂತೆ ಅವನಲ್ಲಿ ಗುಣತ್ವ ಮತ್ತು ಗುಣಿತ್ವವು ಯುಕ್ತಿಗೆ ಅವಿರುದ್ಧವೇ ಆಗಿದೆ. ಆದ್ದರಿಂದ ಭಕ್ತಿ ಮಾಡಬೇಕು.

## ॥ ಓಂ ಪರಮತಃ ಸೇತೂನ್ಮಾನಸಂಬಂಧಭೇದ-ವ್ಯಪದೇಶೇಭ್ಯಃ ಓಂ ॥ ೩-೨-೧೬

ಪೂರ್ವಾಧಿಕರಣದಲ್ಲಿ ಈಶನ ಗುಣಗಳಿಗೆ ತತ್‌ಸ್ವರೂಪತ್ವವನ್ನು ತದ್ಧರ್ಮತ್ವವನ್ನು ಹೇಳಲಾಯಿತು. ಅಂದರೆ ಈಶಸ್ವರೂಪವಾಗಿದ್ದರೂ ಈಶನಲ್ಲಿರುವಂಥವು ಎಂದು ಹೇಳಲಾಯಿತು. ಈ ಅಧಿಕರಣದಲ್ಲಿ ಅವುಗಳಿಗೆ ಅಲೌಕಿಕತ್ವವನ್ನು ಲೌಕಿಕಶಬ್ದವಾಚ್ಯತ್ವವನ್ನು ಹೇಳಲಾಗುವುದು ಎಂಬುದೇ ಸಂಗತಿ. ಶ್ರೀಹರಿಯಲ್ಲಿ ಅತಿಶಯಿತ ಭಕ್ತಿಯನ್ನು ಮಾಡಬೇಕಾಗಿಲ್ಲವೋ ಅಥವಾ ಮಾಡಬೇಕೋ? ಭಗವಂತನ ಗುಣಗಳು ಲೌಕಿಕವೋ ಅಲೌಕಿಕವೋ? ಅಲೌಕಿಕತ್ವಪಕ್ಷದಲ್ಲಿ ಜ್ಞಾನಾನಂದಾದಿ ಪದವಾಚ್ಯತ್ವವು ಅಯುಕ್ತವೋ ಯುಕ್ತವೋ? ಎಂಬುದು ಇಲ್ಲಿಯ ಚಿಂತಾ ಪರಂಪರೆ.

**ಪೂರ್ವಪಕ್ಷ** :- ಘಟವಿಲಕ್ಷಣವಾದ ವಸ್ತುವಿನಲ್ಲಿ ಘಟಪದಪ್ರಯೋಗ ಕಂಡಿಲ್ಲ. ಆದರೆ ಭಗವಂತನ ಆನಂದದಲ್ಲಿ ಆನಂದಪದ ಪ್ರಯೋಗವು 'ಆನಂದಂ ಬ್ರಹ್ಮಣಃ' ಎಂಬಲ್ಲಿ ಕಂಡಿದೆ. ಆದ್ದರಿಂದ ಭಗವಂತನ ಆನಂದವು ಲೌಕಿಕಾನಂದ ಎಂದೇ ಹೇಳಬೇಕಾಗುತ್ತದೆ. ಮತ್ತೂ ಅಲೌಕಿಕ ಎನ್ನುವುದಕ್ಕೆ

ಪ್ರಮಾಣವಿಲ್ಲ. ಒಂದು ವೇಳೆ ಅದು ಅಲೌಕಿಕವೇ ಆಗಿದ್ದರೆ ಅಲ್ಲಿ ಆನಂದಪದ ಪ್ರಯೋಗ ಸರಿಯಾಗುತ್ತಿರಲಿಲ್ಲ.

**ಸಿದ್ಧಾಂತ** :- ಪರಮಾತ್ಮನ ಆನಂದಾದಿಗಳು ಅಲೌಕಿಕವೇ ಆಗಿವೆ. 'ಏಷ ಸೇತುರ್ವಿಧೃತಿಃ ಯ ಏಷ ಆನಂದಃ ಪರಸ್ಯ' ಎಂಬಲ್ಲಿ ಲೌಕಿಕ ಆನಂದಾದಿಗಳಲ್ಲಿ ಅಸಂಭಾವಿತವಾದ ಸೇತುತ್ವ ಎಂದರೆ ಆಶ್ರಯತ್ವವನ್ನು ಹೇಳಲಾಗಿದೆ. 'ಯತೋ ವಾಚೋ ನಿವರ್ತಂತೇ' ಎಂಬಲ್ಲಿ ಉನ್ಮಾನತ್ವ ಅಂದರೆ ಪೂರ್ಣತ್ವವನ್ನು ಹೇಳಲಾಗಿದೆ. 'ಏತಸ್ಯೈವಾನಂದಸ್ಯ ಅನ್ಯಾನಿ ಭೂತಾನಿ ಮಾತ್ರಾಂ ಉಪಜೀವಂತಿ' ಎಂಬಲ್ಲಿ ಬಿಂಬತ್ವವನ್ನು ಹೇಳಲಾಗಿದೆ. 'ಅನ್ಯತ್‌ಜ್ಞಾನಂ ತು ಜೀವಾನಾಂ ಅನ್ಯತ್ ಜ್ಞಾನಂ ಪರಸ್ಯ ಚ' ಎಂಬಲ್ಲಿ ಲೋಕ ವಿಲಕ್ಷಣತ್ವವನ್ನು ಹೇಳಲಾಗಿದೆ. 'ಅದೃಷ್ಟಂ ಅವ್ಯವಹಾರ್ಯಂ ಅವ್ಯಪದೇಶ್ಯಂ' ಎಂಬಲ್ಲಿ ಅದೃಷ್ಟತ್ವಾದಿಧರ್ಮಗಳನ್ನು ಹೇಳಿದ್ದಾರೆ. ಆದ್ದರಿಂದ ಬ್ರಹ್ಮಾನಂದಾದಿಗಳು ಅಲೌಕಿಕವೇ ಆಗಿವೆ. ಹಾಗಾದರೆ ಅನಂದ ಶಬ್ದಪ್ರಯೋಗ ಹೇಗೆ? ಎಂದರೆ ಯಾವ ರೀತಿಯಾಗಿ ಜೀವರು ಪ್ರಸಿದ್ಧಪಾದಕ್ಕಿಂತ ವಿಲಕ್ಷಣರಾಗಿದ್ದರೂ ಪರಮಾತ್ಮನು ಅಂಶಿ, ಜೀವನು ಅಂಶ ಎಂಬುದನ್ನು ತಿಳಿಸಲು 'ಪಾದೋಽಸ್ಯ ವಿಶ್ವಾ ಭೂತಾನಿ' ಎಂಬಲ್ಲಿ ಪಾದಶಬ್ದಪ್ರಯೋಗ ಕಂಡಿದೆಯೋ ಅದರಂತೆ ಪರಮಾತ್ಮನ ಜ್ಞಾನಾನಂದಾದಿಗುಣಗಳಿಗೂ ಅರ್ಥಪ್ರಕಾಶತ್ವ ಅನುಕೂಲವೇದ್ಯತ್ವ ಮೊದಲಾದುದನ್ನು ತಿಳಿಸಲು ಜ್ಞಾನಾನಂದಾದಿ ಶಬ್ದಗಳನ್ನು ಪ್ರಯೋಗಿಸಲಾಗುತ್ತದೆ. 'ಅಲೌಕಿಕೋಽಪಿ ಜ್ಞಾನಾದಿಃ ತಚ್ಛಬ್ದೇನೈವ ಭಣ್ಯತೇ ಜ್ಞಾಪನಾರ್ಥಾಯ ಲೋಕಸ್ಯ' ಪರಮಾತ್ಮನ ಜ್ಞಾನಾದಿಗಳು ಅಲೌಕಿಕವಾದರೂ ಅದನ್ನು ಪರಿಚಯಿಸಲು ಲೌಕಿಕಶಬ್ದಗಳನ್ನೇ ಪ್ರಯೋಗಿಸುತ್ತಾರೆ ಎಂಬ ಸ್ಮೃತಿ ಇರುವುದರಿಂದ ಪರಮಾತ್ಮನ ಗುಣಸಮೂಹವು ಅಲೌಕಿಕವೇ ಆದುದರಿಂದ ಪರಮಾತ್ಮನಲ್ಲಿ ಅತಿಶಯಿತವಾದ ಭಕ್ತಿಯು ಯುಕ್ತವಾಗುತ್ತದೆ. ಆ ಶಬ್ದಗಳಿಗೆ ಅಲೌಕಿಕ ಆನಂದಾದಿಗಳಲ್ಲಿ ಸಂಬಂಧ ಜ್ಞಾನವೇ ಉಂಟಾಗುವುದಿಲ್ಲ ಎಂಬ ಪ್ರಶ್ನೆಯನ್ನು ಮುಂದೆ 'ಕಾರ್ಯಖ್ಯಾನಾತ್' ಎಂಬ ಸೂತ್ರದಲ್ಲಿ ಪರಿಹರಿಸಲಾಗುವುದು.

## ॥ ಓಂ ಸ್ಥಾನವಿಶೇಷಾತ್ ಪ್ರಕಾಶಾದಿವತ್ ಓಂ ॥ ೩-೨-೧೭

ಪೂರ್ವಾಧಿಕರಣದಲ್ಲಿ ಭಗವದ್ಗುಣಗಳು ಲೌಕಿಕಾನಂದಾದಿಗುಣಗಳಿಗೆ ಬಿಂಬವಾದ್ದರಿಂದ ಅಲೌಕಿಕ ಎಂದು ಹೇಳಲಾಯಿತು. ಇಲ್ಲಿ ಆ ಬಿಂಬತ್ವವನ್ನು ಆಕ್ಷೇಪಮಾಡಿ ಪೂರ್ವಪಕ್ಷ ಹೊರಟಿದ್ದರಿಂದ ಆಕ್ಷೇಪಿಕೀ ಸಂಗತಿ ಇದೆ. ಶ್ರೀಹರಿಯಲ್ಲಿ ಅತಿಶಯಿತ ಭಕ್ತಿಗೋಸ್ಕರವಾಗಿ ಹೇಳಲ್ಪಟ್ಟ ಅವನ ಗುಣಗಳ ಬಿಂಬತ್ವನಿಮಿತ್ತಕವಾದ ಅಲೌಕಿಕತ್ವವು ಅಯುಕ್ತವೋ ಯುಕ್ತವೋ? ಭಗವದ್‌ಗುಣಗಳಿಗೆ ತಾರತಮ್ಯೋಪೇತ ಚತುರ್ಮುಖಾದಿ ಗುಣ-ಬಿಂಬತ್ವವು ಅಯುಕ್ತವೋ ಯುಕ್ತವೋ? ಪ್ರತಿಬಿಂಬ ವೈಚಿತ್ರ್ಯಕ್ಕೆ ಬಿಂಬ-ವೈಚಿತ್ರ್ಯವೇ ಕಾರಣವೋ ಅಥವಾ ಬೇರೆಯೂ ಇದೆಯೋ? ಎಂಬುದು ಈ ಅಧಿಕರಣದ ವಿಚಾರ ಪರಂಪರೆ.

**ಪೂರ್ವಪಕ್ಷ** :- ವೃದ್ಧಿಹ್ರಾಸಾಧಿಕರಣದಲ್ಲಿ ಚತುರ್ಮುಖಾದಿಗಳ ಆನಂದಾದಿಗಳಿಗೆ ತಾರತಮ್ಯವನ್ನು ಹೇಳಿದ್ದಾರೆ. ಆ ಗುಣಗಳಿಗೆ ಭಗವಂತನ ಗುಣಗಳು ಬಿಂಬವೆಂದಾದರೆ ಅವನ ಆನಂದಾದಿಗಳಲ್ಲಿ ತಾರತಮ್ಯ ಬರಬೇಕಾಗುತ್ತದೆ. ಯದ್ಯಪಿ ಅದೃಷ್ಟಾನಿಯಮಾತ್ ಎಂಬಲ್ಲಿ ಪ್ರತಿಬಿಂಬ ವೈಚಿತ್ರ್ಯಕ್ಕೆ ಅದೃಷ್ಟಾದಿ ವೈಚಿತ್ರ್ಯಕಾರಣ ಎಂದು ಹೇಳಿದ್ದಾರೆ. ಆದರೆ ಚತುರ್ಮುಖಾದಿಗಳ ಆನಂದಾದಿ ಗುಣಗಳು ಸ್ವಾಭಾವಿಕವಾದ್ದರಿಂದ ಜನ್ಯವಾದ ಅದೃಷ್ಟಾದಿಗಳು ಅವುಗಳಿಗೆ ಕಾರಣವಾಗಲು ಸಾಧ್ಯವಿಲ್ಲ. ಹೀಗಾಗಿ ಬಿಂಬವೈಚಿತ್ರ್ಯವೇ ಪ್ರತಿಬಿಂಬ ವೈಚಿತ್ರ್ಯಕ್ಕೆ ಕಾರಣವೆನ್ನಬೇಕು. ಆದರೆ 'ನ ಸ್ಥಾನತಃ' ಎಂಬ ಸೂತ್ರದಲ್ಲಿ ಭಗವದ್‌ಗುಣಗಳಿಗೆ ತಾರತಮ್ಯವನ್ನು ನಿರಾಕರಿಸಲಾಗಿದೆ. ಆದ್ದರಿಂದ ಲೌಕಿಕ ಗುಣಗಳನ್ನು ಕುರಿತು ಭಗವದ್-ಗುಣಗಳು ಬಿಂಬವಲ್ಲ ಎನ್ನಬೇಕು. ಇದರಿಂದ ಅವುಗಳಲ್ಲಿ ಅಲೌಕಿಕತ್ವವೂ ಇಲ್ಲದಂತಾಗಿ ಶ್ರೀಹರಿಯಲ್ಲಿ ಅತಿಶಯಭಕ್ತಿ ಬೇಡ ಎಂದಾಗುತ್ತದೆ.

**ಸಿದ್ಧಾಂತ** :- ಪ್ರತಿಬಿಂಬ ವೈಚಿತ್ರ್ಯಕ್ಕೆ ಬಿಂಬ ವೈಚಿತ್ರ್ಯವೇ ಕಾರಣ ಎಂಬ ನಿಯಮವಿಲ್ಲ. ಸೂರ್ಯನಲ್ಲಿ ವೈಚಿತ್ರ್ಯವಿಲ್ಲದಿದ್ದರೂ ಸೂರ್ಯಕಾಂತಮಣಿ ಎಂಬ ಸ್ಥಾನದ ಗುಣದಿಂದ ಅಲ್ಲಿ ಮೂಡಿದ ಪ್ರತಿಬಿಂಬದಲ್ಲಿ ಅಗ್ನಿ ಜನಕತ್ವ-ರೂಪವಾದ ವೈಚಿತ್ರ್ಯವು ಕಂಡಿದೆ. ಅದರಂತೆ ಭಗವದ್‌ಗುಣಗಳಲ್ಲಿ

ತಾರತಮ್ಯವಿಲ್ಲದಿದ್ದರೂ ಚತುರ್ಮುಖಾದಿ ಸ್ಥಾನ, ಅನಾದಿ ಭಕ್ತಿ ಮೊದಲಾದ ಗುಣವೈಚಿತ್ರ್ಯದಿಂದ ಆನಂದಾದಿಗಳಲ್ಲಿ ತಾರತಮ್ಯ ಬರಬಹುದು. 'ಬ್ರಹ್ಮಾದಿಗುಣವೈಶೇಷ್ಯಾತ್' ಎಂಬ ಸ್ಮೃತಿಯೂ ಇದಕ್ಕೆ ಆಧಾರವಾಗಿದೆ. 'ಐಶ್ವರ್ಯಾತ್ ಪರಮಾತ್' ಎಂಬ ಸ್ಮೃತಿಯ ಆಧಾರದಿಂದ ಭಗವಂತನ ಶಕ್ತಿಯಿಂದಾಗಿ ಚತುರ್ಮುಖಾದಿಗಳ ಆನಂದಾದಿಗಳಲ್ಲಿ ತಾರತಮ್ಯ ಹೇಳಬಹುದು. ಇದರಿಂದ ಭಗವದ್‌ಗುಣಗಳ ಬಿಂಬತ್ವಕ್ಕೆ ಚ್ಯುತಿ ಇಲ್ಲ. ಆದ್ದರಿಂದ ಅವನಲ್ಲಿ ಅತಿಶಯಿತ ಭಕ್ತಿಯು ಯುಕ್ತವೇ ಆಗಿದೆ.

## ॥ ಓಂ ತಥಾನ್ಯತ್ ಪ್ರತಿಷೇಧಾತ್ ಓಂ ॥ ೩-೨-೧೮

ಈ ಅಧಿಕರಣದಲ್ಲಿ 'ಪರಮತಃ....' ಎಂಬಲ್ಲಿ ಹೇಳಲ್ಪಟ್ಟ ನ್ಯಾಯವನ್ನೇ ಅತಿದೇಶ ಮಾಡಿದದರಿಂದ ಅತಿದೇಶಿಕೀ ಸಂಗತಿ ಇದೆ. ಯದ್ಯಪಿ ಪರಮತಃ ಎಂಬ ಅಧಿಕರಣದ ಅನಂತರ - ಸ್ಥಾನವಿಶೇಷಾತ್ ಎಂಬ ಅಧಿಕರಣ ಬಂದಿದೆ. ಆದರೂ ಅದು 'ಪರಮತಃ' ಎಂಬಲ್ಲಿ ಪ್ರಸ್ತುತವಾದ ಸಂಬಂಧ(ಬಿಂಬ ಪ್ರತಿ ಬಿಂಬ ಭಾವ) ರೂಪ ಹೇತುವಿಗೆ ಸಾಧಕವಾದ್ದರಿಂದ ಏಕಾರ್ಥಪ್ರತಿಪಾದಕವೇ ಆಯಿತು. ಹಾಗಾಗಿ 'ಪರಮತಃ' ಎಂಬಲ್ಲಿಯ ನ್ಯಾಯವನ್ನು ಅತಿದೇಶಮಾಡಲು ಸ್ಥಾನ ವಿಶೇಷಾಧಿಕರಣವು ಅಡ್ಡಿ ಮಾಡುವುದಿಲ್ಲ.

ಭಕ್ತಿಯು ಅಯುಕ್ತವೋ, ಯುಕ್ತವೋ? ಬ್ರಹ್ಮನು ವ್ಯಕ್ತನೋ, ಅವ್ಯಕ್ತನೋ? ಧ್ಯಾನದಲ್ಲಿ ಪ್ರತೀತವಾದ ಆಕಾರವೇ ಬ್ರಹ್ಮನೋ ಅಥವಾ ಬೇರೆಯೋ? ಎಂಬುದನ್ನು ಇಲ್ಲಿ ನಿರ್ಣಯ ಮಾಡಲಾಗಿದೆ.

**ಪೂರ್ವಪಕ್ಷ** :- ಮುಂದೆ ಫಲಮತ ಉಪಪತ್ತೇಃ ಎಂಬಲ್ಲಿ ಹೇಳುವಂತೆ ಬ್ರಹ್ಮನೇ ಮೋಕ್ಷದಾತ. ಆ ಬ್ರಹ್ಮನಾದರೂ 'ತಂ ಯಥಾ ಯಥಾ ಉಪಾಸತೇ' ಎಂಬ ಶ್ರುತಿಯ ಪ್ರಕಾರ ಉಪಾಸಿತನಾದರೆ ಮಾತ್ರ ಫಲದಾತ. ಧ್ಯಾನ-ಕಾಲದಲ್ಲಿ ಉಪಾಸಿತವಾಗುವ ವಸ್ತುವು ಬ್ರಹ್ಮನಲ್ಲದೇ ಬೇರೆ ಎಂದಾದರೆ ಆ ಬೇರೆ ವಸ್ತು ಫಲಪ್ರದವಾಗುವುದಿಲ್ಲವಾದ್ದರಿಂದ ಧ್ಯಾನವು ವ್ಯರ್ಥ-ವಾಗಬೇಕಾಗಿ ಬರುವುದರಿಂದ ಧ್ಯಾನದಲ್ಲಿ ಪ್ರತೀತನಾಗುವವನೇ ಬ್ರಹ್ಮ ಎನ್ನಬೇಕು. ಯದ್ಯಪಿ ಧಾತೃ ಪುರುಷರು ಬಹಳ ಇರುವುದರದಿಂದ ಧ್ಯಾತನಾದ ಭಗವಂತನಲ್ಲಿ ಬಹುತ್ವ ಪ್ರಸಂಗ ಬರುತ್ತದೆ. ಆದರೂ

ಭಗವಂತನ ಒಬ್ಬನೇ ಆದರೂ ಅನೇಕ ರೂಪ ಉಳ್ಳವನಾದ್ದರಿಂದ ಬಹುತ್ವವು ಅನಿಷ್ಟವೇನಲ್ಲ. ಹೀಗಾಗಿ ಪುರುಷಪ್ರಯತ್ನದಿಂದಲೇ ಧ್ಯಾನಕಾಲದಲ್ಲಿ ಭಗವಂತನು ವ್ಯಕ್ತನಾಗುವುದರದಿಂದ ಭಕ್ತಿಯು ಬೇಕಾಗಿಲ್ಲ.

**ಸಿದ್ಧಾಂತ** :- ಭಗವದ್‌ಗುಣಗಳಲ್ಲಿ ಧಾರಣಸಾಮರ್ಥ್ಯ ಪೂರ್ಣತ್ವಾದಿ-ಗಳಿರುವುದರಿಂದ ಅವುಗಳು ಹೇಗೆ ಲೋಕವಿಲಕ್ಷಣವೋ ಅದರಂತೆ ಭಗವಂತನೂ ಕೂಡ 'ಅರೂಪವದೇವ' ಎಂಬಲ್ಲಿ ಹೇಳಿದಂತೆ ಅಪ್ರಾಕೃತ, ನಿರ್ದೋಷ, ಸರ್ವಸುಲಕ್ಷಣಭರಿತ, ದಿವ್ಯಸ್ವರೂಪ ಉಳ್ಳವನಾದ್ದರಿಂದ ಧ್ಯಾನಕಾಲದಲ್ಲಿ ತೋರುವ ನಾನಾ ದುರ್ಲಕ್ಷಣ ಉಳ್ಳ ವಸ್ತುವಿಗಿಂತ ವಿಲಕ್ಷಣನೇ ಆಗಬೇಕು. 'ತದೇವ ಬ್ರಹ್ಮ ತ್ವಂ ವಿದ್ಧಿ' ಎಂಬ ಶ್ರುತಿಯೂ ಕೂಡ ಧ್ಯಾನಪ್ರತೀತ ವಸ್ತುವಿಗೆ ಬ್ರಹ್ಮತ್ವವನ್ನು ನಿಷೇಧಿಸಿ ಬ್ರಹ್ಮನನ್ನು ಬೇರೆಯೇ ಎಂದು ಹೇಳಿದೆ.

**ಪ್ರಶ್ನೆ** :- ಹಾಗಾದರೆ ಬ್ರಹ್ಮನು ಧ್ಯಾತನಲ್ಲವಾದ್ದರಿಂದ ಅವನು ಮುಕ್ತಿಪ್ರದ ಹೇಗೆ?

**ಪರಿಹಾರ** :- ಉಪಾಸಿತನಾದ ಬ್ರಹ್ಮನೇ ಫಲಪ್ರದ ಎಂಬ ಮಾತಿಗೆ 'ಪಶ್ಯಂತಿ ಪರಮಂ ಬ್ರಹ್ಮ' ಎಂಬ ಸ್ಮೃತಿಯ ಪ್ರಕಾರವಾಗಿ 'ಧ್ಯಾನಕಾಲದಲ್ಲಿ ಪ್ರತೀತವಾದ ವಾಸನಾಮಯ ಪ್ರತಿಮೆಯಲ್ಲಿ ಸನ್ನಿಹಿತನಾದ ಬ್ರಹ್ಮನು ಫಲಪ್ರದ ಎಂದರ್ಥ. ಆದ್ದರಿಂದ ಭಕ್ತಿಯು ಆವಶ್ಯಕ.

## ॥ ಓಂ ಅನೇನ ಸರ್ವಗತ ಮಾಯಾ ಮಯ ಶಬ್ದಾದಿಭ್ಯಃ ಓಂ ॥ ೩-೨-೧೯

ಪರಮಾತ್ಮನು ಅವ್ಯಕ್ತನಾಗಿದ್ದರೂ ಪ್ರಸನ್ನನಾದಾಗ ತನ್ನ ಸಾಕ್ಷಾತ್ಕಾರ-ವನ್ನು ಬೇರೆಯವರಿಗೆ ಉಂಟುಮಾಡುವಂತೆ ಯಾವಾಗಲಾದರೊಮ್ಮೆ ಎಲ್ಲಿಯಾದರೂ, ಯಾರಿಗಾದರೂ ತನ್ನ ಸ್ವಾತಂತ್ರ್ಯವನ್ನು ಕೊಡಲಿ ಎಂದು ಶಂಕಿಸಿದ್ದರಿಂದ ಸಂಗತಿ ಇದೆ. ಅತಿಶಯವಾದ ಭಕ್ತಿಯು ಅಯುಕ್ತವೋ, ಯುಕ್ತವೋ? ಎಲ್ಲಿಯಾದರೂ ಯಾವಾಗಲಾದರೂ ಬೇರೆಯವರೂ ಕರ್ತ-ರಾಗಬಹುದೋ? ಅಥವಾ ಎಲ್ಲ ದೇಶದಲ್ಲೂ, ಎಲ್ಲಾ ಕಾಲದಲ್ಲೂ ಎಲ್ಲ

ವಸ್ತುಗಳಿಗೂ ಶ್ರೀಹರಿಯೇ ಸೃಷ್ಟ್ಯಾದಿಕರ್ತನೋ, ಸ್ವಾತಂತ್ರ್ಯವನ್ನು ಯಾವಾಗ-ಲಾದರೊಮ್ಮೆ ಬೇರೆಯವರಿಗೆ ಕೊಡುವೋ, ಇಲ್ಲವೋ? ಎಂಬುದು ಇಲ್ಲಿ ಚಿಂತಾಪರಂಪರೆ.

**ಪೂರ್ವಪಕ್ಷ** :- ಶ್ರೀಹರಿಯು ಕೃಷ್ಣಾದಿ ಅವತಾರಗಳಲ್ಲಿ ಮತ್ತೊಬ್ಬರ ಸೇವೆ ಮಾಡಿದ್ದು ಮೊದಲಾದ ಅಸಂಭಾವಿತ ಲೀಲೆಗಳನ್ನು ತೋರಿಸಿದ್ದಾನೆ. ಅದರಂತೆ ತನ್ನ ಸ್ವಾತಂತ್ರ್ಯವನ್ನು ಯಾವಾಗಲಾದರೂ ಇನ್ನೊಬ್ಬರಿಗೆ ದಾನ ಮಾಡುವುದು, ಸಂಭಾವಿತವಾದ್ದರಿಂದ ಮತ್ತು ಅವನೊಬ್ಬನೇ ಸರ್ವ-ಸೃಷ್ಟ್ಯಾದಿಕರ್ತ ಎನ್ನುವುದಕ್ಕೆ ಪ್ರಮಾವಿಲ್ಲದಿರುವುದರಿಂದ ಲೋಕದಲ್ಲಿ ರಾಜಾದಿಗಳೂ ಕೆಲಕೆಲವು ಖಂಡಗಳಿಗೆ ಅಧಿಪತಿಗಳಾಗದ್ದರಿಂದ ದೇಶಾಂತರದಲ್ಲಿ ಬೇರೆಯವರೂ ಸೃಷ್ಟ್ಯಾದಿ ಕರ್ತರೆಂದು ಅನುಮಾನ ಮಾಡುವುದು ಸರಿಯಲ್ಲ.

**ಸಿದ್ಧಾಂತ** :- 'ಸ್ವಾತಂತ್ರ್ಯಾತ್ ಕ್ರೀಡತೇ ವಿಷ್ಣುಃ ನ ಹಿ ಸ್ವಾತಂತ್ರ್ಯ-ಮನ್ಯಗಂ ಕರೋತಿ (ಭಗವಂತನು ಸ್ವತಂತ್ರನಾದುದರಿಂದಲೇ ಲೀಲೆಗಳನ್ನು ತೋರಿಸುತ್ತಾನೆ. ಸ್ವಾತಂತ್ರ್ಯವನ್ನು ಯಾರಿಗೂ ಕೊಡುವುದಿಲ್ಲ). ಎಂಬ ಶ್ರುತಿಯ ಪ್ರಕಾರ ಹರಿಯೇ ಸರ್ವಕರ್ತ. 'ಏಷ ಸರ್ವಗತಃ' ಎಂಬ ಶ್ರುತಿಯಿಂದಲೂ ಇದು ಸಿದ್ಧವಾಗಿದೆ. ದೇಶಾಂತರದಲ್ಲಿ ಬೇರೊಬ್ಬ ಕರ್ತ ಇದ್ದಾನೆ ಎಂಬ ಅನುಮಾನ ಈ ಶ್ರುತಿಯಿಂದ ಬಾಧಿತವಾಗಿದೆ. ಬೇರೆ ಪ್ರಮಾಣ ಯಾವುದೂ ಇಲ್ಲ. ಆದ್ದರಿಂದ ಅವನಲ್ಲಿ ಭಕ್ತಿಯು ಯುಕ್ತವೇ ಆಗಿದೆ.

## ॥ ಓಂ ಫಲಮತ ಉಪಪತ್ತೇಃ ಓಂ ॥ ೩-೨-೨೦

ಪರಮಾತ್ಮನಿಗೆ ಸರ್ವಕರ್ತೃತ್ವ ಹೇಳಿದರೆ ವೈಷಮ್ಯಾದಿದೋಷ ಬರುತ್ತ ದೆಂದು, ಅದರ ಪರಿಹಾರಕ್ಕಾಗಿ ಕರ್ಮಾನುಗುಣವಾಗಿ ಫಲ ಕೊಡುತ್ತಾನೆ ಎಂದು ಹೇಳಲಾಯಿತು. ಹಾಗಾದರೆ ಕರ್ಮವೇ ಫಲಪ್ರದವಾಗಲಿ ಎಂಬು ದಾಗಿ ಅಥವಾ ಕರ್ಮದಿಂದಲೇ ಫಲ ಹುಟ್ಟುವ ಪ್ರಯುಕ್ತ ಭಗವಂತನಿಗೆ ಸರ್ವಕರ್ತೃತ್ವವೆಂದು ಹಿಂದೆ ಹೇಳಿದ್ದು ಸರಿಯಲ್ಲ ಎಂದು ಶಂಕಿಸಿದ್ದರಿಂದ

ಸಂಗತಿ ಇದೆ. 'ಅಥ' ಪದೋಕ್ತವಾದ ಭಕ್ತಿಯನ್ನು ಮಾಡಬಾರದೋ ಅಥವಾ ಮಾಡಬೇಕೋ? ಕರ್ಮವೇ ಫಲಪ್ರದ, ಹರಿಯು ಸಹಕಾರಿ ಎಂದು ಹೇಳಬೇಕೋ ಅಥವಾ ಹರಿಯೇ ಫಲಪ್ರದ, ಕರ್ಮವು ಸಹಕಾರಿ ಎಂದು ಹೇಳಬೇಕೋ? 'ರಾತಿರ್ದಾತುಃ ಪರಾಯಣಮ್ (ಭಕ್ತನಿಗೆ ಭಗವಂತನೇ ಫಲಪ್ರದ) ಎಂಬಲ್ಲಿ ಭಗವಂತನಿಗೆ ಹೇಳಲ್ಪಟ್ಟ ಫಲದಾತೃತ್ವವು ಗೌಣವೋ ಮುಖ್ಯವೋ? ಕರ್ಮ ಮಾಡಿದರೆ ಮಾತ್ರ ಫಲ, ಇಲ್ಲದಿದ್ದರೆ ಇಲ್ಲ ಎಂಬ ಅನ್ವಯವ್ಯತಿರೇಕಗಳು ಕರ್ಮಕ್ಕೆ ಪ್ರಾಧಾನ್ಯಕಲ್ಪಕವೋ ಅಥವಾ ಕರ್ಮವು ಸಹಕಾರಿ ಎಂಬುದಾಗಿಯೂ ಅವುಗಳನ್ನು ಕೂಡಸಬಹುದೋ? ಕರ್ಮಕ್ಕೆ ಪ್ರಾಧಾನ್ಯಕಲ್ಪಕವು ಇಲ್ಲವೋ ಇದೆಯೋ? ಎಂಬ ವಿಷಯಗಳು ಇಲ್ಲಿ ಚರ್ಚಿಸಲ್ಪಟ್ಟಿವೆ.

**ಪೂರ್ವಪಕ್ಷ** :- ಈಶ್ವರನು ಫಲಪ್ರದನೆಂಬ ಪಕ್ಷದಲ್ಲಿ ಕರ್ಮವು ವ್ಯರ್ಥವಾಗುತ್ತದೆ. ಕರ್ಮವನ್ನು ಬೋಧಿಸುವ ವೇದವು ಅಪ್ರಮಾಣ-ವಾಗುತ್ತದೆ. ಆದ್ದರಿಂದ ಕರ್ಮವನ್ನು ಒಪ್ಪಬೇಕು. ಕರ್ಮವನ್ನು ಒಪ್ಪದಿದ್ದರೆ ಶ್ರೀಹರಿಗೆ ವೈಷಮ್ಯಾದಿ ದೋಷಗಳು ಬರುತ್ತವೆ. ಮತ್ತು ಕರ್ಮ ಮಾಡ-ದಿದ್ದವರಿಗೆ ಫಲವೂ ಕಂಡಿಲ್ಲ. ಆದ್ದರಿಂದ ಅವಶ್ಯ ಕರ್ಮವನ್ನು ಒಪ್ಪಲೇಬೇಕು. ಅಂತಹ ಕರ್ಮ ಮಾಡಿದರೆ ಮಾತ್ರ ಫಲ ಇಲ್ಲದಿದ್ದರೆ ಇಲ್ಲ ಎಂಬ ಅನ್ವಯ-ವ್ಯತಿರೇಕವಿರುವುದರಿಂದಲೂ, ಕರ್ಮಕ್ಕೆ ಫಲಪ್ರದತ್ವವನ್ನು ಪ್ರಧಾನವಾಗಿ ಒಪ್ಪದೇ ಆ ಅನ್ವಯವ್ಯತಿರೇಕವನ್ನು ಬೇರೆ ರೀತಿಯಾಗಿ ಕೂಡಿಸಲು ಆಧಾರ-ವಿಲ್ಲವಾದ್ದರಿಂದ, ಆಪ್ತತಮರಾದ ಗೌತಮ, ಜೈಮಿನಿಗಳಿಗೆ ಸಮ್ಮತ-ವಾದ್ದರಿಂದಲೂ ಕರ್ಮವೇ ಪ್ರಧಾನವಾಗಿ ಫಲಪ್ರದವಾಗಿದೆ. ಪರಮಾತ್ಮನು 'ಏಷ ಹ್ಯೇವ ಸಾಧು ಕರ್ಮ ಕಾರಯತಿ' ಎಂಬ ಶ್ರುತಿಯ ಪ್ರಕಾರ ಫಲ-ಪ್ರದವಾದ ಕರ್ಮಕ್ಕೆ ಕಾರಣನಾದ್ದರಿಂದ 'ರಾತಿರ್ದಾತುಃ ಪರಾಯಣಮ್' ಎಂಬ ಶ್ರುತಿಯು ಪರಂಪರಯಾ ಫಲಪ್ರದತ್ವವನ್ನು ಹೇಳುತ್ತದೆ ಎಂಬುದಾಗಿ ಭಾವಿಸಬೇಕು. ಆದ್ದರಿಂದ ಪರಮಾತ್ಮನು ಫಲಪ್ರದವಾದ ಕರ್ಮಕ್ಕೆ ಸಹಕಾರಿ.

**ಸಿದ್ಧಾಂತ** :- ಕರ್ಮವು ಜಡ, ಪರಮಾತ್ಮನು ಚೇತನ ಎಂಬ ಯುಕ್ತಿಯಿಂದ ಮತ್ತು 'ಪುಣ್ಯೇನ ಪುಣ್ಯಂ ಲೋಕಂ ನಯತಿ' (ಪರಮಾತ್ಮನೇ ಪುಣ್ಯಲೋಕ ವನ್ನು ಕೊಡುತ್ತಾನೆ) ಎಂಬ ವಿಶೇಷ ಶ್ರುತಿಯೂ ಇರುವುದರಿಂದ

'ರಾತಿರ್ದಾತುಃ ಪರಾಯಣಮ್' ಎಂಬ ಶ್ರುತಿಯು ಪ್ರಬಲವಾಗಿದೆ. ಅದಕ್ಕೆ ಗೌಣಾರ್ಥವನ್ನು ಹೇಳುವುದು ಸರಿಯಲ್ಲ. ಕರ್ಮವು ಸಹಕಾರಿಕಾರಣ-ವಾದ್ದರಿಂದ ಕರ್ಮಕ್ಕೂ ಫಲಕ್ಕೂ ಅನ್ವಯವ್ಯತಿರೇಕವನ್ನೂ ಜೈಮಿನಿಮತವನ್ನೂ ಕೂಡಿಸಬಹುದು. ಆದ್ದರಿಂದ ಪರಮಾತ್ಮನಲ್ಲಿ ಭಕ್ತಿಯು ಯುಕ್ತವಾಗಿದೆ.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ಮೂರನೆಯ ಅಧ್ಯಾಯದ ಎರಡನೆಯ ಪಾದವು ಸಮಾಪ್ತವಾಯಿತು.**

# ಮೂರನೆಯ ಅಧ್ಯಾಯದ ಮೂರನೆಯ ಪಾದ

## ॥ ಓಂ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ ॥ ೩-೩-೧

ಹಿಂದಿನ ಎರಡು ಪಾದಗಳಲ್ಲಿ ಅಪರೋಕ್ಷಜ್ಞಾನಕ್ಕೆ ವೈರಾಗ್ಯ ಮತ್ತು ಭಕ್ತಿಗಳು ಆವಶ್ಯಕ ಎಂದುಸಮರ್ಥಿಲಾಯಿತು. ಈ ಅಧಿಕರಣದಲ್ಲಿ ಅಪರೋಕ್ಷಜ್ಞಾನಕ್ಕೆ ಮತ್ತೊಂದು ಸಾಧನವಾದ ಉಪಾಸನೆಯ ವಿಚಾರವನ್ನು ಹೇಳಲಾಗುವುದು. ಅದು ಸರ್ವಸಚ್ಛಾಸ್ತ್ರಶ್ರವಣಮನನರೂಪ ಮತ್ತು ಧ್ಯಾನರೂಪ ಎಂದು ಎರಡು ವಿಧ. ಅದರಲ್ಲಿ ಶ್ರವಣಮನನರೂಪವಾದದ್ದು ಧ್ಯಾನಕ್ಕೆ ಅಂಗವಾಗಿದೆ. (ಸಹಕಾರಿಯಾಗಿದೆ). ಆದ್ದರಿಂದ ಅದನ್ನು ಮೊದಲು ನಿರೂಪಿಸಲಾಗುವುದು. ಸಕಲ ಸಚ್ಛಾಸ್ತ್ರಶ್ರವಣಮನನಗಳನ್ನು ಮಾಡ-ಬೇಕಾಗಿಲ್ಲವೋ ಅಥವಾ ಮಾಡಬೇಕೋ, ಪರಬ್ರಹ್ಮನನ್ನು ತಮ್ಮ ತಮ್ಮ ಶಾಖೆಯಲ್ಲಿ ಹೇಳಿದಂತೆ ತಿಳಿಯಬೇಕೋ, ಅಥವಾ ಸರ್ವವೇದದಲ್ಲಿ ಹೇಳಿದಂತೆ ತಿಳಿಯಬೇಕೋ, ಸರ್ವವೇದಗಳಿಂದ ತಿಳಿಯಬೇಕು ಎನ್ನುವುದಕ್ಕೆ ಸಾಧಕವಿಲ್ಲದೇ ಬಾಧಕವಿದೆಯೋ ಅಥವಾ ಬಾಧಕವಿಲ್ಲದೇ ಸಾಧಕ-ವಿದೆಯೋ, ಶಾಖಾಭೇದವು ಮತ್ತು ಪ್ರತಿಶಾಖೆಯಲ್ಲಿ ಭಿನ್ನಭಿನ್ನ-ವಿಷಯನಿರೂಪಣೆಯು ನಿರವಕಾಶವೋ ಅಥವಾ ಸಾವಕಾಶವೋ ಎನ್ನುವ ಇಷ್ಟು ವಿಚಾರಗಳು ನಿರ್ಣಯಿಸಲ್ಪಟ್ಟಿವೆ.

**ಪೂರ್ವಪಕ್ಷ** :- ಬ್ರಹ್ಮನನ್ನುಸರ್ವವೇದಗಳಿಂದ ತಿಳಿಯಬೇಕು ಎನ್ನುವುದಕ್ಕೆ ಸಾಧಕವಿಲ್ಲ. ಪ್ರತ್ಯುತ (ಅದಕ್ಕೆ ವಿಪರೀತವಾಗಿ )ಬಾಧಕಗಳೇ ಇವೆ.

೧. ಒಬ್ಬೊಬ್ಬರೂ (ಪ್ರತಿಯೊಬ್ಬರೂ) ಸಮಸ್ತವೇದಗಳನ್ನು ಓದಬೇಕು ಎಂಬ ಪಕ್ಷದಲ್ಲಿ ಕಾಣ್ವ ಮೊದಲಾದ ಶಾಖಾಭೇದವು ಅಯುಕ್ತವಾಗುತ್ತದೆ.

೨. ಬ್ರಹ್ಮನು 'ವಿಜ್ಞಾನಾನಂದರೂಪನಾಗಿದ್ದಾನೆ' ಎಂದು ಒಂದು ಶಾಖೆಯಲ್ಲಿ, 'ಸತ್ಯಜ್ಞಾನಾನಂತನಾಗಿದ್ದಾನೆ' ಎಂದು ಇನ್ನೊಂದು ಶಾಖೆಯಲ್ಲಿ ಹೇಗೆ ವಿಭಿನ್ನವಾದ ನಿರೂಪಣೆಯು ಕೊಡುವುದಿಲ್ಲ.

೩. ಮಂದರಿಗೆ ಸರ್ವಶಾಖಾಧ್ಯಯನವು ಶಕ್ಯವಲ್ಲವಾದ್ದರಿಂದ ಸರ್ವ-ವೇಧಾರ್ಥಜ್ಞಾನ ಕೂಡುವುದಿಲ್ಲ. ಅದರಿಂದ ಧ್ಯಾನವೂ ಇಲ್ಲದಂತಾಗಿ ಮಂದರು ಬ್ರಹ್ಮಜ್ಞಾನಾದಿಗಳಲ್ಲಿ ವಿಮುಖರು ಆಗುವ ಪ್ರಸಂಗ ಬರುತ್ತದೆ. ಆದ್ದರಿಂದ ಆಯಾ ಶಾಖೆಯಲ್ಲಿ ಹೇಳಿದಂತೆ ತಿಳಿದರೆ ಸಾಕು. ಸರ್ವಶಾಸ್ತ್ರ-ಶ್ರವಣಮನನ ಬೇಕಾಗಿಲ್ಲ.

**ಸಿದ್ಧಾಂತ** :- ಎಲ್ಲರೂ ಎಲ್ಲ ವೇದಗಳಲ್ಲಿ ಹೇಳಿದಂತೆ ಯಥಾಶಕ್ತಿ ಬ್ರಹ್ಮನನ್ನು ತಿಳಿಯಬೇಕು. ಅದಕ್ಕಾಗಿ ಯಥಾಶಕ್ತಿ ಸಕಲಸಚ್ಛಾಸ್ತ್ರಶ್ರವಣಮನನಗಳನ್ನು ಮಾಡಬೇಕು.

**ಇದಕ್ಕೆ ಸಾಧಕಗಳು** :- ೧. ಭಗವಂತನ ಜ್ಞಾನಕ್ಕೋಸ್ಕರ ಪ್ರವೃತ್ತವಾದ 'ಆತ್ಮೇತ್ಯೇವ ಉಪಾಸೀತ' ಎಂಬ ಇವೇ ಮೊದಲಾದ ವಿಧಿಗಳು ಸರ್ವರಿಗೂ ಸಂಬಂಧಪಟ್ಟದೇ ಹೊರತು ಆಯಾ ಶಾಖೆಯವರಿಗೆ ಮಾತ್ರವಲ್ಲ. ಹೀಗಾಗಿ ಉಪಾಸನಾವಿಧಿಯು ಸರ್ವರಿಗೂ ಸಾಧಾರಣ.

೨. ವಿಧಿವಾಕ್ಯಕ್ಕೆ ತಾತ್ಪರ್ಯವನ್ನು ಬೋಧಿಸಲು ಪ್ರವೃತ್ತವಾದ 'ಅತ್ರ ಹ್ಯೇತೇ', 'ನ ಹಾಸ್ಯ ಕರ್ಮ ಕ್ಷೀಯತೇ' ಇತ್ಯಾದಿ ಅರ್ಥವಾದ ವಾಕ್ಯಗಳೂ ಕೂಡ ಸರ್ವಸಾಧಾರಣವೆ ಆಗಿವೆ.

೩. 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವೇದಾರ್ಥಜ್ಞಾನಕ್ಕೆ ಪ್ರವೃತ್ತವಾದ ಅಧ್ಯಯನ ವಿಧಿಯೂ ಕೂಡ ಸರ್ವಸಾಧಾರಣವೇ ಹೊರತು ಆಯಾ ಶಾಖೆಯವರಿಗೆ ಮಾತ್ರವಲ್ಲ.

೪. 'ಸರ್ವ ವೇದೋಕ್ತಮಾರ್ಗೇಣ' ಎಂಬ ಶ್ರುತಿಯ ಪ್ರಕಾರ ಸರ್ವವೇದೋಕ್ತಕರ್ಮಾನುಷ್ಠಾಕ್ಕೆ ಸರ್ವರಿಗೂ ಅಧಿಕಾರವು ತಿಳಿದು ಬರುವುದರಿಂದ ಅರ್ಥಾತ್ (ಯುಕ್ತಿಯಿಂದ) ಸರ್ವಶಾಖ್ಯಾಧ್ಯಯನವೇ ವಿಹಿತವೆಂದು ತಿಳಿಯುತ್ತದೆ.

೫. 'ಸರ್ವಾನ್ ವೇದಾನ್ ಅಧೀತ್ಯ' ಎಂಬ ಶ್ರುತಿಯೂ ಕೂಡ ಪ್ರತಿಯೊಬ್ಬರು ಸರ್ವಶಾಖಾಧ್ಯಯನ ಮಾಡಿ ಜ್ಞಾನ ಸಂಪಾದಿಸಬೇಕು ಎಂದು ವಿಧಿಸಿದೆ.

೬. 'ಸರ್ವಾನ್ ವೇದಾನ್ ಸೇತಿಹಾಸಾನ್' ಎಂಬ ಬ್ರಹ್ಮತರ್ಕವಚನವೂ ಕೂಡ ಸರ್ವಶಾಖಾಧ್ಯಯನವನ್ನೇ ವಿಧಾನ ಮಾಡಿದೆ. ಆದ್ದರಿಂದ ಯಥಾಶಕ್ತಿ ಪ್ರತಿಯೊಬ್ಬರು ಸರ್ವವೇದಾಧ್ಯಯನವನ್ನೇ ಮಾಡಬೇಕು.

**ಬಾಧಕ ಪರಿಹಾರ** :- ೧. ಒಬ್ಬೊಬ್ಬರು ಸರ್ವವೇದಗಳನ್ನು ಆಧ್ಯಯನ ಮಾಡಬೇಕು ಎಂದಾರೆ ಶಾಖಾಭೇದಗಳು ಏಕೆ? ಎಂದರೆ 'ಶಾಖಾಭೇದೋ ಹಿ ಅಶಕ್ತಿಜಃ' ಎಂಬ ಸ್ಮೃತಿಯ ಪ್ರಕಾಶ ಅಶಕ್ತರಿಗಾಗಿ ಶಾಖಾಭೇದ ಮಾಡಲಾಗಿದೆ. ಶಕ್ತಿ ಇದ್ದವರು ಎಲ್ಲವನ್ನು ಅಧ್ಯಯನ ಮಾಡಬೇಕು.

೨. ಒಂದೊಂದು ಶಾಖೆಯಲ್ಲಿ ವಿಭಿನ್ನವಾಗಿ ಬ್ರಹ್ಮಸ್ವರೂಪನಿರೂಪಣೆ ಮಾಡಿದ್ದನ್ನು ಭಿನ್ನಭಿನ್ನ ಪ್ರಸಂಗದಲ್ಲಿ ಗುಣವಿಧಾನಕ್ಕೋಸ್ಕರ ಪೂರ್ವೋ-ಕ್ತಾನುವಾದ ಎಂದು ಕೂಡಿಸಬೇಕು. ಮತ್ತು ಪುನರುಕ್ತಿ ಎನಿಸಿದಲ್ಲಿ ಅಧಿಕ ಗುಣವಿಧಾನಕ್ಕೋಸ್ಕರ ಪೂರ್ವೋಕ್ತಾನುವಾದ ರೂಪವಾಗಿ ಎಂದು, ಒಂದೇ ಶಾಖೆಯಲ್ಲಿಯೂ ಬಂದಿರುವ ವಿಭಿನ್ನನಿರೂಪಣೆಯಂತೆ ಕೂಡಿಸಬೇಕು.

೩. ಸರ್ವವೇದೋಕ್ತರೀತ್ಯಾ ಬ್ರಹ್ಮನನ್ನು ತಿಳಿಯಬೇಕು ಎಂಬ ನಿಯಮ-ವಿದ್ದರೂ, ಒಂದು ವೇಳೆ ತಿಳಿಯಲಾಗದಿದ್ದರೆ ನಿಯಮಭಂಗವೇನೂ ಇಲ್ಲ. ಏಕೆಂದರೆ ನದಿಗಳೆಲ್ಲವೂ ಸಮುದ್ರಕ್ಕೆ ಸೇರಬೇಕು ಎಂಬ ನಿಯಮವಿದ್ದರೂ 'ಶಕ್ಯೇ ಸಾಗರಗಂ ಭವೇತ್' ಎಂಬ ಸ್ಮೃತಿಯಿಂದ ಶಕ್ಯನುಸಾರವಾಗಿ ಕೂಡಿಸುವಂತೆ ಇಲ್ಲಿಯೂ ಶಕ್ಯನುಸಾರವಾಗಿ ಸರ್ವವೇದಾಧ್ಯಯನವನ್ನು ಕೂಡಿಸಬೇಕು. ಮಂದರಿಗೆ ವೈಮುಖ್ಯದ ಪ್ರಸಂಗವಿಲ್ಲ.

ಜಿಜ್ಞಾಸಾಶಬ್ದಾರ್ಥದ ಏಕದೇಶವಾದ ಸರ್ವಶಾಸ್ತ್ರಶ್ರವಣಮನನಗಳ ಆಕ್ಷೇಪ ಮತ್ತು ಸಮಾಧಾನಗಳೇ ಫಲ.

## ॥ ಓಂ ಉಪಸಂಹಾರೋಽರ್ಥಾಭೇದಾದ್ವಿಶೇಷವತ್ಸಮಾನೇ ಚ ಓಂ ॥ ೩-೩-೨

ಹಿಂದಿನ ಅಧಿಕರಣದಲ್ಲಿ ಪ್ರತಿಯೊಬ್ಬರು ಯಥಾಶಕ್ತಿ ಸರ್ವವೇದಾರ್ಥವನ್ನು ತಿಳಿಯಬೇಕು ಎಂದು ನಿರ್ಣಯಿಸಲಾಯಿತು. ಈ ಅಧಿಕರಣದಲ್ಲಿ ಅದನ್ನು ವ್ಯರ್ಥವೆಂದು ಆಕ್ಷೇಪಿಸುವುದರಿಂದ ಸಂಗತಿ ಇದೆ. ಸರ್ವವೇದಾರ್ಥ ಪರಿಜ್ಞಾನವು ಅನಾವಶ್ಯಕವೋ, ಆವಶ್ಯಕವೋ? ವೇದದಲ್ಲಿ ಸರ್ವತ್ರ ಹೇಳಲ್ಪಟ್ಟ ಗುಣಗಳನ್ನು ಏಕೀಕರಿಸಿ ಉಪಾಸನೆ ಮಾಡುವುದು ಅಯುಕ್ತವೋ, ಯುಕ್ತವೋ? ಎಂಬ ವಿಚಾರ ಇಲ್ಲಿ ನಿರ್ಣಯಿಸಲ್ಪಡುವುದು.

**ಪೂರ್ವಪಕ್ಷ** :- ೧. ಉಪಸಂಹಾರ ಮತ್ತು ಅನುಪಸಂಹಾರ (ಉಪ-ಸಂಹಾರವೆಂದರೆ ಏಕತ್ರ ಅನುಸಂಧಾನ) ಎರಡು ಪ್ರಕಾರಗಳಿಂದಲೂ ಜ್ಞಾನ ಸರಿಯಲ್ಲ. ಸರ್ವವೇದಾರ್ಥಪರಿಜ್ಞಾನವು ಒಂದಾದ ಮೇಲೆ ಒಂದರಂತೆ ಕ್ರಮವಾಗಿ ಬರುವುದರಿಂದ ಸಾರ್ವತ್ರಿಕ ಗುಣಗಳನ್ನು ಏಕಬುದ್ಧಿಯಲ್ಲಿ ತರುವುದು ಅಶಕ್ಯವಾದ ಕಾರ್ಯ. ಎಲ್ಲರಿಗೂ ಅಶಕ್ಯವಾದರೂ ಕೆಲವರಿಗೆ ಶಕ್ಯವಾಗಬಹುದು ಎಂಬ ಕಲ್ಪನೆಗೆ ಆಧಾರವಿಲ್ಲ.

೨. 'ಆತ್ಮೇತ್ಯೇವ ಉಪಾಸೀತ' ಎಂಬ ವಾಕ್ಯದಲ್ಲಿ ಏವಕಾರದಿಂದ ಆತ್ಮತ್ವವನ್ನು (ಸ್ವಾಮಿತ್ವವನ್ನು) ಮಾತ್ರ ಉಪಾಸನೆ ಮಾಡಬೇಕು ಎಂದು ಹೇಳಿದ್ದರಿಂದ ಸರ್ವಗುಣಗಳ ಉಪಸಂಹಾರವು ಈ ವಾಕ್ಯಕ್ಕೆ ವಿರುದ್ಧವಾಗುತ್ತದೆ.

೩. ಪ್ರತಿಯೊಬ್ಬರು ಸರ್ವಗುಣಗಳನ್ನು ಉಪಾಸನೆ ಮಾಡಬೇಕೆಂದಾದರೆ ಪರೋವರೀಯಃ ಪ್ರಕರಣ ವೈಶ್ವಾನರ ಪ್ರಕರಣ ಇತ್ಯಾದಿ ಪ್ರಕರಣ-ಭೇದಗಳು ಬರುತ್ತಿರಲಿಲ್ಲ. ಪ್ರಕರಣ ಭೇದ ಮಾಡಿದ ಉದ್ದೇಶ್ಯವೇ ಎಲ್ಲ ಗುಣಗಳ ಉಪಸಂಹಾರವಾಗದಿದ್ದರೂ ಅಯಾ ಪ್ರಕರಣಗಳಲ್ಲಿ ಹೇಳಲ್ಪಟ್ಟ ಗುಣಗಳನ್ನಾದರೂ ಉಪಾಸನೆ ಮಾಡಲಿ ಎಂಬುದೇ ಆಗಿದೆ.

ಉಪಸಂಹಾರ ಮಾಡದೇ ಧ್ಯಾನ ಮಾಡಬೇಕು ಎಂಬ ಪಕ್ಷವೂ ಸರಿಯಲ್ಲ. ಅದಕ್ಕೆ ಸರಿಯಾದ ಪ್ರಮಾಣವಿಲ್ಲ. 'ಆತ್ಮರ್ತ್ಯೇವ' ಎಂಬ ವಾಕ್ಯವೇ ಪ್ರಮಾಣವಾಗಿದೆ ಎಂದರೆ ಅದೂ ಸರಿಯಲ್ಲ. ಆ ವಾಕ್ಯಕ್ಕೆ ಸ್ವಾಮಿತ್ವವನ್ನು ಉಪಾಸನೆ ಮಾಡದೇ ಇರಬಾರದು ಎಂದು ಅರ್ಥವೇ ಹೊರತು ಇದನ್ನು ಮಾತ್ರ ಮಾಡಬೇಕು ಎಂಬ ಅಭಿಪ್ರಾಯವಲ್ಲ. ಪರೋವರೀಯ ಮೊದಲಾದ ಪ್ರಕರಣ-ಭೇದವೇ ಪ್ರಮಾಣ ಎಂದರೆ ಒಂದೇ ಪ್ರಕರಣದಲ್ಲಿ ಎಲ್ಲಾ ಗುಣಗಳನ್ನೂ ಹೇಳಿರುವ ಸಂಭವವಿರುವುದರಿಂದ ಅನುಪಸಂಹಾರಕ್ಕೆ ಅದು ಪ್ರಮಾಣ-ವಾಗಲಾರದು. ಆದ್ದರಿಂದ ಉಪಸಂಹಾರ ಅನುಪಸಂಹಾರ ಎರಡು ಪಕ್ಷದಲ್ಲಿಯೂ ಧ್ಯಾನವು ಅಯುಕ್ತವಾಗುತ್ತದೆ. ಆದ್ದರಿಂದ ಧ್ಯಾನಕ್ಕೆ ಸಹಕಾರಿಯಾಗಿ ಶಕ್ತರಿಗೆ ಹೇಳಲ್ಪಟ್ಟ ಸರ್ವವೇದಾರ್ಥಜ್ಞಾನವು ವ್ಯರ್ಥ. ಅಶಕ್ತರಿಗಾಗಿ ಹೇಳಲ್ಪಟ್ಟ ಯಥಾಶಕ್ತಿ ವೇದಜ್ಞಾನವೂ ವ್ಯರ್ಥವಾಗುತ್ತದೆ ಎಂದು ಪೂರ್ವಪಕ್ಷ.

**ಸಿದ್ಧಾಂತ** :- ಉಪಸಂಹಾರ ಅನುಪಸಂಹಾರ ಎರಡೂ ಪ್ರಕಾರಗಳಿಂದಲೂ ಜ್ಞಾನ ಯುಕ್ತವಾಗುತ್ತದೆ. ಆದ್ದರಿಂದ ಹಿಂದೆ ಹೇಳಲ್ಪಟ್ಟ ಎರಡು ವಿಧ ಜ್ಞಾನವು (ಶಕ್ತರಿಗೆ ಸರ್ವವೇದಾರ್ಥಜ್ಞಾನ, ಅಶಕ್ತರಿಗೆ ಯಥಾಶಕ್ತಿ ಜ್ಞಾನ) ಯುಕ್ತ-ವಾಗುತ್ತದೆ. ಸರ್ವವೇದೋಕ್ತಗುಣ ಮತ್ತು ದೋಷಾಭಾವಗಳ ಉಪ-ಸಂಹಾರಪೂರ್ವಕ ಧ್ಯಾನವನ್ನು 'ಉಪಾಸ್ಯ ಏಕಃ' ಎಂಬ ಶ್ರುತಿಯು ಮತ್ತು 'ಸರ್ವೇ ಗುಣಾಃ ಸರ್ವದೈವ ಹ್ಯುಪಾಸ್ಯಾಃ' ಎಂಬ ಶ್ರುತಿಯು ಅದನ್ನು ವಿಧಿಸಿದೆ. ಆದ್ದರಿಂದ ಅದನ್ನು ಅನುಸರಿಸಬೇಕು. ಅನುಸರಿಸದಿದ್ದರೆ ವಿಹಿತ-ಕ್ರಿಯಾಲೋಪದಿಂದ ಅನರ್ಥವಾದೀತು.

ಮತ್ತು ಛಾಂದೋಗ್ಯ ಸಪ್ತಮಾಧ್ಯಾಯದಲ್ಲಿ ನಾರದರು 'ಋಗ್ವೇದಂ ಭಗವೋ ಅಧ್ಯೇಮಿ' ಇತ್ಯಾದಿಯಾಗಿ ತಾವು ಸರ್ವವಿದ್ಯಾಜ್ಞಾನಿಗಳೆಂದು ತಿಳಿಸಿ 'ಸೋಹಂ... ಮಂತ್ರವಿದೇವ', 'ಸೋಹಂ ನಾಮವಿದೇವ' ಎಂದು ಹೇಳಿದ್ದರಿಂದ ಸರ್ವವಿದ್ಯೆಗಳು ಭಗವಂತನ ನಾಮವೆಂದಾಯಿತು. ನಾಮ-ವಾದ್ದರಿಂದಲೇ ಗುಣಾಭಿಧಾಯಕವೂ ಎಂದು ಸಿದ್ಧವಾಗುತ್ತದೆ. ಗುಣಗಳನ್ನು ಹೇಳಿರುವುದು ಕೂಡ ಧ್ಯಾನಕ್ಕೋಸ್ಕರವಾಗಿಯೇ ಎಂದು 'ಆಧ್ಯಾನಾಯ' ಎಂಬ ಸೂತ್ರದಿಂದ ಸಿದ್ಧವಾಗುತ್ತದೆ. ಮತ್ತು 'ನಾಮ ವಾ ಏತಾಃ' ಎಂಬ

ಶ್ರುತಿಯು (ಸರ್ವವಿದ್ಯೆಗಳೂ ಭಗವಂತನ ನಾಮವಾದ್ದರಿಂದ ಅವನನ್ನು ಸರ್ವಗುಣಪೂರ್ಣನೆಂದು ಉಪಾಸನೆ ಮಾಡಬೇಕು) ಎಂಬ ಶ್ರುತಿಯು ಸರ್ವಗುಣೋಪಸಂಹಾರವನ್ನೇ ಹೇಳಿದೆ. 'ಆತ್ಮೇತ್ಯೇವ' ಎಂಬಲ್ಲಿಯ ಏವಕಾರವು ಆತ್ಮತ್ವವನ್ನು ಬಿಡಕೂಡದು ಎಂಬ ಅಭಿಪ್ರಾಯವುಳ್ಳದ್ದಾದ್ದರಿಂದ ಅದರ ವಿರೋಧವೂ ಇಲ್ಲ.

ಸರ್ವಗುಣೋಪಸಂಹಾರ ಆವಶ್ಯಕವಾದರೆ ಪ್ರಕರಣಭೇದದ ಉದ್ದೇಶ್ಯವೇನು? ಎಂಬ ಪ್ರಶ್ನೆಗೆ ಉತ್ತರವನ್ನು 'ಪುರುಷವಿದ್ಯಾಯಾಂ' ಎಂಬ ಸೂತ್ರದಲ್ಲಿ ಮುಂದೆ ಹೇಳಲಾಗುವುದು. (ಯಾವ ಪ್ರಕರಣದಲ್ಲಿಯೂ ಭಗವಂತನ ಸರ್ವಗುಣಗಳು ಹೇಳಲ್ಪಟ್ಟಿಲ್ಲ. ಆದ್ದರಿಂದ ಶಕ್ತಿ ಇದ್ದವರೂ ಕೂಡ ಉಪಸಂಹಾರ ಮಾಡಿಯೇ ಧ್ಯಾನ ಮಾಡಬೇಕು).

ಉಪಸಂಹಾರ ಮಾಡದೇ (ಅನುಪಸಂಹಾರದಿಂದ) ಧ್ಯಾನಮಾಡಬೇಕು ಎಂಬ ಪಕ್ಷವೂ ಯುಕ್ತವೇ. ಏಕೆಂದರೆ ಉಪಸಂಹಾರಪ್ರಕಾರದಿಂದ ಧ್ಯಾನವು ಎಲ್ಲರಿಗೂ ಅಶಕ್ಯವಾದ್ದರಿಂದ ಪ್ರಕರಣಭೇದ ಮಾಡಿ ಒಂದೊಂದು ಪ್ರಕರಣದಲ್ಲಿ ಕೆಲಕೆಲವು ಗುಣಗಳನ್ನು ಮಾತ್ರ ಹೇಳಿದ್ದಾರೆ. ಎಲ್ಲವನ್ನೂ ಹೇಳಿಲ್ಲ. ಆದ್ದರಿಂದ ಎರಡೂ ಪ್ರಕಾರಗಳಿಂದ ಧ್ಯಾನವು ಪ್ರಾಮಾಣಿಕವಾದ್ದರಿಂದ ಎರಡು ವಿಧವಾದ ಜ್ಞಾನವೂ ಸಾರ್ಥಕವೇ.

ಹಿಂದಿನ ಅಧಿಕರಣದ ಆಕ್ಷೇಪ ಮತ್ತು ಸಮಾಧಾನಗಳೇ ಫಲ.

## ॥ ಓಂ ಪ್ರಾಪ್ತೇಶ್ಚ ಸಮಂಜಸಮ್ ಓಂ ॥ ೩-೩-೩

ಪೂರ್ವಾಧಿಕರಣದಲ್ಲಿ ಹೇಳಲ್ಪಟ್ಟ ಉಪಸಂಹಾರ ಅನುಪಸಂಹಾರ ಎರಡು ಪ್ರಕಾರಗಳಿಂದ ಧ್ಯಾನವು ಯುಕ್ತವೆಂದು ಈ ಅಧಿಕರಣದಲ್ಲಿ ಸಮರ್ಥಿಸಲಾಗುವುದು. ಜಿಜ್ಞಾಸಾಶಬ್ದೋಕ್ತವಾದ ದ್ವಿರೂಪಧ್ಯಾನವು ಅಯುಕ್ತವೋ ಯುಕ್ತವೋ, ಅಧಿಕಾರಿಭೇದೇನ ವ್ಯವಸ್ಥೆಯು ಅಸಂಭಾವಿತವೋ ಸಂಭಾವಿತವೋ, ವ್ಯವಸ್ಥಾಪಕ ಪ್ರಮಾಣವು ಇಲ್ಲವೋ, ಇದೆಯೋ ಎಂಬುದು ಈ ಅಧಿಕರಣದಲ್ಲಿ ನಿರ್ಣೀತವಾಗಿದೆ.

**ಪೂರ್ವಪಕ್ಷ** :- ಒಬ್ಬ ಅಧಿಕಾರಿ ದ್ವಿರೂಪಧ್ಯಾನಮಾಡುವುದು ವಿರುದ್ಧ-ವಾಗಿದೆ. ಅಧಿಕಾರಿಭೇದೇನ ವ್ಯವಸ್ಥಾ ಮಾಡಬೇಕಾದರೆ ಯಾವ ಯಾವ ಅಧಿಕಾರಿಗೆ ಯಾವ ಪ್ರಕಾರದಿಂದ ಉಪಾಸನೆ ಎಂದು ತಿಳಿಸುವ ಪ್ರಮಾಣವಿಲ್ಲ. ಆದ್ದರಿಂದ ದ್ವಿರೂಪಧ್ಯಾನವು ಸರಿಯಲ್ಲ.

**ಸಿದ್ಧಾಂತ** :- 'ಯಸ್ಯ ಯಾವದ್ಗುಣಾಃ' (ಒಂದೇ ಕಾಲದಲ್ಲಿ ತನ್ನ ಎರಡೂ ಭುಜಗಳು ಕಾಣುವಂತೆ ಧ್ಯಾನ ಕಾಲದಲ್ಲಿ ಎಷ್ಟು ಗುಣಗಳು ಸ್ಪಷ್ಟವಾಗಿ ತೋರುತ್ತವೋ ಅಷ್ಟನ್ನು ಧ್ಯಾನ ಮಾಡಬೇಕು). ಎಂಬ ಶ್ರುತಿಯಲ್ಲಿ ಹೇಳಿದಂತೆ 'ಗುಣೈಸ್ಸರ್ವೈರುಪಾಸ್ಯೋಽಸೌ ಬ್ರಹ್ಮಣಾ' ಎಂಬ ಸ್ಮೃತಿಯ ಲ್ಲಿಯೂ ಹೇಳಿದಂತೆ ಚತುರ್ಮುಖನಿಗೆ ಎಲ್ಲ ಗುಣಗಳೂ ಏಕಕಾಲದಲ್ಲಿ ಸ್ಪಷ್ಟವಾಗಿ ತೋರುವುದರಿಂದ ಅವರು ಎಲ್ಲ ಗುಣಗಳನ್ನೂ ಉಪಾಸನೆ ಮಾಡಬೇಕು. ಉಳಿದವರು ತಮ್ಮ ತಮ್ಮ ಯೋಗ್ಯತಾನುಸಾರ ತೋರಿದ ಗುಣಗಳನ್ನು ಉಪಾಸನೆ ಮಾಡಬೇಕು ಎಂದು ವ್ಯವಸ್ಥಾಪಕ ಪ್ರಮಾಣ-ವಿರುವುದರಿಂದ ದ್ವಿರೂಪಧ್ಯಾನವು ಯುಕ್ತವಾಗಿದೆ.

## ।। ಓಂ ಸರ್ವಾಭೇದಾದನ್ಯತ್ರೇಮೇ ಓಂ ।। ೩-೩-೪

ಪೂರ್ವಾಧಿಕರಣದಲ್ಲಿ ಸರ್ವಗುಣೋಪಸಂಹಾರ ಮತ್ತು ಅನುಪ-ಸಂಹಾರಗಳ ವಿರೋಧವನ್ನು ಪರಿಹರಿಸಲಾಯಿತು. ಇಲ್ಲಿ ಸರ್ವಗುಣೋಪ-ಸಂಹಾರ ವ್ಯರ್ಥ ಎಂಬ ಶಂಕೆಯನ್ನು ಪರಿಹರಿಸಲಾಗುವುದು.

ಜಿಜ್ಞಾಸಾಪದೋಕ್ತವಾದ ಸರ್ವಗುಣಧ್ಯಾನವು ಬೇಕಾಗಿಲ್ಲವೋ ಅಥವಾ ಬೇಕೋ, ಸರ್ವಗುಣಧ್ಯಾನಕ್ಕೆ ಅತಿಶಯ ಫಲವಿದೆ ಎಂಬ ನಿರ್ಣಯವು ಅಶಕ್ಯವೋ, ಶಕ್ಯವೋ, ಅದಕ್ಕೆ ನಿರ್ಣಾಯಕವಾದ ಪ್ರಮಾಣ ಇಲ್ಲವೋ, ಇದೆಯೋ ಎಂಬುದು ಇಲ್ಲಿಯೂ ಚಿಂತಾ ಪರಂಪರೆ.

**ಪೂರ್ವಪಕ್ಷ** :- ಅಸರ್ವಗುಣಧ್ಯಾನದ ಫಲ ಮೋಕ್ಷ. ಸರ್ವಗುಣ-ಧ್ಯಾನಕ್ಕೂ ಅದೇ ಮೋಕ್ಷವೇ ಫಲ ಹೊರತು ಅದಕ್ಕಿಂತ ಅಧಿಕಫಲವಿದೆ ಎಂದು ನಿರ್ಣಾಯಕ ಪ್ರಮಾಣವಿಲ್ಲವಾದ್ದರಿಂದ ಸರ್ವಗುಣಧ್ಯಾನವು ವ್ಯರ್ಥ.

**ಸಿದ್ಧಾಂತ** :- ಯಾವ ಸಾಧನವು ಯಾವ ಸಾಧನಕ್ಕಿಂತ ಅಧಿಕವೋ ಅದು ಅದರ ಫಲಕ್ಕಿಂತ ಅಧಿಕಫಲವುಳ್ಳದ್ದು. ಅಗ್ನಿಷ್ಟೋಮಕ್ಕಿಂತ ವಾಜಪೇಯ ಅಧಿಕ. ಅದ್ದರಿಂದ ಅಗ್ನಿಷ್ಟೋಮದ ಫಲಕ್ಕಿಂತ ಅಧಿಕಫಲವುಳ್ಳದ್ದೂ ಆಗಿದೆ. ಆದರಂತೆ ಅಸರ್ವಗುಣಧ್ಯಾನಕ್ಕಿಂತ ಸರ್ವಗುಣಧ್ಯಾನವು ಅಧಿಕ-ವಾದ್ದರಿಂದ ಅಧಿಕಮೋಕ್ಷರೂಪ ಫಲವುಳ್ಳದ್ದೇ ಆಗಿದೆ ಎಂದು ಅನುಮಾನವು ನಿರ್ಣಾಯಕವಾಗಿದೆ.

'ಸಂಪೂರ್ಣೋಪಾಸನಾತ್ ಬ್ರಹ್ಮಾ ಸಂಪೂರ್ಣಾನಂದ ಭಾಗ್ ಭವೇತ್' ಎಂಬ ಸ್ಮೃತಿಯೂ ಇರುವುದರಿಂದ ಫಲಾತಿಶಯವನ್ನು ನಿರ್ಣಯ ಮಾಡಬಹುದು. ಆದ್ದರಿಂದ ಸರ್ವಗುಣಧ್ಯಾನವು ಯುಕ್ತವಾಗಿದೆ.

## ।। ಓಂ ಆನಂದಾದಯಃ ಪ್ರಧಾನಸ್ಯ ಓಂ ।। ೩-೩-೫

ಹಿಂದಿನ ಅಧಿಕರಣಗಳಲ್ಲಿ ಅಧಿಕಾರಿ ಹಾಗೂ ಫಲಭೇದ ಪ್ರಯುಕ್ತವಾದ ದ್ವಿರೂಪವಾದ ಉಪಾಸನೆಯನ್ನು ಹೇಳಲಾಯಿತು. ಆದರೆ ಸರ್ವ-ಮುಮುಕ್ಷುಗಳಿಗೂ ಸಾಧಾರಣವಾದ ಉಪಾಸನೆಯನ್ನು ನಿರ್ಣಯ ಮಾಡಿದ ಮೇಲಷ್ಟೇ ವಿಶೇಷ ಉಪಾಸನೆಯ ವಿಚಾರಕ್ಕೆ ಅವಸರ (ಅವಕಾಶ). ಆದರೆ ಅದೇ ನಿರ್ಣೀತವಾಗುವುದಿಲ್ಲ ಎಂದು ಇಲ್ಲಿ ಶಂಕಿಸಲಾದ್ದರಿಂದ ಇದಕ್ಕೆ ಸಂಗತಿ ಇದೆ.

ಜಿಜ್ಞಾಸಾಪದೋಕ್ತವಾದ ಧ್ಯಾನವು ಅಯುಕ್ತವೋ ಯುಕ್ತವೋ, ಸರ್ವಮುಮುಕ್ಷುಗಳಿಗೂ ಧ್ಯೇಯವಾದ ಸಾಧಾರಣ ಗುಣ ನಿರ್ಣಯವು ಅಶಕ್ಯವೋ, ಶಕ್ಯವೋ, ಸರ್ವರಿಗೂ ಸಾಧಾರಣವಾದ ಗುಣಗಳು 'ಇಷ್ಟು' ಎಂದು ಸಂಖ್ಯೆಯಿಂದ ಮತ್ತು 'ಇವುಗಳು' ಎಂದು ನಿರ್ದೇಶದಿಂದ ನಿಗದಿತವಾಗಿಲ್ಲವೋ, ಆಗಿವೆಯೋ? ಆಗಿದ್ದ ಪಕ್ಷದಲ್ಲಿ ಎಷ್ಟು? ಆನಂದಾದಿ ಐದಾರು ಗುಣಗಳು ಎನ್ನುವುದಾರೆ, ಬೇರೆ ಗುಣಗಳನ್ನೂ ಸೇರಿಸಬಹುದಾದ್ದರಿಂದ, 'ಇವೇ ಗುಣಗಳು ಧ್ಯೇಯ' ಎಂಬ ನಿಯಮ ಕೂಡುವುದಿಲ್ಲ. ಮತ್ತು ಆನಂದಾದಿಗಳು ಎಂಬ ನಿರ್ದೇಶವೂ ಇಲ್ಲ. ಹೀಗಾಗಿ ನಿರ್ಣಯ ಅಶಕ್ಯವಾದ್ದರಿಂದ ಧ್ಯಾನವೇ ಸರಿಯಲ್ಲ.

**ಸಿದ್ಧಾಂತ** :- ಎಲ್ಲರಿಗೂ ಬಹುಗುಣ ಉಪಾಸನೆಗಂತೂ ಶಕ್ತಿ ಇಲ್ಲ. ಆದರೆ ಮೋಕ್ಷವು ಅಪೇಕ್ಷಿತವಾಗಿದೆ. ಮೋಕ್ಷವೆಂದರೆ ನಿರ್ದೋಷಾನಂದಾನುಭವ. ಇದು ಸಿಗಬೇಕಾದರೆ 'ತಂ ಯಥಾ ಯಥಾ' (ಭಗವಂತನನ್ನು ಯಾವ ಗುಣ-ಗಳಿಂದ ಉಪಾಸನೆ ಮಾಡುತ್ತಾನೋ ಅಂಥ ಗುಣಗಳನ್ನು ಪಡೆಯುತ್ತಾನೆ) ಎಂಬ ಶ್ರುತಿಯ ಪ್ರಕಾರ ಭಗವಂತನನು ನಿರ್ದೋಷ ಆನಂದರೂಪ ಜ್ಞಾನರೂಪ ಎಂದು ಉಪಾಸನೆಯು ಎಲ್ಲರಿಗೂ ಆವಶ್ಯಕವೆಂದು ಸಿದ್ಧವಾಯಿತು. ಇನ್ನು ಆತ್ಮತ್ವೋಪಾಸನೆಯು ಸರ್ವರಿಗೂ ಸಾಧಾರಣ. ಏಕೆಂದರೆ ಆತ್ಮತ್ವವೆಂದರೆ ಸ್ವಾಮಿತ್ವ. ಅದನ್ನು ಉಪಾಸನೆ ಮಾಡಿದರೆ ಭಗವಂತ ಸ್ವಾಮಿ, ನಾವು ಭೃತ್ಯರು ಎಂದು ಸಂಬಂಧ ಸ್ಮರಣೆ ಮಾಡಿದಂತಾಗುತ್ತದೆ. ಇದು ಭಗವಂತನಿಗೆ ಪ್ರೀತಿಕರ. 'ಆತ್ಮೇತಿ ತೂಪಗಚ್ಛಂತಿ' ಎಂಬಲ್ಲಿ ಹೇಳುವಂತೆ ಇದು ಅತ್ಯಾವಶ್ಯಕ. ಮತ್ತು 'ಸಚ್ಚಿದಾನಂದ ಆತ್ಮೇತಿ' ಎಂಬ ಸ್ಮೃತಿಯಂತೆ ಸತ್ ಚಿತ್ ಆನಂದ ಆತ್ಮಾ ಎಂಬುದಾಗಿ ಧ್ಯೇಯ ಗುಣಗಳನ್ನು ಸಂಖ್ಯಾ ಮತ್ತು ನಿರ್ದೇಶಕಗಳಿಂದ ನಿಗದಿ ಮಾಡಬಹುದಾದ್ದರಿಂದ ಭಗವದ್-ಧ್ಯಾನವು ಯುಕ್ತವೇ ಆಗಿದೆ.

## ॥ ಓಂ ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ ಓಂ ॥ ೩-೩-೬

ನಾಲ್ಕೇ ಗುಣಗಳ ಉಪಾಸನೆಯು ಸರ್ವಸಾಧಾರಣ ಎಂದು ಹಿಂದೆ ಹೇಳಿದ ನಿಯಮವನ್ನು ಇಲ್ಲಿ ಆಕ್ಷೇಪಿಸುವುದರಿಂದ ಸಂಗತಿ. ನಾಲ್ಕೇ ಗುಣ ಗಳು ಉಪಾಸ್ಯ ಎಂಬ ನಿಯಮವು ಅಯುಕ್ತವೋ, ಯುಕ್ತವೋ? 'ತಸ್ಯ ಪ್ರಿಯಮೇವ ಶಿರಃ' ಎಂಬಲ್ಲಿ ಹೇಳಲ್ಪಟ್ಟ ಪ್ರಿಯಶಿರಸ್ತ್ವಾದಿಗಳು ಸರ್ವೋ-ಪಾಸ್ಯವೋ, ಅಲ್ಲವೋ? ಅವುಗಳು ಸರ್ವೋಪಾಸ್ಯವಲ್ಲವೆಂದರೆ ಹಿಂದೆ ಹೇಳಿದ ಆನಂದರೂಪವಾದ ಮೋಕ್ಷಪ್ರಾಪ್ತಿ ಇಲ್ಲವೋ, ಇದೆಯೋ? ಎಂಬ ಸಂದೇಹಗಳು ಇಲ್ಲಿ ನಿರ್ಣಯಿಸಲ್ಪಟ್ಟಿವೆ.

**ಪೂರ್ವಪಕ್ಷ** :- ಪ್ರಿಯಶಿರಸ್ತ್ವಾದಿಗಳು ಆನಂದ ವಿಶೇಷರೂಪವಾದ್ದರಿಂದ ಎಲ್ಲರೂ ಉಪಾಸನೆ ಮಾಡಬೇಕು. ಆನಂದ ಗುಣವಂತೂ ಮೋಕ್ಷಪ್ರಾಪ್ತಿಗಾಗಿ ಎಲ್ಲರಿಂದಲೂ ಉಪಾಸ್ಯವೆಂದು ಹಿಂದೆಯೇ ಹೇಳಲಾಗಿದೆ. ಅದರ ವಿಶೇಷ

ರೂಪವಾದ ಪ್ರಿಯಶಿರಸ್ತ್ವವೂ ಸರ್ವೋಪಾಸ್ಯವೇ ಆಗಬೇಕು. ಇಲ್ಲದಿದ್ದರೆ ಫಲವು ದೊರಕಲಾರದು. ಆದ್ದರಿಂದ ನಾಲ್ಕೇ ಎಂಬ ನಿಯಮ ಸರಿಯಲ್ಲ.

**ಸಿದ್ಧಾಂತ :-** ಪ್ರಿಯಶಿರಸ್ತ್ವವು ಆನಂದ ವಿಶೇಷರೂಪ ಎಂಬ ಕಾರಣದಿಂದ ಸರ್ವೋಪಾಸ್ಯವಾಗುವುದಾರೆ, ಎಲ್ಲ ಗುಣಗಳೂ ಕೂಡ ಆನಂದಾದಿ ನಾಲ್ಕರ ವಿಶೇಷ ಎಂದು ಹೇಳಲು ಬರುವುದರಿಂದ ಸರ್ವಗುಣಗಳು ಎಲ್ಲ ರಿಂದ ಉಪಾಸ್ಯ ಎಂದಾಗ ಬೇಕಾಗುತ್ತದೆ. ಆಗ 'ದರ್ಶನಾಚ್ಚ' ಎಂಬಲ್ಲಿ ಹೇಳಿದಂತೆ ಆನಂದ ಶ್ರುತಿಸಿದ್ಧವಾದ ತಾರತಮ್ಯ ಲೋಪವಾಗಬೇಕಾಗುತ್ತದೆ. ಅದಕ್ಕಾಗಿ ಗುಣೋಪಾಸನಾ ತಾರತಮ್ಯವನ್ನು ಹೇಳಲೇಬೇಕು. ಮತ್ತು 'ನೈವ ಸರ್ವಗುಣಾಃ' ಎಂಬ ಸ್ಮೃತಿ ಇರುವುದರಿಂದಲೂ ಪ್ರಿಯಶಿರಸ್ತ್ವಾದಿಗಳು ಸರ್ವೋಪಾಸ್ಯವಲ್ಲ. ಇದರಿಂದ ಆನಂದಪ್ರಾಪ್ತಿ ಇಲ್ಲದಂತಾದೀತು ಎಂಬ ಆಪತ್ತಿಯೂ ಇಲ್ಲ. 'ಯಥಾಯೋಗ್ಯಾನ್' ಎಂಬ ಶ್ರುತಿಯ ಪ್ರಕಾರ ವಿಶೇಷದ ಉಪಾಸನೆ ಇಲ್ಲದಿದ್ದರೂ ಯೋಗ್ಯವಾದ ಸಾಮಾನ್ಯೋಪಾಸನೆಯಿಂದಲೇ ಫಲವು ದೊರೆಯುತ್ತದೆ. ಆದ್ದರಿಂದ ನಿಯಮ ಭಂಗವೇನೂ ಇಲ್ಲ.

## ॥ ಓಂ ಇತರೇ ತ್ವರ್ಥಸಾಮಾನ್ಯಾತ್ ಓಂ ॥ ೩-೩-೭

ಪೂರ್ವಾಧಿಕರಣದಲ್ಲಿ 'ಯಥಾಯೋಗ್ಯಾನ್' ಎಂಬ ಶ್ರುತಿಯ ಪ್ರಕಾರ ಯೋಗ್ಯ ಗುಣೋಪಾಸನೆಯಿಂದ ಮುಕ್ತಿ ಎಂದು ಹೇಳಲಾಯಿತು. ಇಲ್ಲಿ ದೇವತೆಗಳಿಗೆ ಚತುರ್ಗುಣಗಳಿಗಿಂತ ಅಧಿಕಗುಣೋಪಾಸನೆಯ ಯೋಗ್ಯತೆ ನಿಶ್ಚಯವಾಗುವುದೇ ಅಸಂಭಾವಿತವಾದ್ದರಿಂದ ಅವರಿಗೆ ಅಧಿಕಗುಣೋ-ಪಾಸನೆ ಅಯುಕ್ತವೆಂದು ಶಂಕಾಮಾಡುವುದರಿಂದ ಸಂಗತಿ ಬರುತ್ತದೆ.

ದೇವತೆಗಳು ಅಧಿಕಗುಣೋಪಾಸನೆ ಮಾಡಬಾರದೋ, ಮಾಡಬೇಕೋ? ಅದಕ್ಕೆ ಅಧಿಕಾರಿಗಳಾದ ದೇವತೆಗಳ ಯೋಗ್ಯತಾ ನಿಶ್ಚಯ ಅಶಕ್ಯವೋ, ಶಕ್ಯವೋ? 'ಪ್ರಾಪ್ತೇಶ್ಚ' ಎಂಬ ಸೂತ್ರದಲ್ಲಿ ಹೇಳಿದಂತೆ ಧ್ಯಾನಕಾಲೀನ ಗುಣಸ್ಫುರಣೆಯು ಯೋಗ್ಯತಾ ನಿರ್ಣಾಯಕವಾಗುವುದಿಲ್ಲವೋ, ಆಗುತ್ತದೋ? ಎಂಬುದು ಈ ಅಧಿಕರಣದ ವಿಚಾರ.

**ಪೂರ್ವಪಕ್ಷ :-** ಧ್ಯಾನಕ್ಕಿಂತ ಪೂರ್ವದಲ್ಲಿ ಯೋಗ್ಯತಾ ನಿಯಮದ ಜ್ಞಾನ ಬೇಕು. ಇಲ್ಲದಿದ್ದರೆ ಶ್ರವಣಕಾಲದಲ್ಲಿ ಧ್ಯಾನಕ್ಕೆ ಯೋಗ್ಯ ಮತ್ತು ಅಯೋಗ್ಯ ಎರಡೂ ವಿಧವಾದ ಗುಣಗಳ ಶ್ರವಣವಾಗಿರುತ್ತದೆ. ಧ್ಯಾನಕಾಲದಲ್ಲಿ ಅವುಗಳು ಸ್ಮರಣೆಗೆ ಬರುತ್ತವೆ. ಆಗ ಭಕ್ತಿಯಿಂದ ಎರಡನ್ನೂ ಧ್ಯಾನ ಮಾಡುವ ಪ್ರಯತ್ನ ಸಂಭಾವಿತ. ಆದರೆ ಅಯೋಗ್ಯ ಧ್ಯಾನ ಮಾಡಿದರೆ 'ಅಚೇತನಾಸತ್ಯ' ಎಂಬ ಸಂಕರ್ಷಣಸೂತ್ರದ ಪ್ರಕಾರ ಅನರ್ಥವಾಗುತ್ತದೆ. ಆದ್ದರಿಂದ ಮೊದಲೇ ಯೋಗ್ಯತಾನಿರ್ಣಯ ಮಾಡಿಕೊಳ್ಳಬೇಕು. ಧ್ಯಾನ-ಕಾಲೀನ ಗುಣಭಾನವು ನಿರ್ಣಾಯಕವಲ್ಲ. ಪೂರ್ವದಲ್ಲಿ ಯೊಗ್ಯತಾನಿಶ್ಚಯ ಶಕ್ಯವಲ್ಲ ಹಾಗಾಗಿ ಅಧಿಕಗುಣೋಪಾಸನೆ ಸರಿಯಲ್ಲ.

**ಸಿದ್ಧಾಂತ :-** ಅವರವರು ಅಪೇಕ್ಷಿಸಿದ ಫಲಕ್ಕೆ ಅನುಗುಣವಾಗಿ ಯೋಗ್ಯತಾ ನಿರ್ಣಯವನ್ನು ಮೊದಲು ಮಾಡಿಕೊಳ್ಳಬೇಕು. ಅಪೇಕ್ಷಿತಫಲವಾದರೂ ಯೋಗ್ಯವೆಂಬ ನಿರ್ಣಯ ಹೇಗೆಂದರೆ - ಚತುರ್ಮುಖಬ್ರಹ್ಮದೇವರು ಅಥವಾ ಬೇರೆಯವರಾದರೂ ಸರ್ವಗುರುಗಳು ಅದನ್ನು ತಿಳಿದು ಆ ಫಲವನ್ನು ಅದಕ್ಕೆ ಯೋಗ್ಯವಾದ ಗುಣಗಳನ್ನೂ ಉಪದೇಶಿಸುತ್ತಾರೆ. ಅದರಿಂದ ಅಧಿಕಗುಣೋಪಾಸನೆ ಮಾಡಬಹುದು.

## ॥ ಓಂ ಆಧ್ಯಾನಾಯ ಪ್ರಯೋಜನಾಭಾವಾತ್ ಓಂ ॥
## ೩-೩-೮

ಇದುವರೆಗೆ ಉತ್ತಮಾಧಿಕಾರಿಗಳಿಗೆ ಸರ್ವಗುಣೋಪಸಂಹಾರ, ಮಂದ ಮತ್ತು ಅಧಮರಿಗೆ ಅನುಪಸಂಹಾರ (ಅಲ್ಪಗುಣೋಪಾಸನೆಯನ್ನು)ವನ್ನು ಹೇಳಿ ಎಲ್ಲಾ ವಿದ್ಯೆಗಳೂ ಭಗವಂತನ ಗುಣವಾಚಕ ನಾಮವಾದ್ದರಿಂದ ಎಂದು ಮತ್ತು ಪ್ರಕರಣಭೇದವಿರುವುದರಿಂದ ಪ್ರಮಾಣವನ್ನು ಹೇಳ-ಲಾಯಿತು. ಇಲ್ಲಿ ಅದನ್ನು ಆಕ್ಷೇಪಿಸಿ ಪರಿಹರಿಸಲಾಗಿದೆಯಾದ್ದರಿಂದ ಸಂಗತಿ. ಗುಣೋಪಸಂಹಾರ ಅನುಪಸಂಹಾರಗಳನ್ನು ಮಾಡಬಾರದೋ, ಮಾಡಬೇಕೋ? ಅವುಗಳಿಗೆ ಪ್ರಮಾಣವಿಲ್ಲವೋ, ಇದೆಯೋ? 'ಪ್ರಕರಣ-ಭೇದಾತ್' ಎಂಬಲ್ಲಿ ಹೇಳಲ್ಪಟ್ಟ ಪ್ರಮಾಣವು ಅಯುಕ್ತವೋ, ಯುಕ್ತವೋ? ಎಂಬುದು ಇಲ್ಲಿಯ ವಿಚಾರ.

**ಪೂರ್ವಪಕ್ಷ** :- 'ಸಂಜ್ಞಾತ' ಎಂಬ ಸೂತ್ರದಲ್ಲಿ ಹೇಳಿದಂತೆ ಎಲ್ಲಾ ವಿದ್ಯೆಗಳೂ ಭಗವಂತನ ನಾಮವಾದ್ದರಿಂದ ತನ್ಮೂಲಕ ಗುಣಗಳನ್ನು ಹೇಳಿದ್ದು ಉಪಾಸನೆಗೋಸ್ಕರವೇ ಎಂದಾದರೆ ಒಂದೇ ಕಡೆ ಹೇಳಬೇಕಾಗಿತ್ತು. ಅದು ಬಿಟ್ಟು ಬೇರೆ ಬೇರೆ ಕಡೆ ಹೇಳಿದ್ದು ವ್ಯರ್ಥವಾಗುತ್ತದೆ. ಹಾಗೆಯೇ ಮೋಕ್ಷವು ಅನುಪಸಂಹಾರದಿಂದ ದೊರೆಯುವುದರಿಂದ ಉಪಸಂಹಾರವು ವ್ಯರ್ಥ. ವ್ಯರ್ಥವಾದ ವಿಧಾನವು ಅಶ್ರದ್ಧೇಯವಾದ್ದರಿಂದ 'ವಿಧಿಶೇಷವತ್' ಎಂಬುದಾಗಿ ಹೇಳಲ್ಪಟ್ಟ ವಿಹಿತತ್ವರೂಪಯುಕ್ತಿಯೂ ಕೂಡ ಅಪ್ರಯೋಜಕ-ವಾಗುತ್ತದೆ. ಆದ್ದರಿಂದ ಉಪಸಂಹಾರ ಪ್ರಕಾರದ ಧ್ಯಾನ ಅಯುಕ್ತ. ಮತ್ತು ಆಯಾ ಪ್ರಕರಣಗಳಲ್ಲಿ ಕೆಲವು ಗುಣಗಳನ್ನು ಮಾತ್ರ ಹೇಳಿದ್ದರೂ ಇಷ್ಟನ್ನೇ ಉಪಾಸನೆ ಮಾಡಬೇಕು ಎಂದು ಹೇಳಿಲ್ಲವಾದ್ದರಿಂದ ಪ್ರಕರಣ-ಭೇದವು ಅನುಪಸಂಹಾರಕ್ಕೆ ಪ್ರಮಾಣವಾಗಲಾರದು. ಆದ್ದರಿಂದ ಎರಡು ಪ್ರಕಾರದ ಧ್ಯಾನವು ಅಯುಕ್ತ.

**ಸಿದ್ಧಾಂತ** :- ಗುಣಗಳನ್ನು ಹೇಳಿರುವುದಕ್ಕೆ ಉಪಸಂಹಾರ ಬಿಟ್ಟು ಬೇರೆ ಬೇರೆ ಪ್ರಯೋಜನವಿಲ್ಲವಾದ್ದರಿಂದ ನಾನಾಸ್ಥಾನಗಳಲ್ಲಿ ಹೇಳಲ್ಪಟ್ಟಿದ್ದರೂ ಆ ಗುಣಗಳನ್ನು ಉಪಸಂಹಾರ ಮಾಡಿದರೆ ಮುಕ್ತಿಯಲ್ಲಿ ಅತಿಶಯ ಫಲ-ವಿರುವುದರಿಂದ ನಾನಾ ಸ್ಥಾನದಲ್ಲಿ ಹೇಳಿದ್ದು ವ್ಯರ್ಥವಲ್ಲ. ಆದ್ದರಿಂದ ಉಪಸಂಹಾರ ಮಾಡಬೇಕು.

ಅನುಪಸಂಹಾವರೂ ಯುಕ್ತವಾಗಿದೆ ಏಕೆಂದರೆ 'ಆತ್ಮೇತ್ಯೇವ ಉಪಾಸೀತ' ಎಂಬಲ್ಲಿ ಗುಣಾಂತರಗಳನ್ನು ವ್ಯಾವೃತ್ತಿಗೊಳಿಸಿ ಆತ್ಮತ್ವದ ಉಪಸನೆಯನ್ನು ಹೇಳಿದ್ದಾರೆ. ಯದ್ಯಪಿ ಏವಕಾರಕ್ಕೆ ಆತ್ಮತ್ವವನ್ನು ಬಿಡಕೂಡದು ಎಂಬ ಅರ್ಥವನ್ನು ಹಿಂದ ಹೇಳಲಾಗಿದೆ. ಆದರೂ 'ಪ್ರಾಪ್ತೇಶ್ಚ' ಎಂಬಲ್ಲಿ ಹೇಳಿದ ನ್ಯಾಯದಿಂದ ಆತ್ಮಶಬ್ದದಿಂದ ಪ್ರಾಪ್ತವಾದ ಸ್ವಯೋಗ್ಯಗುಣಗಳನ್ನು ಉಪಾಸನಾಮಾಡಬೇಕೇ ಹೊರತು ಆತ್ಮಶಬ್ದದಿಂದ ಅಪ್ರಾಪ್ತವಾದ ಗುಣಗಳನ್ನು ಉಪಾಸನೆ ಮಾಡಬಾರದರು ಎಂದು ಅಧಿಕಾರಿಭೇದದಿಂದ ವ್ಯವಸ್ಥೆ ಮಾಡಿ ಅರ್ಥ ಹೇಳಿದ್ದರಿಂದ ವಿರೋಧವೇನೂ ಇಲ್ಲ.

## ॥ ಓಂ ಆತ್ಮಗೃಹೀತಿರಿತವತ್ತದುತ್ತರಾತ್ ಓಂ ॥ ೩-೩-೯

ಪೂರ್ವಾಧಿಕಾರಣದಲ್ಲಿ ಹೇಳಲ್ಪಟ್ಟ 'ಆತ್ಮೇತ್ಯೇವ ಉಪಾಸೀತ' ಎಂಬಲ್ಲಿರುವ ಏವಕಾರವು ಸ್ವಾಮಿತ್ವವನ್ನು ಬಿಟ್ಟು ಬೇರೆ ಗುಣಗಳನ್ನು ನಿರಾಸಮಾಡಿದ್ದರಿಂದ ಆನಂದಾದಿ ಚತುರ್ಗುಣಉಪಾಸನೆಯ ನಿಯಮವಿಲ್ಲವೆಂದಾಗುವುದರಿಂದ ಈ ಅಧಿಕರಣದಲ್ಲಿ ಏವಕಾರದಿಂದ ಇತರ ಗುಣವ್ಯವಚ್ಛೇದ ಇಲ್ಲವೆಂದು ಹೇಳಲ್ಪಡುತ್ತದೆ ಎಂಬುದೇ ಸಂಗತಿ. 'ಆನಂದಾದಯಃ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಚತುರ್ಗುಣೋಪಾಸನೆಯು ಅಯುಕ್ತವೋ ಯುಕ್ತವೋ, ಅದು 'ಆತ್ಮೆತ್ಯೇವ' ಎಂಬ ಶ್ರುತಿವಿರುದ್ಧವೋ, ಅಲ್ಲವೋ? ಆತ್ಮಶಬ್ದವು ಸುಶಕತ್ವಾದಿಯುಕ್ತಿಯಿಂದ ಸ್ವಾಮಿತ್ವಮಾತ್ರವಾಚಕವೋ ಅಥವಾ ವಾಕ್ಯಶೇಷಬಲಾತ್ ಜ್ಞಾನಾದಿಚತುರ್ಗುಣವಾಚಕವೋ (ಸುಶಕತ್ವಯುಕ್ತಿ ಎಂದರೆ ಚತುರ್ಗುಣೊಪಾಸನೆಗಿಂತ ಸ್ವಾಮಿತ್ವಮಾತ್ರ ಉಪಾಸನೆಯು ಸುಲಭ ಎಂಬ ಯುಕ್ತಿ). ಎಂಬ ಸಂದೇಹವು ಇಲ್ಲಿ ನಿರ್ಣಯಿಸಲ್ಪಟ್ಟಿದೆ.

**ಪೂರ್ವಪಕ್ಷ** :- ಸ್ವಾಮಿತ್ವಮಾತ್ರೋಪಾಸನೆಯು ಸುಲಭವಾದ್ದರಿಂದ ಮತ್ತು ಬೇಗನೇ ಅಪರೋಕ್ಷಕ್ಕೆ ಕಾರಣವಾಗುವುದರಿಂದಲೂ ಆತ್ಮಪದವು ಸ್ವಾಮಿ ಎಂದು ಮಾತ್ರ ಅರ್ಥವುಳ್ಳದ್ದಾದ್ದರಿಂದ ಏವಕಾರಯುಕ್ತವಾದ ಆ ವಾಕ್ಯದಿಂದ ಸ್ವಾಮಿತ್ವೋಪಾಸನೆಯನ್ನೇ ಮಾಡಬೇಕು. ಚುತುರ್ಗುಣೋಪಾಸನೆಯು ಸರಿಯಲ್ಲ. 'ಅತ್ರಹ್ಯೇತೇ' ಎಂಬ ವಾಕ್ಯಶೇಷವಾದರೂ ಆತ್ಮತ್ವೋಪಾಸನೆಯ ಶ್ರುತಿಪರ ಎಂದು ಅದನ್ನು ಕೂಡಿಸಬಹುದು.

**ಸಿದ್ಧಾಂತ** :- ಸ್ವಾಮಿತ್ವಮಾತ್ರೋಪಾಸನೆಯು ಸುಲಭವಾದರೂ ಕೂಡ ಅತ್ಯಲೌಕಿಕವಾದ ಪರಮಪುರುಷಾರ್ಥಹೇತುಭೂತವಾದ ಭಗವದಾಪರೊಕ್ಷ್ಯದ ವಿಷಯದಲ್ಲಿ ಸಾಧನವು ಸುಖಕರವಾಗಿದೆ ಎನ್ನುವದು ಗುಣವೆನಿಸಲಾರದು. (ಫಲವು ಮಹತ್ತರವಾದಾಗ ಸಾಧನವು ಮಹತ್ತರವೇ ಆಗಿರುತ್ತದೆ. ಸುಲಭವೆಂದು ಭಾವಿಸಿ ಅಲ್ಪಸಾಧನೆಯನ್ನು ಅವಲಂಬಿಸಬಾರದು). ಸುಶಕತ್ವವು ಗುಣವೆಂದು ಭಾವಿಸಿದರೂ ಕೂಡ ಎಲ್ಲ ಮುಮುಕ್ಷುಗಳಿಗೂ ಜ್ಞಾನಾನಂದಾದಿರೂಪವಾದ ಮೋಕ್ಷವು ಅಪೇಕ್ಷಿತವಾದ್ದರಿಂದ ಅದಕ್ಕೆ

ಅನುಗುಣವಾದ ನಾಲ್ಕು ಗುಣಗಳ ಉಪಾಸನೆಯನ್ನೇ ಮಾಡಬೇಕು. ಕೇವಲ ಸ್ವಾಮಿತ್ವವನ್ನಲ್ಲ. ವಾಕ್ಯಶೇಷವೂ ಅರ್ಥವಾದರೂಪವಾಗಿದ್ದರೂ ಅದರ ವಾಚ್ಯಾರ್ಥವು ಅವಿರುದ್ಧವಾಗಿದ್ದರೆ ಅದರಲ್ಲಿಯೂ ತಾತ್ಪರ್ಯವಿದ್ದೇ ಇರುತ್ತದೆ. ಪೂರ್ವದಲ್ಲಿ ಬಂದಿರುವ 'ಪ್ರಾಣಾನ್ನೇವ ಪ್ರಾಣಾನಾಮ್' ಇತ್ಯಾದಿ ವಾಕ್ಯದಲ್ಲಿ ಪ್ರಾಣಾದಿ ಪದಗಳಿಂದ ಪ್ರಸಕ್ತವಾದ ಆನಂದಾದಿ-ಗುಣಗಳನ್ನೇ ಪರಮಾರ್ಶ ಮಾಡಿ 'ಅತ್ರ ಹಿ ಏತೇ' ಎಂದು ವಾಕ್ಯಶೇಷದಲ್ಲಿ ಆತ್ಮತ್ವಗುಣದಲ್ಲೇ ಆನಂದಾದಿಗುಣಗಳನ್ನು ಅಂತರ್ಭಾವಗೊಳಿಸಿದ್ದರಿಂದ ಆತ್ಮಶಬ್ದವು ಸ್ವಾಮಿತ್ವಾದಿಚತುರ್ಗುಣವಾಚಕವೇ ಆಗಿದೆ. 'ಆನಂದಾನು-ಭವತ್ವಾಚ್ಚ' ಎಂಬ ಸ್ಮೃತಿಯೂ ಕೂಡ ಆತ್ಮಶಬ್ದವು ಕೇವಲ ಸ್ವಾಮಿತ್ವಪರ ಅಲ್ಲ, ಚತುರ್ಗುಣವಾಚಕ ಎಂದು ಹೇಳಿದೆ. ಆದ್ದರಿಂದ ಆತ್ಮಶಬ್ದವು ಚತುರ್ಗುಣೋಪಾಸನೆಗೆ ವಿರೋಧಿಯೇನಲ್ಲ ಮತ್ತು ಚತುರ್ಗುಣೋ-ಪಾಸನೆಯು ಅನುಪಸಂಹಾರರೂಪವೇ ಆದ್ದರಿಂದ 'ಆತ್ಮೇತ್ಯೇವ' ಎಂಬ ವಾಕ್ಯವು ಅನುಪಸಂಹಾರಕ್ಕೆ ಪ್ರಮಾಣ ಎಂಬುದಾಗಿ ಹೇಳಿದ್ದೂ ಕೂಡ ಬಾಧಕವಾಗುವುದಿಲ್ಲ.

## ॥ ಓಂ ಅನ್ವಯಾದಿತಿ ಚೇತ್ಸ್ಯಾದವಧಾರಣಾತ್ ಓಂ ॥
## ೩-೩-೧೦

'ಆತ್ಮೇತ್ಯೇವ' ಎಂಬುದು ಅನುಪಸಂಹಾರಕ್ಕೆ ಪ್ರಮಾಣ ಎಂದು ಹಿಂದೆ ಹೇಳಿದ್ದನ್ನು ಇಲ್ಲಿ ಆಕ್ಷೇಪಿಸಿ ಸಮರ್ಥಿಸಿದ್ದರಿಂದ ಸಂಗತಿ ಇದೆ.

ಆತ್ಮ ಪದವು ಅನುಪಸಂಹಾರಕ್ಕೆ ಪ್ರಮಾಣ ಎಂದು ಹೇಳಿದ್ದು ಅಯುಕ್ತವೋ, ಯುಕ್ತವೋ? ಆತ್ಮಪದೋಕ್ತ ಗುಣಗಳನ್ನು ಸರ್ವಗುಣೋಪಾಸಕರು ಮಾತ್ರ ಧ್ಯಾನ ಮಾಡಬೇಕೋ ಅಥವಾ ಅಲ್ಪಗುಣೋಪಾಸಕರೂ ಧ್ಯಾನ ಮಾಡಬೇಕೋ, ಆತ್ಮಶಬ್ದವು ಸಕಲಗುಣಬೋಧಕವಾದ್ದರಿಂದ ಅಲ್ಪ-ಗುಣೋಪಾಸಕರಿಗೆ ಸಂಶಯ ಜನಕವಾಗುವುದೋ ಅಥವಾ ವ್ಯವಸ್ಥಿತವಾಗಿ ತತ್ತದ್ಯೋಗ್ಯಗುಣಬೋಧಕವಾಗಿ ನಿಶ್ಚಯ ಜನಕವೇ ಆಗುತ್ತದೋ ಎಂಬುದು ಇಲ್ಲಿಯ ವಿಚಾರ.

**ಪೂರ್ವಪಕ್ಷ :-** ಆತ್ಮೇತ್ಯೇವೋಪಾಸೀತ ಎಂಬ ವಿಧಿಯು ಚೋದನಾದ್ಯ-ವಿಶೇಷಾತ್ ಎಂಬ ನ್ಯಾಯದಂತೆ ಸರ್ವಗುಣೋಪಾಸಕರಾದ ಚತುರ್ಮುಖ ಬ್ರಹ್ಮನೇ ಮೊದಲಾದ ಎಲ್ಲರಿಗೂ ಸಮಾನ. ಅಲ್ಲಿಯೂ ಆತ್ಮಶಬ್ದವು ಅಲ್ಪಗುಣೋಪಸಂಹಾರಕರಿಗೆ ಯೋಗ್ಯವಾದ ಗುಣಗಳನ್ನು ಮಾತ್ರ ಬೋಧಿಸಿದರೆ, ಸರ್ವಗುಣೋಪಸಂಹಾರಕರಾದ ಬ್ರಹ್ಮದೇವರ ವಿಷಯದಲ್ಲಿ ಅಲ್ಪವನ್ನು ಮಾತ್ರ ಧ್ಯಾನ ಮಾಡಬೇಕೆಂದು ಹೇಳಿದಂತಾಗಿ ಅನುಪಪನ್ನವಾಗುತ್ತದೆ. ಆದ್ದರಿಂದ ಆತ್ಮಶಬ್ದವು 'ಆಪ್ತವ್ಯಾಪ್ತೇಃ' ಎಂಬ ಸ್ಮೃತಿಯ ಪ್ರಕಾರ ಸರ್ವಗುಣವಾಚಿ ಎಂದೇ ಹೇಳಬೇಕು. ಆಗ ಅದು ಚತುರ್ಗುಣೋ-ಪಾಸಕರನ್ನು ಕುರಿತು ಚತುರ್ಗುಣಮಾತ್ರಬೋಧಕವಾಗುವುದಿಲ್ಲ. ಕಿಂತು ಸರ್ವಗುಣಗಳನ್ನೇ ಬೋಧಿಸುತ್ತದೆ. ಆಗ ಅವರಿಗೆ ಸರ್ವಗುಣೋಪಾಸನೆ ಮಾಡಬೇಕೋ? ಚತುರ್ಗುಣೋಪಾಸನೆ ಮಾಡಬೇಕೋ? ಎಂಬ ಸಂದೇಹ ಉಂಟಾಗುತ್ತದೆ. ಹೀಗೆ ಸಂದೇಹಜನಕವಾದ ಈ ವಾಕ್ಯವು ಅನುಪಸಂಹಾರಕ್ಕೆ (ಅಲ್ಪಗುಣೋಪಾಸನೆಗೆ) ಪ್ರಮಾಣವಾಗಲಾರದು.

ಆತ್ಮಶಬ್ದವು ಸರ್ವಗುಣಬೋಧಕವಾದರೂ ಕೂಡ ಉಪಾಸಕರು ತಮಗೆ ಯೋಗ್ಯವಾದುದನ್ನೇ ಉಪಾಸನೆ ಮಾಡಲಿ ಎಂದು ಶಂಕಿಸಬಾರದು. ಆತ್ಮೇತ್ಯೇವ ಎಂಬ ವಿಧಿಯು 'ಆತ್ಮ'ಶಬ್ದದಿಂದ ಎಷ್ಟು ಪ್ರತೀತವಾಗುತ್ತದೋ ಅಷ್ಟನ್ನು ಧ್ಯಾನಮಾಡಲೇಬೇಕು, ಬಿಡಕೂಡದು ಎಂದು ಅಯೋಗವ್ಯವಚ್ಛೇದ ಮಾಡಿರುವುದರಿಂದ ಅದನ್ನು ಮೀರಿದಂತಾಗಿ ವಿರೋಧ ಬರುತ್ತದೆ.

**ಸಿದ್ಧಾಂತ :-** ಆತ್ಮಶಬ್ದವು ಸರ್ವಗುಣವಾಚಕವಾಗಿದ್ದರೂ ಎಲ್ಲರನ್ನು ಕುರಿತು ಅಲ್ಲ. ಬ್ರಹ್ಮಾದಿಗಳನ್ನು ಮಾತ್ರ ಕುರಿತು ಸರ್ವಗುಣವಾಚಕ. ಇತರರನ್ನು ಕುರಿತು ಅವರವರಿಗೆ ಯೋಗ್ಯ ಗುಣವಾಚಕವಾಗಿದೆ. ಆದ್ದರಿಂದ ಸಂದೇಹಕ್ಕೆ ಅವಕಾಶವಿಲ್ಲ. ಇದು ಅವರವರ ಅನುಭವಸಿದ್ಧ. ಹೀಗಾಗಿ ಆತ್ಮಶಬ್ದವು ಯಾರ್ಯಾರಿಗೆ ಎಷ್ಟೆಷ್ಟು ಬೋಧಿಸುತ್ತದೋ ಅವರವರು ಅಷ್ಟಷ್ಟು ಉಪಾಸನೆ ಮಾಡಬೇಕು. ಆದ್ದರಿಂದ ಆತ್ಮಪದವು ಅನುಪಸಂಹಾರಕ್ಕೆ ಪ್ರಮಾಣವಾಗುತ್ತದೆ.

## ॥ ಓಂ ಕಾರ್ಯಾಖ್ಯಾನಾದಪೂರ್ವಮ್ ಓಂ ॥ ೩-೩-೧೧

ಆತ್ಮಶಬ್ದವು ಆಯಾಗುಣೋಪಾಸನಾ ಯೋಗ್ಯತೆಯುಳ್ಳವರಿಗೆ ಆಯಾ ಗುಣಗಳನ್ನು ಮಾತ್ರ ಹೇಳುತ್ತದೆ ಎಂದು ಹಿಂದಿನ ಅಧಿಕರಣದಲ್ಲಿ ಸಮರ್ಥಿಸಲಾಯಿತು. ಆದರೂ ಆತ್ಮಶಬ್ದವು ಅಲೌಕಿಕ ಗುಣಗಳನ್ನು ಬೋಧಿಸುವುದಿಲ್ಲ ಎಂದು ಅಧಿಕರಣದಲ್ಲಿ ಆಕ್ಷೇಪ ಮಾಡುವುದರಿಂದ ಸಂಗತಿ ಇದೆ. ಈಶ್ವರ ಗುಣಗಳನ್ನು ಧ್ಯಾನ ಮಾಡಬೇಕೆಂದು ಹೇಳಲಾಯಿತು. ಲೌಕಿಕ ಗುಣಗಳನ್ನು ಧ್ಯಾನ ಮಾಡಬೇಕೋ ಅಥವಾ ಅಲೌಕಿಕಗುಣಗಳನ್ನೋ? ಲೌಕಿಕಗುಣಗಳನ್ನು ಧ್ಯಾನ ಮಾಡದೇ ಇದ್ದರೆ ಧ್ಯಾನವೇ ಇಲ್ಲದಂತಾಗುವ ಪ್ರಸಂಗ ಬರುತ್ತದೋ ಇಲ್ಲವೋ? ಅಲೌಕಿಕ ಗುಣಗಳ ಅನುಭವ ಅಶಕ್ಯವೋ, ಶಕ್ಯವೋ? ಎಂಬುದು ಇಲ್ಲಿಯ ವಿಚಾರ.

**ಪೂರ್ವಪಕ್ಷ** :- ಅಲೌಕಿಕ ಗುಣವಿಷಯದಲ್ಲಿ ಪ್ರತ್ಯಕ್ಷ ಹಾಗೂ ಅನುಮಾನ ಗಳಿಗೆ ಪ್ರಸಕ್ತಿಯೇ ಇಲ್ಲ. ಶಬ್ದ ಪ್ರಮಾಣದಿಂದಲೇ ಹಾಗೆ ತಿಳಿಯಬೇಕಾದರೆ, ಒಂದೊಂದು ಪದಕ್ಕೂ ಅದರ ಅರ್ಥಕ್ಕೂ ಇರುವ ಸಂಬಂಧದ ಜ್ಞಾನ ಮೊದಲೇ ಇರಬೇಕು. ಅದು ಬರಬೇಕಾದರೆ ಅದಕ್ಕಿಂತ ಮೊದಲು ಸಂಬಂಧಿಗಳ ಜ್ಞಾನ ಬೇಕು. ಇಲ್ಲಿ ಸಂಬಂಧಿಗಳು ಶಬ್ದ ಮತ್ತು ಅಲೌಕಿಕಗುಣ. ಇವುಗಳ ಪೈಕಿ ಶಬ್ದದ ಜ್ಞಾನವು ಶ್ರಾವಣ ಪ್ರತ್ಯಕ್ಷದಿಂದ ಬರಬಹುದಾದರೂ, ಪ್ರತಿ-ಸಂಬಂಧಿಯಾದ (ಅರ್ಥದ) ಅಲೌಕಿಕಗುಣದ ಜ್ಞಾನಕ್ಕೆ ಶಬ್ದವನ್ನೇ ಅವಲಂಬಿಸಬೇಕಾಗಿ ಬರುವುದರಿಂದ ಅನವಸ್ಥಾ ದೋಷ ಬರುತ್ತದೆ. ಹೀಗಾಗಿ ಧ್ಯಾನಕಾಲದಲ್ಲಿ ಅಲೌಕಿಕ ಗುಣ ತೋರುವುದಿಲ್ಲವಾದ್ದರಿಂದ ಅವುಗಳ ಧ್ಯಾನ ಸಾಧ್ಯವಿಲ್ಲ. ಲೌಕಿಕಗುಣಗಳನ್ನು ಧ್ಯಾನ ಮಾಡಕೂಡದೆಂದರೆ ಧ್ಯಾನವೇ ಇಲ್ಲ ವೆಂದಾಗಿ ಅಪರೋಕ್ಷವೂ ಇಲ್ಲದಂತಾಗುತ್ತದೆ. ಆದ್ದರಿಂದ ಲೌಕಿಕಗುಣಗಳೇ ಧ್ಯೇಯವೆನ್ನಬೇಕು. ನಪ್ರತೀಕೇ ಎಂಬ ಸೂತ್ರದಲ್ಲಿ ಅವಿದ್ಯಮಾನ ಧ್ಯಾನವನ್ನು ನಿರಾಸ ಮಾಡುವುದರಿಂದ ಲೌಕಿಕ ಗುಣಗಳೇ ಪರಮಾತ್ಮನಲ್ಲಿವೆ ಎನ್ನಬೇಕು. ಇದರಿಂದ 'ಪರಮತಃ' ಎಂಬ ಸೂತ್ರದಲ್ಲಿ ಹೇಳಿದ ಅಲೌಕಿತ್ವವು ಸರಿಯಲ್ಲ.

**ಸಿದ್ಧಾಂತ** :- 'ಅಲೌಕಿಕಾಸ್ತಸ್ಯ ಗುಣಾ ಹ್ಯುಪಾಸ್ಯಾ ಅಲೌಕಿಕಂ ಮುಕ್ತಿ ಕಾರ್ಯಂ ಯತೋಸ್ಯ' ಎಂಬ ಶ್ರುತಿಯಲ್ಲಿ ಮೋಕ್ಷವನ್ನು ಅಲೌಕಿಕ ಎಂದು

ಹೇಳಿದ್ದರಿಂದ ಅಂತಹ ಮೋಕ್ಷವು ಅಲೌಕಿಕಗುಣೋಪಾಸನೆ ಇಲ್ಲದೆ ದೊರೆಯಲಾರದಾದ್ದರಿಂದ, 'ಅರ್ಥಸಾಮಾನ್ಯಾತ್' ಎಂಬಲ್ಲಿ ಹೇಳಿದ ನ್ಯಾಯದಂತೆ ಫಲಾನುಸಾರಿಧ್ಯಾನ ಮಾಡಬೇಕಾದ್ದರಿಂದ ಅಲೌಕಿಕಗುಣ-ಗಳನ್ನೇ ಉಪಾಸನೆ ಮಾಡಬೇಕು. ಅಂತಹ ಗುಣಗಳ ಪ್ರತೀತಿ ಹೇಗೆ ಬರುತ್ತದೆ? ಎಂದರೆ, ಇಂದ್ರ ಶಬ್ದಕ್ಕೂ ಆ ದೇವತೆಗೂ ಸಂಬಂಧ ಜ್ಞಾನ-ವಿಲ್ಲದಿದ್ದರೂ 'ಯಾರು ಸಾವಿರ ಕಣ್ಣುಗಳುಳ್ಳವನೋ ಅವನೇ ಇಂದ್ರ' ಎಂಬ ಉಪದೇಶದಿಂದ ಒಬ್ಬ ದೇವತೆಯ ಜ್ಞಾನ ಉಂಟಾಗಿ ಅವನಿಗೂ ಇಂದ್ರ ಶಬ್ದಕ್ಕೂ ಸಂಬಂಧಜ್ಞಾನವೂ ಬರುತ್ತದೆ. ಕೈಯಲ್ಲಿ ಹಗ್ಗ ಧರಿಸಿದವನೇ ವರುಣ ಎಂಬಲ್ಲಿಯೂ ಹೀಗೆ. ಇದರಂತೆ ಭಗವದ್‌ಗುಣಗಳ ಸಾಕ್ಷಾತ್ಕಾರ ಪಡೆದ ಜ್ಞಾನಿಗಳು 'ಇದು ಅನುಕೂಲ ಎಂದು ತಿಳಿಯಲ್ಪಡುವ ಭಗವದ್ಗುಣವೇ ಆನಂದ' ಎಂದು ಉಪದೇಶಿಸಿದಾಗ ಅಲೌಕಿಕ ಆನಂದದ ಜ್ಞಾನವೂ ಉಂಟಾಗಿ ಅಲ್ಲಿ ಶಬ್ದ ಸಂಬಂಧಜ್ಞಾನವೂ ಬರುವುದರಿಂದ ಶಬ್ದಪ್ರಮಾಣದಿಂದ ಅಲೌಕಿಕ ಗುಣಗಳ ಪ್ರತೀತಿ ಶಕ್ಯವಾದ್ದರಿಂದ ಅವುಗಳನ್ನು ಧ್ಯಾನಮಾಡುವುದು ಯುಕ್ತವೇ ಆಗಿದೆ. ಇದು 'ಶಾಸ್ತ್ರೋಕ್ತ ವಸ್ತುನಶ್ಚೈವ' ಎಂಬ ಅನುವ್ಯಾಖ್ಯಾನ ಸುಧಾಗಳಲ್ಲಿ ವಿವರಿಸಲ್ಪಟ್ಟಿದೆ.

## ।। ಓಂ ಸಮಾನ ಏವಂ ಚಾಭೇದಾತ್ ಓಂ ।। ೩-೩-೧೨

'ಅರ್ಥಸಾಮಾನ್ಯಾತ್' ಎಂಬ ನ್ಯಾಯವನ್ನನುಸರಿಸಿ ಹಿಂದಿನ ಅಧಿಕರಣದಲ್ಲಿ ಅಪೂರ್ವವಾದ ಮೋಕ್ಷಕ್ಕಾಗಿ ಅಪೂರ್ವಗುಣಗಳನ್ನೇ ಧ್ಯಾನ ಮಾಡಬೇಕು ಎಂದು ಹೇಳಲಾಯಿತು. ಅದು ಸರಿಯಲ್ಲ, ಏಕೆಂದರೆ ಧ್ಯಾನಕ್ಕೆ ಅನುಸಾರವಾಗಿ ಫಲ ದೊರೆಯುವುದಿಲ್ಲ ಎಂದು ಇಲ್ಲಿ ಶಂಕಿಸುವುದರಿಂದ ಸಂಗತಿ ಇದೆ. ಅರ್ಥಸಾಮಾನ್ಯಾತ್ ಎಂಬಲ್ಲಿ ಧ್ಯಾನವು ಫಲಾನುಸಾರಿ-ಯಾಗಿರಬೇಕು ಎಂದು ಹೇಳಿದ್ದು ಅಯುಕ್ತವೋ, ಯುಕ್ತವೋ ? ಸರಸ್ವತೀ-ಬ್ರಹ್ಮದೇವರು ಮಾಡುವ ಉಪಾಸನೆಯು ಫಲಾನುಸಾರಿ-ಯಾಗಿಲ್ಲವೋ ಅಥವಾ ಆಗಿದೆಯೋ, ಸಮಫಲ ಮತ್ತು ವಿಷಮಫಲ (ಮುಕ್ತಿಯಲ್ಲಿ ಸ್ವಾಧ್ವೈಕ್ಯವೆಂಬ ಸಮಫಲ ಮತ್ತು ಆನಂದತಾರತಮ್ಯವೆಂಬ ವಿಷಮಫಲ) ವನ್ನು ಹೊಂದುವ ಸರಸ್ವತೀ-ಬ್ರಹ್ಮರು ಮಾಡುವ

ಉಪಾಸನೆಯು ಸಮ ಮತ್ತು ವಿಷಮವಾಗಲಾರದೋ ಅಥವಾ ಆಗಬಹುದೋ, ಮತ್ತು 'ತ್ರಿವಿಕ್ರಮತ್ವಾದಿ ಕ್ರಿಯಾವಿಶೇಷಗಳನ್ನು ಬ್ರಹ್ಮ-ದೇವರು ಉಪಾಸನೆ ಮಾಡುತ್ತಾರೆ. ಸರಸ್ವತಿಯು ಮಾಡುವುದಿಲ್ಲ' ಇದು ಅಯುಕ್ತವೋ, ಯುಕ್ತವೋ ಎಂಬ ವಿಷಯಗಳು ಇಲ್ಲಿ ಚರ್ಚಿಸಲ್ಪಟ್ಟಿವೆ.

**ಪೂರ್ವಪಕ್ಷ** :- ಸರಸ್ವತೀ ಮತ್ತು ಬ್ರಹ್ಮದೇವರು ಮಾಡುವ ಉಪಾಸನೆಯು ಸಮ ಮತ್ತು ವಿಷಮವೆಂದು ಎರಡು ವಿಧವಾಗಲು ಸಾಧ್ಯವಿಲ್ಲ. ಆಗುವುದಾರೆ ಗುಣೋಪಾಸನೆಯಲ್ಲಿ ಸಮ ಮತ್ತು ಕ್ರಿಯೋ-ಪಾಸನೆಯಲ್ಲಿ ವಿಷಮ (ತ್ರಿವಿಕ್ರಮತ್ವಾದಿ ಕಾದಾಚಿತ್ಕ ಕ್ರಿಯೆಗಳ ಉಪಾಸನೆ ಸರಸ್ವತಿಗಿಲ್ಲ ಬ್ರಹ್ಮನಿಗೆ ಮಾತ್ರ) ಎಂಬ ಪ್ರಕಾರದಿಂದಲೇ ಆಗಬೇಕು. ಬೇರೆ ಪ್ರಕಾರವಿಲ್ಲ. ಆದರೆ ತ್ರಿವಿಕ್ರಮತ್ವಾದಿಗಳ ಉಪಾಸನೆ ಬ್ರಹ್ಮದೇವರಿಗೂ ಇಲ್ಲ ವೆಂದೇ ಹೇಳಬೇಕು. ಅವುಗಳು ಕಾದಾಚಿತ್ಕವಾದ್ದರಿಂದ ಧ್ಯಾನಕಾಲದಲ್ಲಿ-ರುವುದಿಲ್ಲವಾದ್ದರಿಂದ ಅದನ್ನು ಉಪಾಸನೆ ಮಾಡಿದರೆ ಅವಿದ್ಯಮಾನೋ-ಪಾಸನೆಯಾಗುತ್ತದೆ. ಅದು ನಿಂದಿತ. ಹೀಗಾಗಿ ಅವರಿಬ್ಬರ ಉಪಾಸನೆ ಸಮ ಮತ್ತು ವಿಷಮ ಅಲ್ಲ. ಫಲವಾದರೋ ಸಮ-ವಿಷಮವಾಗಿದೆ. ಆದ್ದರಿಂದ 'ಅರ್ಥಸಾಮಾನ್ಯಾತ್' ಎಂಬಲ್ಲಿ ಹೇಳಿದ್ದು ಸರಿಯಲ್ಲ.

**ಸಿದ್ಧಾಂತ** :- 'ಗುಣಕ್ರಿಯಾದಯೋ ವಿಷ್ಣೋಃ ಸ್ವರೂಪಂ' ಎಂದು ತತ್ತ್ವ-ನಿರ್ಣಯದ ಕೊನೆಯಲ್ಲಿ ಉದಾಹರಿಸಲ್ಪಟ್ಟ ಶ್ರುತಿಯ ಪ್ರಕಾರ ಭಗವಂತನ ಗುಣ ಮತ್ತು ಕ್ರಿಯೆಗಳು ಅವನ ಸ್ವರೂಪವೇ ಆದ್ದರಿಂದ ನಿತ್ಯವೇ ಆಗಿರುತ್ತವೆ. ಆದ್ದರಿಂದ ತ್ರಿವಿಕ್ರಮತ್ವಾದಿ ಕ್ರಿಯೆಗಳೂ ಕೂಡ ನಿತ್ಯವೇ ಆದ್ದರಿಂದ ಧ್ಯಾನ-ಕಾಲದಲ್ಲಿಯೂ ಇರುವುದರಿಂದ ಅವುಗಳ ಉಪಾಸನೆಯು ಅವಿದ್ಯಮಾನೋ ಪಾಸನೆಯು ಆಗುವುದಿಲ್ಲ. ಇದು 'ಗುಣಾಸ್ತ್ರೈವಿಕ್ರಮಾದ್ಯಾಶ್ಚ' ಎಂಬ ಸ್ಮೃತಿಯಂತೆ ಬ್ರಹ್ಮದೇವರಿಗೆ ಮಾತ್ರ ಯೋಗ್ಯವಾಗಿದೆ. ಸರಸ್ವತೀ-ದೇವಿಯರಿಗೆ 'ಪರಮಾತ್ಮನು ನಿತ್ಯವಾದ ಅನಂತಕ್ರಿಯೆವುಳ್ಳವನು' ಎಂಬ ಸಾಮಾನ್ಯೋಪಾಸನೆಯು ಯೋಗ್ಯವಾದ್ದರಿಂದ ಅದರಲ್ಲಿಯೇ ತ್ರಿವಿಕ್ರಮತ್ವಾದಿ ಕ್ರಿಯಾವಿಶೇಷಗಳೂ ಅಂತರ್ಭಾವಗೊಳ್ಳುತ್ತವೆ. ಪ್ರತ್ಯೇಕವಾಗಿ ಉಪಾಸ್ಯವಲ್ಲ. ಈ ಪ್ರಕಾರ ಸರಸ್ವತೀಬ್ರಹ್ಮದೇವರು ಮಾಡುವ ಕ್ರಿಯೋಪಾಸನೆಯು ವಿಷಮವಾಯಿತು. ಗುಣವಿಷಯದಲ್ಲಿ ಸಮವೂ ಆಗಿದೆ. ಆದ್ದರಿಂದಲೇ

ಅವರಿಬ್ಬರ ಫಲವೂ ಕೂಡ ಸಮ ಮತ್ತು ವಿಷಮವಾಗಿದೆ. 'ಅರ್ಥ-ಸಾಮಾನ್ಯಾತ್' ಎಂಬ ಸೂತ್ರದಲ್ಲಿ ಹೇಳಿದ್ದು ಯುಕ್ತವೇ ಆಗಿದೆ.

## ॥ ಓಂ ನ ವಾ ವಿಶೇಷಾತ್ ಓಂ ॥ ೩-೩-೧೩

'ಆತ್ಮೇತ್ಯೇವ ಉಪಾಸೀತ' ಎಂಬ ಶ್ರುತಿಯು ಹೇಳುವಂತೆ ಆತ್ಮಪದೋಕ್ತ ಗುಣಗಳ ಉಪಾಸನೆಯು ಅವಶ್ಯಕ. ಆತ್ಮಪದವಾದರೂ ಸರಸ್ವತಿಗೆ ಯೋಗ್ಯವಾದ ಗುಣಗಳಿಗಿಂತ ನ್ಯೂನಗುಣಗಳನ್ನೂ ಹೇಳುವ ಸಂಭವವಿರುವುದರಿಂದ ಸರ್ವಗುಣಗಳನ್ನೇ ಹೇಳುತ್ತವೆ. ಮತ್ತು ಕ್ರಿಯಾಸಾಮಾನ್ಯವನ್ನೇ ಹೇಳುತ್ತವೆ ಎಂಬ ನಿಯಮವಲ್ಲವಾದ್ದರಿಂದ ಪೂರ್ವಾಧಿಕರಣದಲ್ಲಿ ಹೇಳಲ್ಪಟ್ಟ ಸರ್ವ-ಗುಣೋಪಸಂಹಾರ ಮತ್ತು ಕ್ರಿಯಾಸಾಮಾನ್ಯೋಪಸಂಹಾರವು ಅಯುಕ್ತ-ವೆಂದು ಈ ಅಧಿಕರಣದಲ್ಲಿ ಶಂಕೆ ಮಾಡುವುದರಿಂದ ಅನಂತರ ಸಂಗತಿ.

'ಆತ್ಮಶಬ್ದಾಚ್ಚ' ಎಂಬ ಸೂತ್ರದಲ್ಲಿ 'ಆತ್ಮೇತ್ಯೇವ' ಎಂಬಲ್ಲಿಯ ಆತ್ಮಶಬ್ದವು ಅನುಪಸಂಹಾರಕ್ಕೆ ಪ್ರಮಾಣ ಎನ್ನಲಾಗಿದೆ. ಅದು ಅಯುಕ್ತವೋ, ಯುಕ್ತವೋ, ಆತ್ಮಶಬ್ದೋಕ್ತ ಗುಣಗಳು ಸರ್ವರಿಗೂ ಅನುಪಾಸ್ಯವೋ ಅಥವಾ ಉಪಾಸ್ಯವೋ, ಆತ್ಮಶಬ್ದವು ಸರ್ವಗುಣಾಭಿಧಾಯಕವಾಗಿದ್ದರೂ ಆಯಾ ಅಧಿಕಾರಿಗಳಿಗೆ ತತ್ತದ್ಯೋಗ್ಯಗುಣಗಳನ್ನು ಮಾತ್ರ ಹೇಳುತ್ತದೆ ಎಂಬುದಾಗಿ ಹಿಂದೆ ಹೇಳಿದ್ದು ಅಯುಕ್ತವೋ, ಯುಕ್ತವೋ, ಆತ್ಮಶಬ್ದವು ಪ್ರಾತಿಸ್ವಿಕವಾಗಿ (ಇಂಥಿಂಥವರನ್ನು ಕುರಿತು ಇಷ್ಟಿಷ್ಟೇ ಗುಣವಾಚಕ) ತತ್ತದ್ಯೋಗ್ಯ ಗುಣ ಮಾತ್ರ ವಾಚಕ ಎಂಬ ನಿಮಯ ಇಲ್ಲವೋ ಅಥವಾ ಇದೆಯೋ ಎಂಬುದು ಇಲ್ಲಿಯ ಚಿಂತಾ ಪರಂಪರೆ.

**ಪೂರ್ವಪಕ್ಷ** :- ಆತ್ಮಶಬ್ದವು ಬ್ರಹ್ಮದೇವರನ್ನು ಕುರಿತು ಸರ್ವಗುಣ ಹಾಗೂ ಸರ್ವಕ್ರಿಯಾವಾಚಕ, ಸರಸ್ವತಿಯನ್ನು ಕುರಿತು ಸರ್ವಗುಣವಾಚಕ ಹಾಗೂ ಕ್ರಿಯಾಸಾಮಾನ್ಯವಾಚಕ, ಇತರರಿಗೆ ತತ್ತದ್ಯೋಗ್ಯಗುಣಗಳಿಗೆ ಮಾತ್ರ ವಾಚಕ ಹೊರತು ನ್ಯೂನಾಧಿಕಗುಣಗಳಿಗೆ ವಾಚಕವಲ್ಲ ಎಂಬ ನಿಯಮವಿಲ್ಲವಾದ್ದರಿಂದ, ಯೋಗ್ಯಕ್ಕಿಂತ ಹೆಚ್ಚು ಕಡಿಮೆಯನ್ನು ಹೇಳ-ಬಹುದಾದ್ದರಿಂದ, ಅನ್ವಯಾತ್ ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಯೋಗ್ಯ-ಮಾತ್ರಾಭಿಧಾಯಕತ್ವ ಕೂಡುವುದಿಲ್ಲವಾದ್ದರಿಂದ ಅದು ಅನುಪಸಂಹಾರಕ್ಕೆ

ಪ್ರಮಾಣವಾಗುವುದಿಲ್ಲ. (ಪ್ರಮಾಣವಾಗಿದ್ದ ಪಕ್ಷದಲ್ಲಿ ಅದರ ಆಧಾರದಿಂದ ಸರಸ್ವತಿಯ ಕ್ರಿಯೋಪಾಸನೆಯಲ್ಲಿ ಸಂಕೋಚ ಸರಿಯಾಗುತ್ತಿತ್ತು).

**ಸಿದ್ಧಾಂತ** :- ಆತ್ಮಶಬ್ದವು ಸರ್ವಗುಣವಾಚಕವಾಗಿದ್ದರೂ, ಆಯಾ ಅಧಿಕಾರಿಗಳಿಗೆ ತತ್ತದ್ಯೋಗ್ಯಗುಣಪ್ರತೀತಿಯನ್ನುಂಟುಮಾಡುತ್ತದೆ. ಆಯಾ ಅಧಿಕಾರಿಗಳ ವ್ಯುತ್ಪತ್ತಿಯ ವೈಶದ್ಯ, ಅವೈಶದ್ಯಗಳಿಂದ ಕದಾಚಿತ್ ನ್ಯೂನಾಧಿಕಗುಣಬೋಧಕವಾಗಬಹುದಾದರೂ ಧ್ಯಾನಕಾಲದಲ್ಲಿ ಯೋಗ್ಯ-ವಾದ ಗುಣಗಳನ್ನು ಮಾತ್ರ ತಿಳಿಸುತ್ತದೆ. ಸರ್ವರಿಗೂ ಸರ್ವಗುಣಗಳನ್ನು ತಿಳಿಸುವುದಿಲ್ಲ. ಆದ್ದರಿಂದ ಆತ್ಮಶಬ್ದೋಕ್ತಗುಣಗಳು ಸರ್ವರಿಂದಲೂ ಉಪಾಸ್ಯವಾಗಿವೆ. ಆತ್ಮಶಬ್ದವು ಅನುಪಸಂಹಾರಕ್ಕೆ ಪ್ರಮಾಣವಾಗಬಹುದು.

'ಸರ್ವಾನ್ ಗುಣಾನ್ ಆತ್ಮಶಬ್ದೋ ಬ್ರವೀತಿ ಬ್ರಹ್ಮಾದೀನಾಮಿತರೇಷಾಂ ನ ಚೈವ' ಎಂಬ ಶ್ರುತಿಯ ಪ್ರಕಾರವಾಗಿಯೂ ಆತ್ಮಶಬ್ದವು ಯೋಗ್ಯ ಗುಣ-ಗಳನ್ನು ಮಾತ್ರ ಧ್ಯಾನಕಾಲದಲ್ಲಿ ಪ್ರಕಾಶಪಡಿಸುತ್ತದೆ ಎಂದು ತಿಳಿಯಬೇಕು.

## ॥ ಓಂ ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ ಓಂ ॥ ೩-೩-೧೪

'ಉಷಾ ಸ ದ್ಯಾವಾ ಪೃಥಿವೀ ಬಿಭರ್ತಿ' ಎಂಬ ಶ್ರುತಿಯಲ್ಲಿ ಭಗವಂತನು ದ್ಯುಲೋಕ ಪೃಥಿವೀಲೋಕಗಳನ್ನು ಧರಿಸಿದ್ದಾನೆ ಎಂಬ ಗುಣವನ್ನು ಹೇಳ-ಲಾಗಿದೆ. 'ಏಷ ಹಿ ಸರ್ವೇಷು ಲೋಕೇಷು ಭಾತಿ' ಎಂಬಲ್ಲಿ ಪ್ರಕಾಶದಿಂದ ವ್ಯಾಪಿಸಿರುವಿಕೆ ಎಂಬ ಗುಣಗಳನ್ನು ಹೇಳಲಾಗಿದೆ. ಈ ಗುಣಗಳು ಸರ್ವೋ-ಪಾಸ್ಯ ಎಂಬ ಶಂಕೆಯನ್ನು ಈ ಅಧಿಕರಣದಲ್ಲಿ ಪೂರ್ವಸಿದ್ಧಾಂತನ್ಯಾಯದ ಅತಿದೇಶದಿಂದ ನಿರಾಕರಿಸುವ ಪ್ರಯುಕ್ತ ಇದಕ್ಕೆ ಅತಿದೇಶಿಕೀ ಸಂಗತಿ ಇದೆ.

'ಆನಂದಾದಯಃ ಎಂಬಲ್ಲಿ ಹೇಳಲ್ಪಟ್ಟ ಚತುರ್ಗುಣೋಪಾಸನೆಯು ಅಯುಕ್ತವೋ, ಯುಕ್ತವೋ, ಸಂಭೃತಿ (ಚನ್ನಾಗಿಭರಣ) ಮತ್ತು ಪ್ರಕಾಶ ವ್ಯಾಪ್ತಿಗಳು ಎಲ್ಲರಿಂದಲೂ ಉಪಾಸ್ಯವೋ, ಅಲ್ಲವೋ, ಉಪಾಸನೆಗೆ ಫಲಾಪೇಕ್ಷೆಯೊಂದೇ ಕಾರಣವೋ ಅಥವಾ ಯೋಗ್ಯತಾ ವಿಶೇಷವೂ ಕಾರಣವೋ ಎಂಬ ವಿಷಯಗಳು ಇಲ್ಲಿ ಚರ್ಚಿಸಲ್ಪಡುತ್ತವೆ.

**ಪೂರ್ವಪಕ್ಷ** :- ಗುಣೋಪಾಸನೆಗೆ ಫಲಾಪೇಕ್ಷೆಯೇ ನಿಯಾಮಕ. ಎಲ್ಲಾ ಮುಮುಕ್ಷುಗಳಿಗೂ ಮೋಕ್ಷದಲ್ಲಿ ತಮಗಿಂತ ಅಧಮರ ಭರಣ ಹಾಗೂ ಪ್ರಕಾಶವ್ಯಾಪ್ತಿಯ ಅಪೇಕ್ಷೆ (ಆನಂದಾದಿಗಳ ಅಪೇಕ್ಷೆಯಂತೆ) ಇರುತ್ತದೆ. ಯೋಗ್ಯತಾವಿಶೇಷವೂ ನಿಯಮಾಕವೆನ್ನುವುದಾದರೂ ಎಲ್ಲಾ ಮುಮುಕ್ಷು-ಗಳಿಗೆ ಅಂತಹ ಯೋಗ್ಯತೆಯನ್ನು ಒಪ್ಪಲು ವಿರೋಧವಿಲ್ಲ. ಯೋಗ್ಯತೆ ಇಲ್ಲದಿದ್ದರೂ ಸಾಧನಾನುಷ್ಠಾನ ಬಲದಿಂದ ಫಲ ಒಪ್ಪಲೂ ವಿರೋಧವಿಲ್ಲ. ಅದಕ್ಕಾಗಿ ಎಲ್ಲರೂ ತಮಗೆ ಅಪೇಕ್ಷಿತವಾದ ಫಲಪ್ರಾಪ್ತಿಗಾಗಿ ಭಗವಂತನ ಆ ಗುಣಗಳನ್ನು ಉಪಾಸನೆ ಮಾಡಬೇಕು. 'ಯಾದೃಶೋ ಭಾವಿತಸ್ತ್ವೀಶಃ' ಎಂಬ ಶ್ರುತಿಯಂತೆ ಮತ್ತು 'ಅರ್ಥಸಾಮಾನ್ಯಾತ್' ಫಲಾನುಗುಣವಾಗಿ ಸಾಧನೆ ಇರಬೇಕು ಎಂಬ ನ್ಯಾಯದಿಂದ ಭಗವಂತನ ಸಂಭೃತಿ ಪ್ರಕಾಶವ್ಯಾಪ್ತಿ-ಗುಣಗಳನ್ನು ಉಪಾಸಿಸಿದರೆ ಮಾತ್ರ ಅಂತಹ ಫಲ ಸಿಗುವುದರಿಂದ ಎಲ್ಲರೂ ಆ ಗುಣಗಳನ್ನು ಉಪಾಸಿಸಬೇಕು. ಹಾಗಾದರೆ ಸರ್ವರೂ ಸರ್ವಗುಣಗಳನ್ನು ಉಪಾಸಿಸುವ ಪ್ರಸಂಗ ಬರುತ್ತದೆ ಎಂಬ ಶಂಕೆಯೂ ಸರಿಯಲ್ಲ. ಎಲ್ಲರಿಗೂ ಎಲ್ಲ ಗುಣಗಳ ಅಪೇಕ್ಷೆ ಇರುವುದಿಲ್ಲ. ಹಾಗಾಗಿ ನಾಲ್ಕೇ ಗುಣಗಳು ಉಪಾಸ್ಯ ಎನ್ನುವುದು ಸರಿಯಲ್ಲ.

**ಸಿದ್ಧಾಂತ** :- ಫಲಾಪೇಕ್ಷೆಯೇ ಸಾಧನಾನುಷ್ಠಾನಕ್ಕೆ ನಿಯಾಮಕವೆಂದರೆ ತ್ರೈವರ್ಣಿಕೇತರರಿಗೂ ಸ್ವರ್ಗದ ಅಪೇಕ್ಷೆ ಇರುವುದರಿಂದ ಅವರಿಗೂ ಯಾಗಾನುಷ್ಠಾನದಿಂದ ಸ್ವರ್ಗ ಪ್ರಾಪ್ತಿಪ್ರಸಂಗ ಬರುತ್ತದೆ. ಯೋಗ್ಯತೆ ಇಲ್ಲದೆ ಮಾಡಿದರೆ 'ಅನ್ಯಥಾನರ್ಥಕೃದ್ ಭವೇತ್' ಎಂಬಂತೆ ಅನರ್ಥಪ್ರಸಂಗವಿದೆ. ಆದ್ದರಿಂದ ಯೋಗ್ಯತಾ ವಿಶೇಷವೇ ನಿಯಾಮಕವೆನ್ನಬೇಕು. ಪ್ರಕೃತದಲ್ಲಿ ಸಂಭೃತಿ ಹಾಗೂ ಪ್ರಕಾಶ ವ್ಯಾಪ್ತಿಯ ಉಪಾಸನಾ ಯೋಗ್ಯತೆಯಾದರೂ 'ದೇವಾದೀನಾಮುಪಾಸ್ಯಾಸ್ತು ಭೃತಿವ್ಯಾಪ್ತ್ಯಾದಯೋ ಗುಣಾಃ' ಎಂಬ ಸ್ಮೃತಿಯ ಪ್ರಕಾರ ದೇವತೆಗಳಿಗೆ ಮಾತ್ರ ಇರುವುದರಿಂದ ಅವು ಎಲ್ಲರಿಂದಲೂ ಉಪಾಸ್ಯವಲ್ಲ. ಏವಂ ಚ ಚತುರ್ಗುಣೋಪಾಸನೆಯು ಯುಕ್ತವಾಗುತ್ತದೆ.

ಎಲ್ಲ ಮುಮುಕ್ಷುಗಳಿಗೂ ಅಪೇಕ್ಷಿತವಾದ ಸ್ವಯೋಗ್ಯವಾದ 'ಅಧಮರ ಭರಣ' ಮತ್ತು ಪ್ರಕಾಶಗಳು ದೊರಕಲು ಪ್ರತ್ಯೇಕವಾಗಿ ಸಂಭೃತಿ (ವಿಶ್ವರೂಪ-ದಿಂದ ಸಮಸ್ತಲೋಕಭರಣ) ಹಾಗೂ ದ್ಯುವ್ಯಾಪ್ತಿ (ಮಹಾಪ್ರಕಾಶ, ಅನಂತ

ಕೋಟಿಸೂರ್ಯಪ್ರಕಾಶ)ಗಳ ಉಪಾಸನೆ ಬೇಕಾಗಿಲ್ಲ. ಧ್ಯಾನಕಾಲದಲ್ಲಿ ಭಗವಂತನು ಪ್ರತೀತನಾಗುವಾಗ ಅವನ ಜೊತೆಗೇ ಕಾಣುವ ಪರಿವಾರ ದೇವತಾಭರಣ ಹಾಗೂ ಯೋಗ್ಯತಾನುಸಾರ ಕಾಣುವ ಪ್ರಕಾಶದ ಉಪಾಸನೆಯೇ ಸಾಕಾಗುತ್ತದೆ.

## ॥ ಓಂ ಪುರುಷವಿದ್ಯಾಯಾಮಪಿ ಚೇತರೇಷಾಮನಾಮ್ನಾತ್ ಓಂ ॥ ೩-೩-೧೫

ಇದುವರೆಗೆ, ಮಧ್ಯಮಾಧಿಕಾರಿಗಳಾದ ಸುರರು ಬಹುಗುಣಗಳನ್ನು, ಅಧಮಾಧಿಕಾರಿಗಳಾದ ನರರು ಅಲ್ಪಗುಣಗಳನ್ನೂ, ಉತ್ತಮಾಧಿಕಾರಿಗಳಾದ ಬ್ರಹ್ಮದೇವರು ಸರ್ವಗುಣಗಳನ್ನೂ, ಬೇರೆ ಬೇರೆ ಕಡೆ ಹೇಳಿದ್ದನ್ನು ಏಕಬುದ್ಧಿಯಲ್ಲಿ ತಂದು, ಧ್ಯಾನ ಮಾಡಬೇಕೆಂದು ಹೇಳಲಾಯಿತು. ಆದರೆ, ಆಯಾ ಗುಣಗಳನ್ನು ಒಂದೇ ವಿದ್ಯೆಯಲ್ಲಿ ಒಂದೇ ಕಡೆ ಹೇಳಿರುವ ಸಂಭವ-ವಿರುವುದರಿಂದ ಬೇರೆ ಬೇರೆ ಕಡೆಯಿಂದ ಉಪಸಂಹಾರ ಸರಿಯಲ್ಲ ಎಂದು ಇಲ್ಲಿ ಶಂಕಿಸಿದ್ದರಿಂದ ಸಂಗತಿ ಇದೆ.

ಸರ್ವವೇದಾಂತ ಎಂಬ ಸೂತ್ರದದಲ್ಲಿ ಮೂರುವಿಧ ಅಧಿಕಾರಿಗಳಿಗೆ ಯಥಾಶಕ್ತಿ ಸರ್ವವೇದಪರಿಜ್ಞಾನ ಹೇಳಿದ್ದು ಅಯುಕ್ತವೋ, ಯುಕ್ತವೋ, ತಮ್ಮ ತಮ್ಮ ಯೋಗ್ಯಗುಣಗಳ ಉಪಾಸನೆಗಾಗಿ ಆಯಾ ಗುಣಗಳ ಉಪಸಂಹಾರ ಬೇಡವೋ, ಬೇಕೋ, ಅವರವರಿಗೆ ಯೋಗ್ಯವಾದ ಗುಣಗಳು ಒಂದೊಂದೇ ಕಡೆ ಹೇಳಲ್ಪಟ್ಟಿವೆಯೋ ಇಲ್ಲವೋ, ಒಂದೇ ಕಡೆ ಹೇಳಿಲ್ಲ ಎಂಬುದಕ್ಕೆ ಜ್ಞಾಪಕವಿಲ್ಲವೋ ಇದೆಯೋ ಎಂಬುದು ಇಲ್ಲಿ ಚಿಂತಾ ಪರಂಪರೆ.

**ಪೂರ್ವಪಕ್ಷ** :- ಅವರವರ ಯೋಗ್ಯ ಗುಣಗಳನ್ನು ಒಂದೊಂದೇ ಕಡೆ ಹೇಳಿಲ್ಲ ಎಂಬುದಕ್ಕೆ ಆಧಾರವಿಲ್ಲ. ಹೀಗಾಗಿ ಒಂದೇ ಕಡೆ ಹೇಳಿರುವ ಸಂಭವ ವಿರುವುದರಿಂದ ಆ ವಿದ್ಯೆಯೊಂದನ್ನು ತಿಳಿಯುವ ಮಾತ್ರದಿಂದಲೇ ಯೋಗ್ಯ ಗುಣವೆಲ್ಲವೂ ಏಕಬುದ್ಧಿಯಲ್ಲಿ ಬರುವುದರಿಂದ ಉಪಸಂಹಾರ ಬೇಕಾಗಿಲ್ಲ ವಾದ್ದರಿಂದ ಯಥಾಶಕ್ತಿ ಸರ್ವವಿದ್ಯಾಜ್ಞಾನವು ಅನಾವಶ್ಯಕ.

**ಸಿದ್ಧಾಂತ** :- ಪುರುಷಸೂಕ್ತವು 'ಸರ್ವತಃ ಪೌರುಷೇ ಸೂಕ್ತೇ' ಎಂಬ ಭಾಷ್ಯೋಕ್ತ ಸ್ಮೃತಿಯ ಪ್ರಕಾರ ಸರ್ವೋತ್ತಮ ವಿದ್ಯೆ ಎಂದು ಪ್ರಸಿದ್ಧವಾಗಿದೆ. ಅಂತಹ ಪುರುಷಸೂಕ್ತದಲ್ಲೇ ಸರ್ವಗುಣಗಳು ಪಠಿತವಾಗಿಲ್ಲ. ಇನ್ನು ಇತರ ವಿದ್ಯೆಗಳಲ್ಲಿ ಪಠಿತವಾಗಿಲ್ಲ ಎನ್ನುವುದು ಕೈಮುತ್ಯ ನ್ಯಾಯಸಿದ್ಧವಾಗುತ್ತದೆ. ಆದ್ದರಿಂದ ಸರ್ವಗುಣೋಪಸಂಹಾರಕರಿಗಂತೂ ಉಪಸಂಹಾರ ಬೇಕೇ ಬೇಕು. ಇನ್ನು ಮಧ್ಯಮ ಮತ್ತು ಅಧಮ ಅಧಿಕಾರಿಗಳಿಗೂ ಕೂಡ ಬಹುಗುಣ ಮತ್ತು ಅಲ್ಪಗುಣ ಹೇಳುವ ವಿದ್ಯೆಗಳಲ್ಲಿ ಅವರವರು ಉಪಾಸನೆ ಮಾಡುವ ಗುಣಗಳ ಸಮಸಂಖ್ಯಾಕ ಗುಣಗಳು ಸಿಗಬಹುದಾದರೂ ಅವರವರಿಗೆ ಯೋಗ್ಯ-ವಾದದ್ದನ್ನೇ ಹೇಳಬೇಕೆಂಬ ನಿಯಮವಿಲ್ಲವಾದ್ದರಿಂದ ತಮಗೆ ಯೋಗ್ಯವಾದ ಬಹಳ ಅಥವಾ ಅಲ್ಪಗುಣಕ್ಕಾಗಿಯೂ ಉಪಸಂಹಾರ ಅವಶ್ಯಕವೇ ಆಗಿದೆ. ಆದ್ದರಿಂದ ಯಥಾಶಕ್ತಿ ಸರ್ವವಿದ್ಯಾಪರಿಜ್ಞಾನವು ಬೇಕು.

## ॥ ಓಂ ವೇಧಾದ್ಯರ್ಥಭೇದಾತ್ ಓಂ ॥ ೩-೩-೧೬

ಹಿಂದಿನ ಅಧಿಕರಣದಲ್ಲಿ ಎಲ್ಲರೂ ಫಲಾನುಸಾರವಾಗಿ ಅಪೇಕ್ಷಿತ-ಗುಣಗಳನ್ನು ಉಪಸಂಹಾರ ಮಾಡಬೇಕು ಎಂದು ಹೇಳಲಾಯಿತು. ಇಲ್ಲಿ ಅದೇ ಪ್ರಸಕ್ತಿಯಿಂದ ಭಗವಂತನ ವೇಧಾದಿಗುಣಗಳ ಅಪೇಕ್ಷಿತಫಲಹೇತು-ವಾದ್ದರಿಂದ ಅದೂ ಕರ್ತವ್ಯ ಎಂದು ಶಂಕಿಸುವುದರಿಂದ ಸಂಗತಿ ಇದೆ.

ಈ ಅಧಿಕರಣದಲ್ಲಿ 'ಆನಂದಾದಯಃ' ಎಂಬಲ್ಲಿ ಹೇಳಲ್ಪಟ್ಟ ಮತ್ತು ಪೂರ್ವಾಧಿಕರಣದಲ್ಲಿ ಪ್ರಸಕ್ತವಾದ ಎಲ್ಲರಿಗೂ ಸಂಬಂಧಿಸಿದ ಚತುರ್ಗುಣೋಪಾಸನಾನಿಯಮವು ಅಯುಕ್ತವೋ ಯುಕ್ತವೋ, 'ತಂ ಪ್ರತ್ಯಂಚಮರ್ಚಿಷಾऽऽವಿಧ್ಯ ಮರ್ಮಣ್' (ಶತ್ರುವಾದ ರಾಕ್ಷಸನನ್ನು ನಿನ್ನ ಸಾಮರ್ಥ್ಯದಿಂದ ಗಾಯಗೊಳಿಸಿ....) ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟ ವೇಧಾದಿಗುಣವು ಎಲ್ಲರಿಗೂ ಉಪಾಸ್ಯವೋ, ಅಲ್ಲವೋ, ಎಲ್ಲರಿಗೂ ಆ ಉಪಾಸನೆಯ ಫಲದಲ್ಲಿ ಅಪೇಕ್ಷೆ ಮತ್ತು ಯೋಗ್ಯತೆಗಳು ಇರುತ್ತವೆಯೋ ಇಲ್ಲವೋ ಎಂಬ ವಿಚಾರಗಳು ಇಲ್ಲಿ ಮಾಡಲ್ಪಟ್ಟಿವೆ.

**ಪೂರ್ವಪಕ್ಷ** :- ವೇಧಾದಿಗುಣಗಳ ಉಪಾಸನೆಗೆ ದುಷ್ಟಜನನಿಗ್ರಹವೇ ಫಲ. ಅದು ಸರ್ವಸಜ್ಜನರಿಗೂ ಅಪೇಕ್ಷಿತವಾಗಿದದೆ. ಮತ್ತು 'ಪ್ರಾಣಸ್ತ್ವಾ ವಂಶೋ ಹಾಸ್ಯಸೀತ್ಯೇನಂ ಬ್ರೂಯಾತ್' (ನಿನ್ನನ್ನು ಪ್ರಾಣದೇವರು ಬಿಟ್ಟು ಹೋಗುತ್ತಾರೆ ಎಂಬುದಾಗಿ ಪ್ರಾಣೋಪಾಸಕನನ್ನು ನಿಂದಿಸುವವನಿಗೆ ಹೇಳಬೇಕು) ಎಂಬ ಶ್ರುತಿ ಮತ್ತು 'ಆತತಾಯಿನಮಾಯಾಂತಂ ಹನ್ಯಾ-ದೇವಾವಿಚಾರಯನ್' (ಮನೆಗೆ ಬೆಂಕಿಹಚ್ಚುವವನು, ವಿಷ ಹಾಕುವವನು ಇವರೇ ಮೊದಲಾದ ಅಪಕಾರಿಗಳು ಆತತಾಯಿಗಳೆನಿಸುತ್ತಾರೆ. ಇವರನ್ನು ವಿಚಾರ ಮಾಡದೇ ಕೊಲ್ಲಬೇಕು) ಎಂದು ಶ್ರುತಿಸ್ಮೃತಿಗಳಲ್ಲಿ ದುಷ್ಟಜನನಿಗ್ರಹ ಎಂಬ ಫಲವು ವಿಹಿತವಾದ್ದರಿಂದ ಯೋಗ್ಯತೆಯು ತಿಳಿದುಬರುತ್ತದೆ. ಆದ್ದರಿಂದ ವೇಧಾದಿಗಳು ಸರ್ವರಿಗೂ ಉಪಾಸ್ಯವಾದ್ದರಿಂದ ಚತು-ರ್ಗುಣೋಪಾಸನಾನಿಯಮವು ಸರಿಯಲ್ಲ.

**ಸಿದ್ಧಾಂತ** :-

ಭಿಂಧಿ ವಿದ್ಧಿ ಶೃಣೇಹೀತಿ ಫಲಭೇದೇನ ಸರ್ವಶಃ ।
ಯತ್ಯಾದೀನಾಂ ತೇಷ್ವಯೋಗಾನ್ನಾಧಿಕಾರ್ಯೈಕತಾ ಭವೇತ್ ॥

ಎಂಬ ಸ್ಮೃತಿಯಲ್ಲಿ ವೇಧಾದಿಗುಣೋಪಾಸನೆಯ ಫಲವು ಯತ್ಯಾ-ಶ್ರಮಿಗಳಿಗೆ ಯೋಗ್ಯವಲ್ಲ. ಅದು ಅವರು ಪಡೆಯುವ ಫಲಕ್ಕಿಂತ ವಿಲಕ್ಷಣ-ವಾದುದು ಎಂದು ಯತ್ಯಾದಿಗಳಿಗೆ ಯೋಗ್ಯತಾ ಇಲ್ಲವೆಂದು ಹೇಳಿದ್ದಾರೆ. ಅದರಿಂದ ಅಪೇಕ್ಷೆಯೂ ಇಲ್ಲವೆಂದು ಸಿದ್ಧವಾಗುತ್ತದೆ. ಪೂರ್ವಪಕ್ಷಿಗಳು ಉದಾಹರಿಸಿದಂತಹ 'ಪ್ರಾಣಸ್ತ್ವಾ ವಂಶೋ ಹಾಸ್ಯತಿ' ಎಂಬ ಶ್ರುತಿಯಾದರೂ 'ವಿಷ್ಣುನಾ ವಂಶಭೂತೇನ.... ಬ್ರೂಯಾತ್ ದೇವಾದಿರುತ್ತಮಃ' ಸ್ಮೃತಿಯ ಪ್ರಕಾರ ದೇವತೆಗಳಿಗೆ ಸಂಬಂಧಿಸಿದ್ದಾಗಿದೆ. 'ಆತತಾಯಿನಮಾಯಾಂತಂ' ಎಂಬ ಸ್ಮೃತಿಯಾದರೂ ಕ್ಷತ್ರಿಯರಿಗೆ ಸಂಬಂಧಪಟ್ಟದ್ದು. ಆದ್ದರಿಂದ ಆ ಶ್ರುತಿ ಸ್ಮೃತಿಗಳು ಎಲ್ಲರಿಗೂ ಫಲಯೋಗ್ಯತೆ ಇದೆ ಎನ್ನುವುದಕ್ಕೆ ನಿರ್ಣಾಯಕ-ವಾಗುವುದಿಲ್ಲ. ಹಾಗಾಗಿ ಎಲ್ಲರಿಗೂ ವೇಧಾದಿಗುಣೋಪಾಸನೆಯು ಇಲ್ಲವಾದ್ದರಿಂದ ಚತುರ್ಗುಣೋಪಾಸನಾನಿಯಮವು ಯುಕ್ತವಾಗಿದೆ.

## ॥ ಓಂ ಹಾನೌ ತೂಪಾಯನಶಬ್ದಶೇಷತ್ವಾತ್ಕುಶಾಚ್ಛಂದಸ್ತುತ್ಯುಪಗಾನವತ್ತದುಕ್ತಮ್ ಓಂ ॥ ೩-೩-೧೭

ಇದುವರೆಗೆ ಪೂರ್ವಾಧಿಕರಣಗಳಿಂದ ಉತ್ತಮ ಮಧ್ಯಮ, ಅಧಮ ಎಂಬ ಮೂರು ವಿಧ ಅಧಿಕಾರಿಗಳಿಗೆ ಉಪಾಸನೆಗೆ ಉಪಯುಕ್ತವಾದ ಆವರವರಿಗೆ ಯೋಗ್ಯವಾದ ಗುಣಗಳ ಉಪಸಂಹಾರವು (ಏಕತ್ರ ಕ್ರೋಡೀಕರಣವು) ನಿರ್ಣಯಿಸಲ್ಪಟ್ಟಿತು. ಇನ್ನು ಮುಂದೆ ಉಪಾಸನೆಯ ಫಲನಿಯಮ, ಯೋಗ್ಯತಾತಾರತಮ್ಯ, ಅಧಿಕಾರದ(ಅರ್ಹತೆಯ) ಪರಿಮಿತಿ, ಗುರುಗಳ ಅನುಗ್ರಹಪೂರ್ವಕವಾದ ಉಪದೇಶ ಮೊದಲಾದ ಸಹಕಾರಿಗಳನ್ನು ನಿರೂಪಿಸಲು ಈ ಅಧಿಕರಣದಲ್ಲಿ ಉಪಾಸನೆಯ ನಿರುಪಾಧಿಕತ್ವ ಎಂಬ ಸ್ವಭಾವವು ಹೇಳಲ್ಪಡುತ್ತದೆ (ನಿರುಪಾಧಿಕತ್ವವೆಂದರೆ ಫಲಾಪೇಕ್ಷೆ ಇಲ್ಲದೆ ಲೀಲಾರೂಪವಾಗಿ ಉಪಾಸನೆಯನ್ನು ಮಾಡುವುದು). ಇದೇ ಪೂರ್ವಾಧಿ-ಕರಣದ ಸಂಗತಿ. ಯಾವ ಉಪಾಸನೆಗೋಸ್ಕರ ಪೂರ್ವಾಧಿಕರಣಗಳಲ್ಲಿ ಗುಣೋಪಸಂಹಾರವು ನಿರ್ಣಯಿಸಲ್ಪಟ್ಟಿತೋ ಮತ್ತು ಯಾವ ಉಪಾಸನೆಗೆ 'ಅರ್ಥಸಾಮಾನ್ಯಾತ್' ಎಂಬಲ್ಲಿ ಹೇಳಲ್ಪಟ್ಟ ಸ್ವಸದೃಶಫಲಕತ್ವವು (ಉಪಾಸನೆಗೆ ಸದೃಶವಾದ ಫಲವು ಸಿಗುತ್ತದೆ ಎಂಬ ಪ್ರಮೇಯವು) 'ಸಮಾನ ಏವಂ ಚ' ಎಂಬಲ್ಲಿ ಸಮರ್ಥಿಸಲ್ಪಟ್ಟಿತೋ ಅಂತಹ ಉಪಾಸನೆಯನ್ನು ಮುಕ್ತನು ಮಾಡುತ್ತಾನೋ ಇಲ್ಲವೋ ಎಂಬುದೇ ವಿಚಾರ. ಅದಕ್ಕಾಗಿ ಮುಕ್ತನು ಮಾಡುತ್ತಾನೆ ಎಂಬುದಕ್ಕೆ ಪ್ರಮಾಣವಿಲ್ಲವೋ ಇದೆಯೋ, 'ಏತತ್ಸಾಮಗಾ-ಯನ್ನಾಸ್ತೇ' ಎಂಬ ಶ್ರುತಿಯು ಗೌಣಮುಕ್ತಿಪರವೋ ಅಥವಾ ಮುಖ್ಯ ಮುಕ್ತಿಪರನವೋ? ಹಾಗೆಯೇ ಮುಕ್ತನು ಉಪಾಸನೆಯನ್ನು ಮಾಡುತ್ತಾನೆ ಎಂಬಲ್ಲಿಯೂ ವಿಧಿನಿಮಿತ್ತದಿಂದ ಮಾಡುತ್ತಾನೋ ಅಥವಾ ಕುಶಾಚ್ಛಂದಸ್ತು-ತ್ಯುಪಗಾನದಂತೆ ಅಂದರೆ ಸ್ವೇಚ್ಛೆಯಿಂದ ದರ್ಭೆಯನ್ನು ಹಿಡಿದುಕೊಂಡು ಯಜುರ್ವೇದ ಸಾಮವೇದಗಳ ಅಧ್ಯಯನದಂತೆ ಸ್ವೇಚ್ಛೆಯಿಂದ ಲೀಲಾ-ರೂಪವಾಗಿ ಮಾಡುತ್ತಾನೋ, ಉಪಾಸನಾವಿಧಿಗಳಿಗೆ ಮುಕ್ತನಲ್ಲಿಯೂ ಪ್ರವೃತ್ತಿಯುಂಟೋ ಇಲ್ಲವೋ, ಮುಕ್ತಿಯಲ್ಲಿ ಹೊಂದಬೇಕಾದ ಫಲ-ವಿದೆಯೋ ಇಲ್ಲವೋ ಎಂಬುದೇ ಈ ಅಧಿಕರಣ ವಿಚಾರ ಪರಂಪರೆ.

**ಪೂರ್ವಪಕ್ಷ** :- ಮುಕ್ತನು ನಿಷ್ಕ್ರಿಯನಾಗಿರುತ್ತಾನಾದ್ದರಿಂದ ಸಾಮ-ಗಾನಾದಿಕ್ರಿಯೆಯು ಅವನಲ್ಲಿ ಕೂಡುವುದಿಲ್ಲ. 'ಏತತ್ಸಾಮ ಗಾಯನ್ನಾಸ್ತೇ' ಎಂಬ ಉಪಾಸನಾವಾಕ್ಯವು ಗೌಣಮುಕ್ತಿಯಪರವಾದ್ದರಿಂದ ಮುಕ್ತಿಯಲ್ಲಿ ಉಪಾಸನೆ ಇದೆ ಎನ್ನುವುದಕ್ಕೆ ಪ್ರಮಾಣವಿಲ್ಲ ಮತ್ತು ಉಪಾಸನೆಗೆ ಫಲವನ್ನು ಒಪ್ಪಿದರೆ ಮುಕ್ತನು ಉಪಾಸನೆಗಿಂತ ಪೂರ್ವದಲ್ಲಿ ಅಪೂರ್ಣನೆಂದಾಗುವ ಪ್ರಯುಕ್ತ ಅದಕ್ಕೆ ಮುಕ್ತಿಯಲ್ಲಿ ಫಲವಿರುವುದಿಲ್ಲ ಎನ್ನಬೇಕು. ನಿಷ್ಫಲ-ವಾದದ್ದನ್ನು ಮಾಡಬಾರದಾದ್ದರಿಂದ ಮುಕ್ತನು ಉಪಾಸನೆ ಮಾಡುವುದಿಲ್ಲ.

**ಸಿದ್ಧಾಂತ** :- 'ಏತತ್ಸಾಮಗಾಯನ್ನಾಸ್ತೇ' ಎಂಬ ಉಪಾಸನಾವಾಕ್ಯವು ಗೌಣಮುಕ್ತಿಪರವಲ್ಲ. ಏಕೆಂದರೆ ಪೂರ್ವದಲ್ಲಿ 'ಸಮ ಏವಂ ವಿತ್‌ಅಸ್ಮಾಲ್ಲೋ-ಕಾತ್‌ಪ್ರೇತ್ಯ' ಎಂಬುದಾಗಿ ಬ್ರಹ್ಮಜ್ಞಾನಿಗೆ ಚರಮದೇಹತ್ಯಾಗವನ್ನು ಹೇಳಿ ಆನಂತರ ಆನಂದಾಮಯಾಧಿಕರಣದಲ್ಲಿ ಹೇಳಿದಂತೆ 'ಏಕಮನ್ನಮಯ-ಮಾತ್ಮಾನಮುಪಸಂಕ್ರಮ್ಯ' ಇತ್ಯಾದಿಯಾಗಿ ಅನ್ನಮಯಾದಿ ಪಂಚ-ರೂಪಪ್ರಾಪ್ತಿಯನ್ನು ಹೇಳಿ ಬಳಿಕ 'ಏತತ್ಸಾಮಗಾಯನ್ನಾಸ್ತೇ' ಎಂಬುದಾಗಿ ಹೇಳಲಾಗಿದೆ. ಆದ್ದರಿಂದ ಮುಖ್ಯಮುಕ್ತಿಪರವೇ ಆಗಿದೆ ಹೊರತು ಗೌಣಮುಕ್ತಿಪರವಲ್ಲ.

ಮತ್ತು 'ಕೃಷ್ಣೋ ಮುಕ್ತೈರಿಜ್ಯತೇ' ಎಂಬ ಸ್ಮೃತಿಯಿಂದ ಮುಕ್ತರಿಗೆ ಯಜನಾದಿಕ್ರಿಯೆಯೇ ಇದೆ ಎಂದು ಸಿದ್ಧವಾದ್ದರಿಂದ ಉಪಾಸನೆಯು ಇದ್ದೇ ಇದೆ ಎಂದು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ. ಇದು ಒಂದು ಪ್ರಕಾರದ ವ್ಯಾಖ್ಯಾನ. ಅಥವಾ,

**ಪೂರ್ವಪಕ್ಷ** :- ಮುಕ್ತರೂ ಕುಡ ಮುಕ್ತಿಯಲ್ಲಿ ವಿಧಿ ಮತ್ತು ಫಲ-ಕಾಮನೆಗಳಿಂದಲೇ ಉಪಾಸನಾ ಮಾಡುತ್ತಾರೆ. ಏಕೆಂದರೆ 'ಬ್ರಹ್ಮವಿದಾಪ್ನೋತಿ ಪರಮ್' ಎಂಬುದಾಗಿ ಬ್ರಹ್ಮಜ್ಞಾನದಿಂದ ಮೋಕ್ಷವೆಂದು ಹೇಳಿದಾಗ ಅದು ಹೇಗೆ ಎಂದು ಜಿಜ್ಞಾಸೆ ಉಂಟಾದಾಗ, 'ಉಪಾಸೀತ' ಇತ್ಯಾದಿ ವಾಕ್ಯಗಳು ಪ್ರವೃತ್ತವಾಗಿವೆ. ಅವುಗಳಲ್ಲಿರುವ ಲಿಙ್ ಮೊದಲಾದ ವಿಧಿಪ್ರತ್ಯಯಗಳು ಉಪಾಸನಾದಿ ಅನುಷ್ಠಾನಗಳಿಗೆ ಇಷ್ಟಸಾಧನತ್ವವನ್ನು ಬೋಧಿಸುತ್ತವೆ. ಯದ್ಯಪಿ ಸಂಸಾರಬದ್ಧರನ್ನು ಕುರಿತು ಉಪಾಸನೆಯು ಮೋಕ್ಷರೂಪ

ಇಷ್ಟಸಾಧನ ಎಂದು ತಿಳಿಸುತ್ತಾರೆ. ಆದರೆ ಮುಕ್ತರನ್ನು ಕುರಿತು ಮುಕ್ತಿಯಲ್ಲಿ ಆನಂದೋದ್ರೇಕ ಎಂಬ ಇಷ್ಟವನ್ನು ಕುರಿತು ಸಾಧನ ಎಂದು ತಿಳಿಸಲು ಶಕ್ಯವಿಲ್ಲ. ಏಕೆಂದರೆ 'ಅಗ್ನಿಹೋತ್ರಾದಿ ತು.....' ಎಂಬ ಸೂತ್ರದಲ್ಲಿ ಆನಂದೋದ್ರೇಕವು ಪ್ರಾಚೀನಕರ್ಮದ ಫಲ ಎಂದು ಹೇಳುತ್ತಾರೆ. ಆದರೂ ಮುಕ್ತಿಯಲ್ಲಿಯೂ ಬರಬುದಾದ ಅನಿಷ್ಟಗಳ ಪರಿಹಾರರೂಪವಾದ ಇಷ್ಟಕ್ಕೆ ಸಾಧನವಾದ್ದರಿಂದ ಮುಕ್ತಿಯಲ್ಲಿಯೂ ಉಪಾಸನಾವಿಧಿಗಳಿಗೆ ಪ್ರವೃತ್ತಿ ಉಂಟು. ಇಲ್ಲದಿದ್ದರೆ ಉಪಾಸನೆ ಮಾಡುವುದೇ ಅಯುಕ್ತವಾಗುತ್ತದೆ. ಆದ್ದರಿಂದ ವಿಧಿ ಮತ್ತು ಫಲಕಾಮನಾದಿನಿಮಿತ್ತದಿಂದಲೇ ಮುಕ್ತಿಯಲ್ಲಿ ಉಪಾಸನಾ ಮಾಡುತ್ತಾರೆ.

**ಸಿದ್ಧಾಂತ :-** 'ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ' (ಮುಕ್ತನು ಎಲ್ಲಾ ಶೋಕಗಳನ್ನೂ ದಾಟಿರುತ್ತಾನೆ). ಎಂಬ ವಚನದ ಪ್ರಕಾರ ಎಲ್ಲಾ ಅರಿಷ್ಟಪರಿಹಾರಸಿದ್ಧವಾದ್ದರಿಂದ ಬರಬಹುದಾದ ಅರಿಷ್ಟಗಳ ಪ್ರಶ್ನೆ ಇಲ್ಲದಿರುವುದರಿಂದ ಮುಕ್ತರ ಉಪಾಸನೆಯು ಇಷ್ಟಸಾಧನವೆಂದು ಬೋಧಿಸಲು ಶಕ್ಯವಿಲ್ಲ. ಮತ್ತು ಮುಕ್ತರಿಗೂ ಉಪಾಸನಾವಿಧಿಯನ್ನು ಹೇಳಿದರೆ ಅವರು ಸಂಸಾರಿಗಳಂತೆ ಆಗುವ ಪ್ರಸಂಗ ಬರುವುದರಿಂದ ಮುಕ್ತಿಯಲ್ಲಿ ವಿಧಿಗಳಿಗೆ ಪ್ರವೃತ್ತಿ ಇಲ್ಲ. ವಿಧಿ ಮತ್ತು ಫಲಕಾಮನೆಗಳು ಇಲ್ಲದಿದ್ದರೂ – ನಿಯತವಾದ ಬ್ರಹ್ಮಯಜ್ಞ ಮುಗಿದ ಬಳಿಕವೂ ಸ್ವೇಚ್ಛೆಯಿಂದ ಬ್ರಾಹ್ಮಣರು ದರ್ಭೆಯನ್ನು ಹಿಡಿದುಕೊಂಡು ಮಂತ್ರ-ಸಾಮಗಳನ್ನು ಅಧ್ಯಯನ ಮಾಡುವಂತೆ ಸ್ವೇಚ್ಛಯಾ ಉಪಾಸನೆ ಮಾಡುತ್ತಾರೆ. ಮತ್ತು ಈಶ್ವರ ಕ್ರಿಯೆಯಂತೆ ಲೀಲಾರೂಪವಾಗಿ ಉಪಾಸನೆ ಮಾಡುತ್ತಾರೆ ಎಂದು ಕೂಡಿಸಬಹುದು. 'ತೀರ್ಣತರ್ತವ್ಯಭಾಗಾಶ್ಚ ಸ್ವೇಚ್ಛಯೋಪಾಸತೇ ಪರಮ್' ಎಂಬ ಸ್ಮೃತಿಯು ಇದಕ್ಕೆ ಪ್ರಮಾಣವಾಗಿದೆ.

**ಈ ಅಧಿಕರಣದ ಫಲ :-** ಉಪಾಸನೆಯು ಫಲಕಾಮನಾಪ್ರಯುಕ್ತವಾದ್ದರಿಂದ ಭಕ್ತಿಪೂರ್ವಕ ಉಪಾಸನೆ ಬೇಕಾಗಿಲ್ಲ. ಆದ್ದರಿಂದ ಪೂರ್ವಪಾದದಲ್ಲಿ ಹೇಳಲ್ಪಟ್ಟ ಭಕ್ತಿಯು ವ್ಯರ್ಥ ಎಂಬ ಆಕ್ಷೇಪವು ಪೂರ್ವಪಕ್ಷದ ಫಲ. ಅದರ ಸಮಾಧಾನವೇ ಸಿದ್ಧಾಂತದ ಫಲ.

ಇಲ್ಲಿ ಮೊದಲನೆಯ ಅಧಿಕರಣದ ರಚನೆಯು ಭಾಷ್ಯದಲ್ಲಿ 'ಏತತ್ಸಾಮಗಾಯನ್ನಾಸ್ತೇ' ಎಂಬ ಶ್ರುತಿಯ ಉದಾಹರಣೆಯಿಂದ ಮತ್ತು 'ಭವೇದಿಯಂ ಚಿಂತಾ' ಎಂಬ ಟೀಕಾವಾಕ್ಯದಿಂದ ಮತ್ತು 'ಮುಕ್ತೌ ಉಪಾಸನಭಾವೇ....' ಎಂಬ ನ್ಯಾಯವಿವರಣ ವಾಕ್ಯದಿಂದಲೂ ಸೂಚಿತವಾಗಿದೆ. ಎರಡನೆಯದ್ದೂ 'ಮುಕ್ತಸ್ಯೋಪಾಸನಾ ಕರ್ತವ್ಯಾ ನ ವಾ' ಎಂಬ ಭಾಷ್ಯಾದಿವಾಕ್ಯಗಳಿಂದ ಸೂಚಿತವಾಗಿದೆ. ಟೀಕೆಯಲ್ಲಿಯಾದರೂ ಭಾಷ್ಯ ಮತ್ತು ನ್ಯಾಯವಿವರಣಗಳಿಗೆ ಏಕವಾಕ್ಯತ್ವವನ್ನು ತೋರಿಸಲು ಎರಡನ್ನೂ ಮಿಶ್ರಮಾಡಿ ನಿರೂಪಿಸಲಾಗಿದೆ. ಆದ್ದರಿಂದ ಯಾವ ವಿರೋಧವೂ ಇಲ್ಲ.

ಅಥವಾ ಮುಕ್ತರು ಉಪಾಸನೆ ಮಾಡಬಾರದೋ, ಮಾಡಬೇಕೋ? ಮುಕ್ತಿಯಲ್ಲಿ ಉಪಾಸನೆ ಇದೆ ಎಂಬುದಕ್ಕೆ ಸಾಧಕವಿಲ್ಲವೋ, ಇದೆಯೋ? ಮುಕ್ತರಿಗೆ ವಿಧಿವಿಷಯತ್ವವು ಬಾಧಕವಾಗುತ್ತದಯೋ ಇಲ್ಲವೋ? ಎಂಬುದು ಇಲ್ಲಿ ವಿಚಾರ ಮಾಡಲ್ಪಟ್ಟಿದೆ.

**ಪೂರ್ವಪಕ್ಷ** :- ಮುಕ್ತನಿಗೆ ಉಪಾಸನೆ ಇದೆ ಎನ್ನುವುದಕ್ಕೆ ಪ್ರಮಾಣ ಇಲ್ಲವಾದ್ದರಿಂದ ಮುಕ್ತರು ಉಪಾಸನೆ ಮಾಡುವುದಿಲ್ಲ. ಪ್ರಮಾಣವಿದೆ ಎಂಬ ಪಕ್ಷವಿಟ್ಟುಕೊಂಡರೂ ವಿಧಿಯಿಂದ ಬದ್ಧರಾಗಿ ಮಾಡುತ್ತಾರೋ, ಅಬದ್ಧರಾಗಿ ಮಾಡುತ್ತಾರೋ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಯಾವುದನ್ನು ಒಪ್ಪಿಕೊಂಡರೂ ಉಪಾಸನೆಯಿಂದ ಫಲ ಪಡೆಯುತ್ತಾನೆ ಎಂದಾಗಿ ಮುಕ್ತನು ಅಪೂರ್ಣನೆಂದಾಗುತ್ತಾನೆ. ಮತ್ತು ವಿಧಿಬದ್ಧನಾಗಿ ಉಪಾಸನೆ ಮಾಡುತ್ತಾನೆ ಎಂಬ ಪಕ್ಷದಲ್ಲಿ ಸಂಸಾರಿಸಮಾನತೆ ಎಂಬ ಬಾಧಕವಿದೆ. ಅಬದ್ಧನಾಗಿ ಮಾಡುತ್ತಾನೆ ಎಂಬ ಪಕ್ಷದಲ್ಲಿ ಅವಿಹಿತಕರಣ ಎಂಬ ಬಾಧಕವಿದೆ. ಆದ್ದರಿಂದ ಮುಕ್ತರು ಉಪಾಸನೆ ಮಾಡುವುದಿಲ್ಲ.

**ಸಿದ್ಧಾಂತ** :- 'ಏತತ್ಸಾಮಗಾಯನ್ನಾಸ್ತೇ' ಎಂಬ ವಾಕ್ಯವು ಮುಕ್ತಿಯಲ್ಲಿ ಉಪಾಸನೆ ಇದೆ ಎಂಬುದಕ್ಕೆ ಸಾಧಕವಾಗುತ್ತದೆ. ಉಪಾಸನಾವಿಧಿಗಳು ಮುಕ್ತಿಗೋಸ್ಕರ ಇರುವುದರಿಂದ ಮುಕ್ತರಾದವರು ವಿಧಿವಿಷಯರಾಗುವುದಿಲ್ಲ. ಮುಕ್ತಿಯಲ್ಲಿ ಆನಂದವೃದ್ಧಿಯು ಪ್ರಾಚೀನವಾದ ನಿಷ್ಕಾಮಕರ್ಮದ ಫಲವಾದ್ದರಿಂದ ಅದು ಉಪಾಸನೆಯ ಫಲವಲ್ಲ. ಸರ್ವಾನಿಷ್ಟ-

ನಿವೃತ್ತಿಯೂ ಮುಕ್ತಿಕಾಲದಲ್ಲೇ ಆಗುವುದರಿಂದ ಮುಕ್ತಿಯಲ್ಲಿ ಉಪಾಸನೆಯಿಂದ ಹೊಂದಬೇಕಾದ ಫಲ ಯಾವುದೂ ಇರುವುದಿಲ್ಲ. ಆದರೂ ಬ್ರಾಹ್ಮಣರು ಸ್ವೇಚ್ಛೆಯಿಂದ ದರ್ಭಗ್ರಹಣ ಮಾಡಿ ಮಂತ್ರ - ಸಾಮ ಅಧ್ಯಯನ ಮಾಡುವಂತೆ ಮತ್ತು ಈಶ್ವರನು ಲೀಲಾರೂಪವಾಗಿ ಕ್ರಿಯೆಯನ್ನು ಮಾಡುವಂತೆ ಮುಕ್ತರು ಸ್ವೇಚ್ಛೆಯಿಂದ ಲೀಲಾರೂಪವಾಗಿ ಉಪಾಸನೆ ಮಾಡುವುದರಿಂದ ಅದು ಅವರ ಸ್ವಭಾವ ಎಂದು ಕೂಡಿಸಲು ಬರುತ್ತದೆ. ಹೀಗೆ ಯಾವ ಬಾಧಕವೂ ಇಲ್ಲದಿರುವುದರಿಂದ ಮುಕ್ತರು ಉಪಾಸನೆ ಮಾಡುತ್ತಾರೆ ಎಂದು ಒಂದೇ ವಿಧವಾಗಿ ಪೂರ್ವಪಕ್ಷ ಸಿದ್ಧಾಂತವನ್ನು ತಿಳಿಯಬೇಕು.

## ॥ ಓಂ ಛಂದತ ಉಭಯಾವಿರೋಧಾತ್ ಓಂ ॥ ೩-೩-೧೮

ಹಿಂದೆ ಉಪಾಸನಾ ವಿಚಾರ ಮಾಡಲಾಗಿದೆ. ಉಪಾಸನಾ ಪ್ರಸಂಗದಿಂದ ಸ್ಮೃತವಾದದ್ದು ಕರ್ಮ. ಕರ್ಮವೂ ಕೂಡ ಉಪಾಸನೆಯಂತೆ ಮುಕ್ತಿಯಲ್ಲಿ ನಿಯಮೇನ ಮಾಡಲ್ಪಡುತ್ತದೆ ಎಂದು ಈ ಅಧಿಕರಣದಲ್ಲಿ ಶಂಕಾ ಮಾಡುತ್ತಿರುವುದರಿಂದ ಸಂಗತಿಯಿದೆ.

ಹಿಂದೆ ಪ್ರಕೃತರಾದ ಮುಕ್ತರು, ಉಪಾಸನೆಯಂತೆ ಕರ್ಮವನ್ನೂ ನಿಯಮೇನ ಮಾಡುತ್ತಾರೋ ಇಲ್ಲವೋ ಎಂಬುದೇ ಸಂದೇಹ. ಮುಕ್ತರು ನಿಯಮೇನ ಕರ್ಮ ಮಾಡಬೇಕು ಎನ್ನುವುದಕ್ಕೆ ಏನಾದರೂ ಅನುಷ್ಠಾಪಕ (ಪ್ರಾಪಕ) ವಾದ ಪ್ರಮಾಣ ಇದೆಯೋ, ಇಲ್ಲವೋ? ಸುಶಕತ್ವ (ಅನುಷ್ಠಾನ ಶಕ್ತಿ ಸದ್ಭಾವ)ವೇ ಅನುಷ್ಠಾಪಕವಾದ ಪ್ರಮಾಣವೋ ಅಥವಾ ವಿಧ್ಯಾದಿಗಳೂ ಇರಬೇಕೋ? ಹೀಗೆ ಒಂದಕ್ಕೊಂದು ಪೂರಕವಾದ ವಿಚಾರ ಪ್ರಸಕ್ತವಾಗಿದೆ. ಮುಕ್ತರು ನಿಯಮೇನ ಕರ್ಮ ಮಾಡುತ್ತಾರೆ ಏಂದು ಪೂರ್ವಪಕ್ಷ ಏಕೆಂದರೆ ಸಾಧನೆಗಾಗಿ ಮಾಡುವ ಕರ್ಮಾನುಷ್ಠಾನಕ್ಕೆ ಕರ್ಮಜನ್ಯ ಫಲದ ಅಪೇಕ್ಷೆ ಹಾಗೂ ಕರ್ಮಾನುಷ್ಠಾನ ಸಾಮರ್ಥ್ಯ ಇವೆರಡೂ ಪ್ರಯೋಜಕ. ಆದರೆ, ಮುಕ್ತರಿಗೆ ಸಾಧನೆಯಿಂದ ಸಿಗಬೇಕಾದ ಫಲ ಸಿಕ್ಕಿದೆಯಾದ್ದರಿಂದ ಅವರಿಗೆ ಅರ್ಥಿತ್ವ ಇಲ್ಲ. ಆದರೂ ವೈದುಷ್ಯ ಸಿದ್ಧವಾಗಿದ್ದರೂ ಹೇಗೆ ಸ್ವೇಚ್ಛೆಯಿಂದ ಉಪಾಸನೆಯನ್ನು ಮಾಡುತ್ತಾರೋ ಹಾಗೇ ಕರ್ಮಕರಣ ಶಕ್ತಿ

ಇರುವುದರಿಂದ ಹಾಗೂ ಕರ್ಮವೂ ಭಗವತ್ ಪೂಜಾ ರೂಪವಾದ್ದರಿಂದ ಮುಕ್ತರೂ ನಿಯಮೇನ ಕರ್ಮ ಮಾಡುತ್ತಾರೆ ಎಂದು ಹೇಳಬೇಕು. ಕರ್ಮಾನುಷ್ಠಾನ ಶಕ್ತಿ ಹಾಗೂ ಕರ್ಮವು ಭಗವತ್ಪೂಜಾರೂಪವಾಗಿರುವುದು ಇದೇ ಅನುಷ್ಠಾಪಕ. ಹೀಗೆ ಅನುಷ್ಠಾಪಕವಾದ ಶಕ್ತಿಸದ್ಭಾವ ಹಾಗೂ ಭಗವತ್ಪೂಜಾರೂಪತ್ವ ಎಂಬುದು ಇದ್ದರೂ ನಿಯಮೇನ ಕರ್ಮಾನುಷ್ಠಾನ-ವನ್ನು ಒಪ್ಪದಿದ್ದರೆ ಉಪಾಸನೆಯನ್ನೂ ನಿಯಮೇನ ಮಾಡುವುದಿಲ್ಲ ಎನ್ನಬೇಕು. ಉಪಾಸನೆಗೂ ಇದೇ ಅನುಷ್ಠಾಪಕವಾದ್ದರಿಂದ.

**ಸಿದ್ಧಾಂತ** :- ಮುಕ್ತರು ನಿಯಮೇನ ಕರ್ಮ ಮಾಡುವುದಿಲ್ಲ. ಏಕೆಂದರೆ, ಕರ್ಮವು ಭಗವತ್ಪೂಜಾರೂಪವಾಗಿದ್ದರೂ, ಮುಕ್ತರಿಗೆ ಕರ್ಮ ಮಾಡುವ ಸಾಮರ್ಥ್ಯವಿದ್ದರೂ, ನಿಯಮೇನ ಕರ್ಮ ಮಾಡುವುದಕ್ಕೆ ಇದಿಷ್ಟೇ ಅನುಷ್ಠಾಪಕವಾಗಲು ಸಾಧ್ಯವಿಲ್ಲ. ಮತ್ತೇನೆಂದರೆ ಕರ್ಮವು ವಿಹಿತ (ವಿಧ್ಯುಕ್ತ) ವಾಗಿರಬೇಕು. ಕರ್ಮ ಮಾಡದಿದ್ದರೆ ಪ್ರತ್ಯವಾಯ (ಪಾಪ) ಬರುತ್ತದೆ ಎಂದಾಗಿರಬೇಕು. ಕರ್ಮಾನುಷ್ಠಾನದಿಂದ ಬರುವ ಫಲ ದೊರಕಿರಬಾರದು. ಇವೂ ಅನುಷ್ಠಾಪಕವಾಗಿರಬೇಕು. ಆದರೆ, ಮುಕ್ತರಿಗೆ ಈ ಮೂರೂ ಇಲ್ಲ. ಏಕೆಂದರೆ, ಮುಕ್ತರು ನಿಯಮೇನ ಕರ್ಮ ಮಾಡಬೇಕು ಎಂದು ಹೇಳುವ ವಿಧಿವಾಕ್ಯ ಇಲ್ಲ. ಕರ್ಮ ಮಾಡದಿದ್ದರೆ ಪ್ರತ್ಯವಾಯ-ವಿದೆ ಎಂದರೆ ಮೋಕ್ಷವು ಪುರುಷಾರ್ಥವೇ ಆಗುವುದಿಲ್ಲ. ಮುಕ್ತರಿಗೆ ಕರ್ಮಾನುಷ್ಠಾನದ ಫಲ ದೊರಕಿದೆ. ಹಾಗಾಗಿ ಮುಕ್ತರು ನಿಯಮೇನ ಕರ್ಮ ಮಾಡುವುದಿಲ್ಲ. ಕರ್ಮವು ಭಗವತ್‌ಪೂಜಾರೂಪವಾದ್ದರಿಂದ ಹಾಗೂ ಸಂಸಾರದಲ್ಲಿದ್ದಾಗ ಮಾಡಿದ ಅನುಷ್ಠಾನದ ವಾಸನಾ ಬಲದಿಂದ ಕೆಲವೊಮ್ಮೆ ಮಾತ್ರ ಕರ್ಮ ಮಾಡುತ್ತಾರೆ ಎಂಬುದೇ ಯುಕ್ತ.

ಆದರೆ, ಉಪಾಸನೆಯನ್ನು ಮಾತ್ರ ನಿಯಮೇನ ಮಾಡುತ್ತಾರೆ. ಏಕೆಂದರೆ, ಸಂಸಾರದಲ್ಲಿ ನಿಯಮೇನ ಅನಾರತವಾಗಿ ಉಪಾಸನೆ ಮಾಡಿದ್ದರ ವಾಸನಾ ಬಲವಾಗಿರುತ್ತದೆ. ಹಾಗೂ ಉಪಾಸನೆಯು ಜ್ಞಾನಸ್ವರೂಪವಾಗಿದೆ. ಮುಕ್ತರೂ ಜ್ಞಾನಸ್ವರೂಪರಾಗಿರುತ್ತಾರೆ. ಹಾಗಾಗಿ ಉಪಾಸನಾನಿಯಮ ಕೂಡುತ್ತದೆ.

ಇನ್ನು ಕರ್ಮವನ್ನು ಕದಾಚಿತ್ ಮಾಡುತ್ತಾರೆ. ಉಪಾಸನೆಯನ್ನು ನಿತ್ಯ ಮಾಡುತ್ತಾರೆ ಎನ್ನುವುದಕ್ಕೆ 'ಕದಾಚಿತ್ಕರ್ಮ ಕುರ್ವಂತಿ ಕದಾಚಿನ್ನೈವ ಕುರ್ವತೇ । ನಿತ್ಯಜ್ಞಾನಸ್ವೂಪತ್ವಾನ್ನಿತ್ಯಂ ಧ್ಯಾಯಂತಿ ಕೇಶವಮ್' ಎಂಬ ಸ್ಮೃತಿಯೂ ಇದೆ.

## ॥ ಓಂ ಅನಿಯಮಃ ಸರ್ವೇಷಾಮವಿರೋಧಾತ್ ಶಬ್ದಾನುಮಾನಾಭ್ಯಾಂ ಓಂ ॥ ೩-೩-೧೯

ಹಿಂದೆ, ಮೋಕ್ಷವು ಜ್ಞಾನದ್ವಾರಾ ಕರ್ಮದ ಫಲವಾಗಿದೆ. ಅಂತಹ ಮೋಕ್ಷವು ಪ್ರಾಪ್ತವಾಗಿದೆಯಾದ್ದರಿಂದ ನಿಯಮೇನ ಕರ್ಮಾನುಷ್ಠಾನವಿಲ್ಲ ಎಂದು ಹೇಳಲಾಗಿದೆ. ಹಾಗಾದರೆ ಎಲ್ಲಾ ಜ್ಞಾನಿಗಳಿಗೂ ಮೋಕ್ಷರೂಪ ಫಲಪ್ರಾಪ್ತಿ ಇದೆಯೋ ಅಥವಾ ಕೆಲವರಿಗೆ ಮಾತ್ರವೋ ಎಂಬ ವಿಚಾರ ಈ ಅಧಿಕರಣದಲ್ಲಿ ಮಾಡುತ್ತಿರುವುದರಿಂದ ಸಂಗತಿಯಿದೆ.

ಅಥವಾ 'ಓಂ ಹಾನೌ ತೂಪಾಯನ ಶಬ್ದಶೇಷತ್ವಾತ್ ಓಂ' ಎಂಬಲ್ಲಿ ಉಪಾಸನಾ ವಿಧಿಗಳು ಜ್ಞಾನದ್ವಾರಾ ಮೋಕ್ಷವಾಕ್ಯಶೇಷವಾಗಿದೆ ಎಂದು ಹೇಳಿದೆ. ಅದು ಸರಿಯಲ್ಲ. ಏಕೆಂದರೆ, ಜ್ಞಾನ ಇದ್ದರೂ ಕೆಲವರಿಗೆ ಮೋಕ್ಷವಿಲ್ಲವಾದ್ದರಿಂದ. ಈ ಅಭಿಪ್ರಾಯದಿಂದ ಎಲ್ಲ ಜ್ಞಾನಿಗಳಿಗೂ ಮೋಕ್ಷ ಇದೆಯೋ ಇಲ್ಲವೋ? ಎಂದು ವಿಚಾರ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಸಂಗತಿಯಿದೆ.

**ಪ್ರಶ್ನೆ :-** ಈ ಅಧಿಕರಣಕ್ಕೆ 'ಓಂ ಹಾನೌ ತು ಉಪಾಯನ ಶಬ್ದ-ಶೇಷತ್ವಾತ್' ಎಂಬ ಸೂತ್ರದಿಂದ ಸಂಗತಿ ಇರುವುದಾದರೆ ಆ ಅಧಿಕರಣದ ನಂತರವೇ ಈ ಅಧಿಕರಣ ಆರಂಭ ಮಾಡಬೇಕಾಗಿತ್ತು. ಮಧ್ಯದಲ್ಲಿ ಛಂದಾಧಿಕರಣವನ್ನು ಹೇಳಿದ್ದು ಸರಿಯಲ್ಲ?

**ಉತ್ತರ :-** ಛಂದಾಧಿಕರಣವು ಪ್ರಾಸಂಗಿಕವಾಗಿ ಬಂದಿದೆಯಾದ್ದರಿಂದ ದೋಷವಿಲ್ಲ. ಪ್ರಾಸಂಗಿಕವಾದದ್ದು ವ್ಯವಧಾಯಕವಾಗುವುದಿಲ್ಲ.

'ಓಂ ತಲ್ಲಕ್ಷಣಾರ್ಥೋಪಲಬ್ಧೇಃ' ಎಂಬಲ್ಲಿ 'ಅರ್ಥ' ಶಬ್ದದಿಂದ ಪ್ರಕೃತವಾದ ಮೋಕ್ಷವು ಕೆಲವು ಜ್ಞಾನಿಗಳಿಗೆ ಮಾತ್ರ ಲಭಿಸುತ್ತದೆಯೋ ಅಥವಾ ಎಲ್ಲಾ ಜ್ಞಾನಿಗಳಿಗೂ ಲಭಿಸುತ್ತದೆಯೋ? ಜ್ಞಾನಿಗಳಲ್ಲೂ ಉಪಾಸಕರಲ್ಲಿದ್ದಂತೆ ಯೋಗ್ಯ ಅಯೋಗ್ಯ ಎಂಬ ವಿಭಾಗ ಇದೆಯೋ ಇಲ್ಲವೋ? ಜ್ಞಾನಿಗಳಲ್ಲಿ ಯೋಗ್ಯ, ಅಯೋಗ್ಯ ವಿಭಾಗ ಇಲ್ಲ ಎನ್ನುವುದಕ್ಕೆ ಜ್ಞಾಪಕ (ಪ್ರಮಾಣ) ಇದೆಯೋ, ಇಲ್ಲವೋ? ಹೀಗೆ ಪರಸ್ಪರ ಪೂರಕವಾದ ವಿಚಾರಗಳು ಪ್ರಸಕ್ತವಾಗಿವೆ.

ಕೆಲವು ಜ್ಞಾನಿಗಳಿಗೆ ಮಾತ್ರ ಮೋಕ್ಷ, ಎಲ್ಲರಿಗೂ ಇಲ್ಲ ಎಂಬುದೇ ಪೂರ್ವಪಕ್ಷ. ಏಕೆಂದರೆ ಜ್ಞಾನಿಗಳಲ್ಲೂ ಕೆಲವರು ಮೋಕ್ಷಯೋಗ್ಯರಲ್ಲದೇ ಇರುವವರು ಇರಲು ಸಾಧ್ಯವಿದೆ.

'ಕಾಮಂ ಭವೇಮ ವೃಜಿನೈರ್ನಿರಯೇಷು ನಷ್ಟಾಶ್ಚೇತೋಽಲಿವದ್ಯರ್ಹಿತೇ ಪದಯೋ ರಮೇತ' (ನಾವು ನರಕದಲ್ಲಿದ್ದರೂ ಮನಸ್ಸು ನಿನ್ನ ಪಾದಗಳಲ್ಲೇ ಆಸಕ್ತವಾಗಿರಲಿ) ಎಂದು ಭಾಗವತ ತೃತೀಯಸ್ಕಂಧದಲ್ಲಿ ಬಂದಿರುವ ಸನತ್ಕುಮಾರರ ಮಾತೂ ಜ್ಞಾನಿಗಳಲ್ಲಿ ಅಯೋಗ್ಯರಿದ್ದಾರೆ ಎಂಬುದನ್ನೇ ಸಮರ್ಥಿಸುತ್ತಿದೆ.

ಉಪಾಸಕರಲ್ಲಿ ಹೇಗೆ ಅಯೋಗ್ಯರಿಗೆ ಸರ್ವಗುಣೋಪಸಂಹರ ಇಲ್ಲವೋ ಅದೇ ರೀತಿ ಜ್ಞಾನಿಗಳಲ್ಲೂ ಅಯೋಗ್ಯರಿಗೆ ಮೋಕ್ಷವಿಲ್ಲ.

**ಪ್ರಶ್ನೆ** :- ಉಪಾಸಕರಲ್ಲಿ ಸರ್ವಗುಣೋಪಾಸಂಹಾರಕ್ಕೆ ಯೋಗ್ಯರಾದ ಉಪಾಸಕರು ಯೋಗ್ಯರಲ್ಲದ ಉಪಾಸಕರು ಎಂದಿದ್ದಾರೆ. ಆದರೆ, ಜ್ಞಾನಿಗಳಲ್ಲಿ ಮುಕ್ತಿಯೋಗ್ಯರು ಅಯೋಗ್ಯರು ಎಂಬ ವಿಭಾಗ ಇಲ್ಲ. ಸನತ್ಕುಮಾರರ ಮಾತು, ಭಗವತ್ಪಾದದಲ್ಲಿ ಮನಸ್ಸು ರತವಾಗಿರಬೇಕು ಎಂಬುದರ ಸ್ತುತಿಪರ-ವಾಗಿದೆ ಅಷ್ಟೇ. ಜ್ಞಾನಿಗಳು ನರಕದಲ್ಲಿ ಬೀಳುತ್ತಾರೆಂದು ಅಭಿಪ್ರಾಯವಲ್ಲ.

**ಪರಿಹಾರ** :- ಉಪಾಸಕರಲ್ಲಿ ಸರ್ವಗುಣೋಪಸಂಹಾರ ಯೋಗ್ಯರು ಅಯೋಗ್ಯರು ಎಂಬ ವಿಭಾಗವಿದೆ. ಜ್ಞಾನಿಗಳಲ್ಲಿ ಮಾತ್ರ ಯೋಗ್ಯಾಯೋಗ್ಯ-ವಿಭಾಗವಿಲ್ಲ ಎನ್ನುವುದಕ್ಕೆ ಯಾವುದೇ ಜ್ಞಾಪಕವಿಲ್ಲ.

**ಸಿದ್ಧಾಂತ :-** ಎಲ್ಲಾ ಜ್ಞಾನಿಗಳಿಗೂ ಮೋಕ್ಷವಿದೆ. ಕೆಲವರಿಗೆ ಮಾತ್ರ ಎಂಬ ನಿಯಮವಿಲ್ಲ. ಏಕೆಂದರೆ, 'ಸರ್ವೈರ್ಗುಣೈರ್ಬ್ರಹ್ಮಣ್ಯೈವ ಹ್ಯುಪಾಸ್ಯೋ' ಎಂಬುದಾಗಿ ನಿಷೇಧ ಇರುವುದರಿಂದ ಸರ್ವಗುಣೋಪಸಂಹಾರದ ವಿಷಯದಲ್ಲಿ ಯೋಗ್ಯ, ಅಯೋಗ್ಯ ಎಂಬ ವಿಭಾಗವಿದೆ. ಆದರೆ ಜ್ಞಾನಿಗಳಲ್ಲಿ ಕೆಲವರಿಗೆ ಮುಕ್ತಿಯನ್ನು ನಿಷೇಧ ಮಾಡುವ ಪ್ರಮಾಣವಿಲ್ಲ. ಹಾಗಾಗಿ ಎಲ್ಲರಿಗೂ ಮೋಕ್ಷವಿದೆ ಎಂದು ಒಪ್ಪಬೇಕು. ಜೊತೆಗೆ 'ನ ಕಶ್ಚಿತ್‌ಬ್ರಹ್ಮವಿತ್ ಸ್ಮೃತಿಮನುಭವತಿ ಮುಕ್ತೋ ಹ್ಯೇಷ ಭವತಿ' ಎಂಬ ಶ್ರುತಿಯು ಸರ್ವಜ್ಞಾನಿಗಳಿಗೂ ನಿಯಮೇನ ಮೋಕ್ಷವಿದೆ ಎಂದು ಹೇಳುತ್ತಿದೆ.

ಜೊತೆಗೆ, ವಿಮತಿ ವಿಷಯರಾದ (ಮೋಕ್ಷ ಇದೆಯೋ ಇಲ್ಲವೋ ಎಂಬ ವಿಪ್ರತಿಪತ್ತಿಗೆ ವಿಷಯೀಭೂತರಾದ) ಎಲ್ಲಾ ಜ್ಞಾನಿಗಳಿಗೂ, ನಿಯಮೇನ ಮೋಕ್ಷವಿದೆ. ಅವರು ಜ್ಞಾನಿಗಳಾದ್ದರಿಂದ ಮೋಕ್ಷಯೋಗ್ಯರೆಂದು ಒಪ್ಪಿದ ಜ್ಞಾನಿಗಳಂತೆ. ಎಂಬ ಬಾಧರಹಿತವಾದ ಶ್ರುತಿಮೂಲಕವಾದ ಅನುಮಾನದಿಂದಲೂ ಜ್ಞಾನಿಗಳೆಲ್ಲರಿಗೂ ಮೋಕ್ಷವಿದೆ ಮೋಕ್ಷಕ್ಕೆ ಅಯೋಗ್ಯರು ಎಂಬುದು ಇಲ್ಲ ಎಂದು ನಿಶ್ಚಯ ಉಂಟಾಗುತ್ತದೆ. ಮೋಕ್ಷವು ಸರ್ವಜ್ಞಾನಿಗಳಿಂದಲೂ ಹೊಂದಲ್ಪಡುವುದರಿಂದ ಮೋಕ್ಷಸಾಧನವಾದ ಉಪಾಸನೆಯನ್ನು ಯಾವುದೇ ಸಂದೇಹವಿಲ್ಲದೇ ಮಾಡಬೇಕು. ಆದ್ದರಿಂದ ಉಪಾಸನಾವಿಧಿಗಳಿಗೆ ಉಪಾಯನ (ಮೋಕ್ಷ) ವಾಕ್ಯಶೇಷತ್ವ ಕೂಡುತ್ತದೆ.

## ||ಓಂ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಮ್ ಓಂ||
## ೩-೩-೨೦

ಹಿಂದೆ ಹೇಳಿದಂತೆ, ಎಲ್ಲಾ ಜ್ಞಾನಿಗಳಿಗೂ ಯಾವುದೇ ನಿಯಮವಿಲ್ಲದೇ ಮೋಕ್ಷವಾಗುತ್ತದೆ. ಎಂದರೆ ಯೋಗ್ಯತಾವಿಶೇಷ ಎಂಬುದು ವ್ಯರ್ಥವೇ ಆಯಿತು. ಫಲತಾರತಮ್ಯಕ್ಕೋಸ್ಕರ ಯೋಗ್ಯತಾ ವಿಶೇಷವನ್ನು ಒಪ್ಪಲೇಬೇಕು. ಹಾಗಾಗಿ ಅದು ವ್ಯರ್ಥವಲ್ಲ. ಎಂದರೆ, ಯೋಗ್ಯತಾ ವಿಶೇಷಕ್ಕೆ ಪ್ರಯೋಜಕ (ಜ್ಞಾಪಕ)ವಾದ ಫಲತಾರತಮ್ಯವನ್ನು ಬೇರೆ ರೀತಿಯಿಂದಲೂ ಕೂಡಿಸಬಹುದು. ಹಾಗಾಗಿ ಯೋಗ್ಯತಾವಿಶೇಷ ಎಂಬುದು ವ್ಯರ್ಥವೇ ಎಂದು ಹಿಂದೆ ಹೇಳಿದ್ದಕ್ಕೆ (ಸರ್ವ ಜ್ಞಾನಿಗಳಿಗೂ ಮೋಕ್ಷ ಸಿದ್ಧ) ತರ್ಕ ಪ್ರತಿಹತಿ (ವಿರೋಧ) ಯನ್ನು ಶಂಕಾ ಮಾಡುತ್ತಿರುವುದರಿಂದ ಸಂಗತಿಯಿದೆ.

ಯಾವ ಉಪಾಸಕರಿಗೆ ಜ್ಞಾನ ಬಂದ ಮೇಲೆ ನಿಯಮೇನ ಮೋಕ್ಷ-ವಾಗುತ್ತದೋ ಅಂತಹ ಉಪಾಸಕರಲ್ಲಿ ಯೋಗ್ಯತಾತಾರತಮ್ಯ ಇದೆಯೋ ಇಲ್ಲವೋ? ಉಪಾಸಕರಲ್ಲಿನ ಯೋಗ್ಯತಾತಾರತಮ್ಯಕ್ಕೆ ಪ್ರಮಾಣ ಇದೆಯೋ ಇಲ್ಲವೋ? ಮುಕ್ತಿಯಲ್ಲಿರುವ ಆನಂದತಾರತಮ್ಯವನ್ನು ಉಪಾಸನಾದಿ ಪ್ರಯತ್ನ ತಾರತಮ್ಯದಿಂದಲೇ ಕೂಡಿಸಬಹುದೋ ಅಥವಾ ಯೋಗ್ಯತಾ ತಾರತಮ್ಯವನ್ನು ಒಪ್ಪಲೇ ಬೇಕೋ? ಮುಕ್ತಿಯಲ್ಲಿ ಆನಂದತಾರ-ತಮ್ಯವಿದೆ ಎನ್ನುವುದಕ್ಕೆ ಸಾಧಕವಿಲ್ಲ, ಬಾಧಕವಿದೆ ಎಂತಲೋ ಅಥವಾ ಸಾಧಕವಿದೆ ಬಾಧಕವಿಲ್ಲ ಎಂತಲೋ? ಹೀಗೆ ಒಂದಕ್ಕೊಂದು ಪೂರಕವಾದ ವಿಚಾರ ಪ್ರಸ್ತುವಾಗಿದೆ.

ಉಪಾಕಸರಲ್ಲಿ ಯೋಗ್ಯತಾತಾರತಮ್ಯ ಇಲ್ಲ ಎಂದೇ ಪೂರ್ವಪಕ್ಷ ಏಕೆಂದರೆ, ಮುಕ್ತಿಯಲ್ಲಿ ಆನಂದತಾರತಮ್ಯವಿದೆ ಎನ್ನುವುದಕ್ಕೆ ಸಾಧಕ ಪ್ರಮಾಣವಿಲ್ಲ. 'ವೃದ್ಧಿಹ್ರಾಸಭಾಕ್ತ್ವಂ' ಎಂಬ ಅಧಿಕರಣದ ಗುಣಸೂತ್ರವಾದ 'ದರ್ಶನಾಚ್ಚ' ಎಂಬಲ್ಲಿ ಉಪಾತ್ತವಾದ 'ಅಥಾತ ಆನಂದಸ್ಯ ಮೀಮಾಂಸಾ ಭವತಿ' ಎಂಬ ಶ್ರುತಿ ಸಾಧಕವಾಗಿ ಇದೆಯಲ್ಲಾ? ಎಂಧರೆ ಈ ಶ್ರುತಿಯು ಸಂಸಾರಿಪರ. ಹಾಗಾಗಿ ಇದು ಮೋಕ್ಷದಲ್ಲಿರುವ ಆನಂದತಾರತಮ್ಯಕ್ಕೆ ಸಾಧಕವಾಗುವುದಿಲ್ಲ. ಜೊತೆಗೆ ಮೋಕ್ಷದಲ್ಲಿ ಆನಂದತಾರತಮ್ಯ ಒಪ್ಪಿದರೆ ಮುಕ್ತರಲ್ಲೂ ದ್ವೇಷ, ಈರ್ಷಾ ಇತ್ಯಾದಿಗಳನ್ನು ಒಪ್ಪಬೇಕಾಗುತ್ತದೆ ಎಂಬ ಬಾಧಕವೂ ಇದೆ. ಹಾಗಾಗಿ ಮುಕ್ತಿಯಲ್ಲಿ ತಾರತಮ್ಯವೇ ಕೂಡುವುದಿಲ್ಲ. ಒಂದು ವೇಳೆ ತಾರತಮ್ಯವನ್ನು ಒಪ್ಪಿದರೂ ಅದು ಹೇಗೆ ಧಾನ್ಯೋತ್ಪತ್ತಿ ಎಂಬ ಫಲತಾರತಮ್ಯವು ಕೃಷ್ಯಾದಿ ಪ್ರಯತ್ನತಾರತಮ್ಯದಿಂದ ಎಂದು ಲೋಕದಲ್ಲಿ ಕಂಡಿದೆಯೋ, ಹಾಗೆ ಉಪಾಸನಾದಿಪ್ರಯತ್ನತಾರತಮ್ಯದಿಂದ ಎಂದು ಕೂಡಿಸಬಹುದು. ಹೀಗಾಗಿ ಆನಂದತಾರತಮ್ಯ ಇದ್ದರೂ ಅದು ಯೋಗ್ಯತಾ ತಾರತಮ್ಯಕ್ಕೆ ಪ್ರಯೋಜಕ (ಹೇತು) ವಾಗುವುದಿಲ್ಲ. ಆದ್ದರಿಂದ, ಯಾವುದೇ ಪ್ರಮಾಣವಿಲ್ಲವಾದ್ದರಿಂದ ಉಪಾಸಕರಲ್ಲಿ ಯೋಗ್ಯತಾತಾರತಮ್ಯ ಇಲ್ಲ ಎಂದೇ ಹೇಳಬೇಕು.

**ಸಿದ್ಧಾಂತ** :- ಉಪಾಸಕರಲ್ಲಿ ಯೋಗ್ಯತಾತಾರತಮ್ಯ ಇದ್ದೇ ಇದೆ. ಎಕೆಂದರೆ, ಆನಂದಶ್ರುತಿ (ಅಥಾತ ಆನಂದಸ್ಯ ಮೀಮಾಂಸಾ ಭವತಿ)ಯು

ಮುಕ್ತಿಯಲ್ಲಿ ತಾರತಮ್ಯಕ್ಕೆ ಪ್ರಮಾಣವಾಗಿದೆ. ಈ ಶ್ರುತಿಯು ಅಮುಕ್ತ (ಸಂಸಾರಿ)ವಿಷಯ ಎಂದು ಹಿಂದೆ ಹೇಳಿದ್ದೇವಲ್ಲಾ? ಎಂದರೆ ಅದು ತಪ್ಪು. ಏಕೆಂದರೆ, 'ನಾನಾವಿಧಾ ಜೀವಸಂಘಾ ವಿಮುಕ್ತೌ' ಎಂಬ ಮುಕ್ತಿಯಲ್ಲಿ ತಾರತಮ್ಯ ಬೋಧಕವಾದ ವಿಶೇಷ ಶ್ರುತಿ ಇರುವುದರಿಂದ, ಹಾಗೂ 'ನರಾದಿಬ್ರಹ್ಮಪರ್ಯಂತಂ ವಿಮುಕ್ತಾನಾಂ ಶತೋಚ್ಚ್ರಯಃ । ಅಪ್ಯಾನಂದೇ ಮಿಥೋಪ್ಯುಕ್ತಃ ತ್ವಧ್ವರ್ಯೂಣಾಂ ಶ್ರುತೌ ಪೃಥಕ್' (ಮುಕ್ತರಾದ ನರಾದಿ-ಬ್ರಹ್ಮಪರ್ಯಂತ ಜೀವರಿಗೆ ನೂರುಪಟ್ಟು ಹೆಚ್ಚೆಚ್ಚು ಆನಂದವಿದೆ) ಎಂದು ಹೇಳುವ ಸ್ಮೃತಿಯಿರುವದರಿಂದಲೂ ಆನಂದಶ್ರುತಿಯು ಅಮುಕ್ತ-ವಿಷಯವಲ್ಲ, ಮುಕ್ತವಿಷಯವೇ ಎಂದು ಸಿದ್ಧವಾಗುವುದು.

ಇನ್ನು ಆನಂದತಾರತಮ್ಯ ಒಪ್ಪಿದರೆ ದ್ವೇಷಾದಿ ಬಾಧಕವನ್ನು ಹೇಳಿದ್ದೂ ಸರಿಯಲ್ಲ. ಏಕೆಂದರೆ, ದ್ವೇಷ, ಈರ್ಷ್ಯೆ ಇತ್ಯಾದಿಗಳಿಗೆ ತಾರತಮ್ಯ ಪ್ರಯೋಜಕವಲ್ಲ. ಮತ್ತೇನೆಂದರೆ, ವಿಷಯಲಂಪಟತ್ವ, ಮಾತ್ಸರ್ಯ ಇತ್ಯಾದಿ ದೋಷಗಳನ್ನು ಹೊಂದಿರುವುದೇ ಪ್ರಯೋಜಕ. ಜೊತೆಗೆ ಅನುಪಕಾರಿತ್ವವೂ ಪ್ರಯೋಜಕ. ಆದರೆ, ಮುಕ್ತರು ಬ್ರಹ್ಮಜ್ಞಾನಿಗಳಾಗಿದ್ದರಿಂದ ಅವರಲ್ಲಿ ವಿಷಯಲಂಪಟತ್ವ, ಮಾತ್ಸರ್ಯ ಇತ್ಯಾದಿ ದೋಷಗಳಿರುವುದಿಲ್ಲ. ಹಾಗಾಗಿ ಅದರಿಂದ ಹುಟ್ಟುವ ದ್ವೇಷ, ಈರ್ಷ್ಯಾದಿಗಳೂ ಇರಲು ಸಾಧ್ಯವಿಲ್ಲ. ಜೊತೆಗೆ, ಮೋಕ್ಷದಲ್ಲೂ ಉತ್ತಮರಿಂದ ಅಧಮರಿಗೆ ಜ್ಞಾನಾದಿ ಉಪಕಾರವಾಗುತ್ತದೆ-ಯಾದ್ದರಿಂದ ಅನುಪಕಾರಿತ್ವದಿಂದಲೂ ದ್ವೇಷಾದಿಗಳು ಹುಟ್ಟಲು ಸಾಧ್ಯವಿಲ್ಲ. ಹಾಗಾಗಿ ಮುಕ್ತಿಯಲ್ಲಿ ತಾರತಮ್ಯವಿದೆ ಎಂಬುದು ಯುಕ್ತವೇ ಆಗಿದೆ.

ಈ ಆನಂದತಾರತಮ್ಯವನ್ನು ಅನಾದಿಯೋಗ್ಯತಾತಾರತಮ್ಯದಿಂದಲೇ ಕೂಡಿಸಬೇಕೇ ಹೊರತು ಬೇರೆಯದರಿಂದ ಸಾಧ್ಯವಿಲ್ಲ. ಹಾಗಾಗಿ ಯೋಗ್ಯತಾತಾರತಮ್ಯವೂ ಸಿದ್ಧವಾಗುತ್ತದೆ.

ಉಪಸನಾಪ್ರಯತ್ನ ತಾರತಮ್ಯದಿಂದ ಫಲತಾರತಮ್ಯವನ್ನು ಕೂಡಿಸ-ಬಹುದೆಂದು ಹಿಂದೆ ಹೇಳಿದೆಯಲ್ಲಾ? ಎಂದರೆ, ಅದು ಸರಿಯಲ್ಲ. ಏಕೆಂದರೆ, 'ಸ್ವಾಧಿಕಾರಾಧಿಕೋ ಯತ್ನಃ ಪ್ರಾಯಶೋ ನೋಪಪದ್ಯತೇ । ಕಥಂಚಿದಧಿಕೇ ಯತ್ನೇ ದೋಷಃ ಕಶ್ಚಿತ್ಸಮಾಪತೇತ್' (ಅಧಿಕಾರಕ್ಕೆ (ಯೋಗ್ಯತಾ) ಮೀರಿದ

ಯತ್ನ ಮಾಡುವುದಿಲ್ಲ. ಮಾಡಿದರೂ ಅದು ದೋಷಕ್ಕೆ ಕಾರಣವಾಗುತ್ತದೆ). ಎಂಬ ಪ್ರಮಾಣದಿಂದ ಉಪಾಸನಾ ಪ್ರಯತ್ನತಾರತಮ್ಯವೂ ಯೋಗ್ಯತಾ-ತಾರತಮ್ಯವನ್ನೇ ಅವಲಂಬಿಸಿದೆ. ಹಾಗಾಗಿ ಉಪಾಸಕರಲ್ಲಿ ಯೋಗ್ಯತಾ-ತಾರತಮ್ಯದ ಅನಿಯಮವಿಲ್ಲ. ನಿಯಮವೇ (ವ್ಯವಸ್ಥೆ) ಇದೆ ಎಂದು ಸಿದ್ಧವಾಯಿತು. (ಯೋಗ್ಯತೆಗೆ ಅನುಸಾರಿಯಾದ ಉಪಾಸನೆ - ಇದೇ ನಿಯಮ)

**ಅಧಿಕರಣದ ಫಲ :-** 'ಓಂ ಪ್ರಾಪ್ತೇಶ್ಚ ಸಮಂಜಸಂ ಓಂ' ಎಂಬಲ್ಲಿ ಹೇಳಿದ ಉಪಾಸಕರಲ್ಲಿನ ಯೋಗ್ಯತಾ ತಾರತಮ್ಯದ ಸಮರ್ಥನೆಯೇ ಈ ಅಧಿಕರಣದ ಸಿದ್ಧಾಂತ ಫಲ.

## ॥ ಓಂ ಇಯದಾಮನನಾತ್ ಓಂ ॥ ೩-೩-೨೧

ಹಿಂದೆ ಹೇಳಲ್ಪಟ್ಟ ಯೋಗ್ಯತಾ ತಾರತಮ್ಯವು 'ನಿರವಧಿಕ' ಎಂದು ಶಂಕಾ ಮಾಡಿಕೊಂಡು ಸಾವಧಿಕತ್ವವನ್ನು ಸಮರ್ಥನೆ ಮಾಡುತ್ತಿರುವುದರಿಂದ ಸಂಗತಿಯಿದೆ.

ಛಾಂದೋಗ್ಯದ ಏಳನೇ ಅಧ್ಯಾಯದಲ್ಲಿ ನಾಮ - ವಾಕ್ - ಮನಸ್ - ಸಂಕಲ್ಪ - ಚಿತ್ತ - ಧ್ಯಾನ - ವಿಜ್ಞಾನ - ಬಲ - ಅನ್ನ - ಅಪ್ - ತೇಜಸ್-ಆಕಾಶ - ಸ್ಮರ - ಆಶಾ - ಪ್ರಾಣ ಈ ಶಬ್ದಗಳಿಂದ ವಾಚ್ಯರಾದ ಉಷಾ - ಸ್ವಾಹಾ - ಪರ್ಜನ್ಯ - ಮಿತ್ರ - ಅಗ್ನಿ - ವರುಣ - ಉಮಾ - ರುದ್ರ - ವಾಣೀ - ಮಾರುತ ಈ ದೇವತೆಗಳು ಹಿಂದಿನವರಿಗಿಂತ ಮುಂದೆ, ಮುಂದಿನವರು ಅಧಿಕಯೋಗ್ಯತೆ ಉಳ್ಳವರು ಎಂದು ಹೇಳಿದೆ. ಹಿಂದೆ ಯೋಗ್ಯತಾ-ತಾರತಮ್ಯ ಉಳ್ಳವರು ಎಂದು ಪ್ರಕೃತರಾದ ಉಪಾಸನಾಧಿಕಾರಿಗಳು ಮುಖ್ಯ ಪ್ರಾಣನನ್ನೇ ಕೊನೆಯಾಗಿ ಉಳ್ಳವರು ಆಗಿಲ್ಲವೋ ಅಥವಾ ಮುಖ್ಯ-ಪ್ರಾಣನನ್ನೇ ಅವಧಿಯಾಗಿ ಹೊಂದಿದ್ದಾರೋ? ಮುಖ್ಯಪ್ರಾಣನಿಗಿಂತ ಶ್ರೇಷ್ಠನಾದ ಉಪಾಸನಾ ಅಧಿಕಾರಿ ಇದ್ದಾನೆ ಎಂದು ಸಾಧನೆ ಮಾಡುವ ಅನುಮಾನಕ್ಕೆ 'ಪ್ರಾಣೋ ವಾ ಸರ್ವೇಭ್ಯೋ ಭೂಯಾನ್ ನ ಪ್ರಾಣಾದ್ಭೂಯಾನ್' ಎಂಬ ಶ್ರುತಿಯ ಬಾಧ(ವಿರೋಧ) ಇಲ್ಲವೋ ಅಥವಾ ಇದೆಯೋ? 'ಪ್ರಾಣೋ ವಾ ಸರ್ವೇಭ್ಯೋ ಭೂಯಾನ್' ಎಂಬ ಶ್ರುತಿಯಲ್ಲಿರುವ

ಸರ್ವಶಬ್ದಕ್ಕೆ ಹೇಗೆ ಪರಮಾತ್ಮನನ್ನು ಬಿಟ್ಟು ಎಂದರ್ಥವಿದೆಯೋ ಹಾಗೇ ಪ್ರಾಣನಿಗಿಂತಲೂ ಶ್ರೇಷ್ಠನಾದ ಇನ್ನೊಬ್ಬ ಅಧಿಕಾರಿಯನ್ನು ಬಿಟ್ಟು ಎಂದು ಅರ್ಥ ಸಂಕೋಚ ಮಾಡುವುದು ಸರಿಯೋ ತಪ್ಪೋ? ಎಂದು ಹೇಗೆ ಪರಸ್ಪರ ಸಂಗತವಾದ ವಿಚಾರಗಳು ಪ್ರಸ್ತುತವಾಗಿವೆ.

ಉಪಾಸನಾಧಿಕಾರಿಗಳು ಮುಖ್ಯಪ್ರಾಣಾವಧಿಕರಲ್ಲ ಎಂಬುದೇ ಪೂರ್ವ ಪಕ್ಷ. ಏಕೆಂದರೆ 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಎಂಬಲ್ಲಿರುವ 'ಸರ್ವ' ಶಬ್ದಕ್ಕೆ ಅಸಂಕುಚಿತವಾದ ಅರ್ಥವನ್ನು ಇಟ್ಟುಕೊಂಡರೆ ಮುಖ್ಯ-ಪ್ರಾಣನೇ ನಿರುಪಚರಿತ (ಮುಖ್ಯವಾಗಿ) ಸರ್ವೋತ್ತಮ ಎಂದು ಹೇಳಿ-ದಂತಾಗುತ್ತದೆ. ಆದರೆ ಇದು ಸರಿಯಲ್ಲ. ಏಕೆಂದರೆ, ವಿಷ್ಣುವು ಸರ್ವೋತ್ತಮ ಎಂದು ಸಿದ್ಧವಾಗಿದೆ. ಈಗ ಪ್ರಾಣನನ್ನೂ ಸರ್ವೋತ್ತಮ ಎಂದು ಒಪ್ಪಿದರೆ ಸರ್ವೋತ್ತಮರಾದ ಇಬ್ಬರು ವ್ಯಕ್ತಿಗಳನ್ನು ಒಪ್ಪಿದಂತಾಗುತ್ತದೆ, ಇದು ಕೂಡುವುದಿಲ್ಲ. ಹಾಗಾಗಿ ಶ್ರುತಿಸಿದ್ಧವಾದ ಸರ್ವೋತ್ತಮತ್ವವುಳ್ಳ ವಿಷ್ಣುವಿಗೂ ಪ್ರಾಣನಿಗೂ ಅಭೇದವನ್ನು ಹೇಳಬೇಕು. ಇದು ಸರಿಯಲ್ಲ. ಏಕೆಂದರೆ ವಿಷ್ಣು ಹಾಗೂ ಪ್ರಾಣ ಇವರಿಗೆ ಅಭೇದ ಹೇಳಿದರೆ 'ಚಕ್ಷುರಾದಿವತ್ತು' ಎಂಬ ಸೂತ್ರ ಭಾಷ್ಯದಲ್ಲಿ ಪ್ರಾಣ ಪರಮಾತ್ಮರಿಗೆ ಭೇದವನ್ನು ಸಾಧನೆ ಮಾಡುವ ಅನೇಕ ಪ್ರಮಾಣಗಳನ್ನು ಉದಾಹರಿಸಿದ್ದಾರೆ. ಅದೆಲ್ಲವನ್ನು ಅಲ್ಲಗಳೆಯ-ಬೇಕಾಗುತ್ತದೆ. ಈ ಬಾಧಕವಿದೆ. ಹಾಗಾಗಿ ಶ್ರುತಿಯಲ್ಲಿರುವ ಸರ್ವ ಶಬ್ದಕ್ಕೆ ಪರಮಾತ್ಮನನ್ನು ಬಿಟ್ಟು ಎಂದು ಅರ್ಥ ಸಂಕೋಚ ಮಾಡಲೇಬೇಕು. ಜೊತೆಗೆ ಮುಖ್ಯಪ್ರಾಣನಿಗಿಂತ ಶ್ರೇಷ್ಠನಾದ ಬೇರೆ ಅಧಿಕಾರಿಯನ್ನು ಬಿಟ್ಟು ಎಂದು ಹೀಗೂ ಅರ್ಥಸಂಕೋಚ ಮಾಡಿದರೆ ಬಾಧಕವಿಲ್ಲ. ಹೀಗಾಗಿ, ಪ್ರಾಣನೂ ಅಧಿಕಾರಿಯಾದ್ದರಿಂದ, ತನಗಿಂತ ಉತ್ತಮನಾದ ಇನ್ನೊಬ್ಬ ಅಧಿಕಾರಿಯನ್ನು ಹೊಂದಿದ್ದಾನೆ, ಅಧಿಕಾರಿಗಳಾದ ನಾಮಾದಿಗಳಂತೆ ಎಂದು ಪ್ರಾಣನಿಗೂ ಶ್ರೇಷ್ಠನಾದ ಅಧಿಕಾರಿ ಇದ್ದಾನೆ ಎಂದು ಸಾಧನೆ ಮಾಡುವ ಅನುಮಾನಕ್ಕೆ ಹಿಂದೆ ಹೇಳಿದ ಶ್ರುತಿಯ ಬಾಧವಿಲ್ಲ. ಶ್ರುತಿಯ ವಿರೋಧವಿಲ್ಲದೇ ಇರುವ ಅನುಮಾನದಿಂದ ಪ್ರಾಣನಿಗಿಂತಲೂ ಉತ್ತಮನಾದ ಅಧಿಕಾರಿ ಸಿದ್ಧನಾಗುತ್ತಾನೆ. ಆದ್ದರಿಂದ ಉಪಾಸಕರು ಮುಖ್ಯಪ್ರಾಣನನ್ನೇ ಅವಧಿಯಾಗಿ ಹೊಂದಿದ್ದಾರೆ ಎಂಬುದು ಸರಿಯಲ್ಲ.

**ಸಿದ್ಧಾಂತ :-** ಉಪಾಸಕರಲ್ಲಿ ಮುಖ್ಯಪ್ರಾಣನೇ ಅವಧಿ. ಏಕೆಂದರೆ 'ಪ್ರಾಣೋ ವಾ ಸರ್ವೇಭ್ಯೋ ಭೂಯಾನ್' ಎಂಬಲ್ಲಿರುವ ಸರ್ವಶಬ್ದಕ್ಕೆ ಅನೇಕ ಪ್ರಮಾಣಗಳಿರುವುದರಿಂದ, ಭಗವಂತನನ್ನು ಬಿಟ್ಟು ಎಂದು ಅರ್ಥ ಸಂಕೋಚ ಮಾಡುವುದು ಸರಿಯಾದರೂ ಅಧಿಕಾರಿಗಳಲ್ಲಿ ಪ್ರಾಣನಿಗಿಂತ ಶ್ರೇಷ್ಠನಾದವನನ್ನೂ ಬಿಟ್ಟು ಎಂದು ಸಂಕೋಚ ಮಾಡುವುದು ಸರಿಯಲ್ಲ. ಏಕೆಂದರೆ ಅದಕ್ಕೆ ಯಾವುದೇ ಪ್ರಮಾಣವಿಲ್ಲ. ಪ್ರಾಣನಿಗಿಂತ ಶ್ರೇಷ್ಠನಾದ ಅಧಿಕಾರ ಇದ್ದಾನೆ ಎಂದು ಸಾಧನೆ ಮಾಡುವ ಅನುಮಾನವೂ ಕೂಡ, 'ಚಕ್ಷುರಾದಿವತ್ತು' ಎಂಬ ಸೂತ್ರದಲ್ಲಿ ಹಾಗೂ ಬೇರೆ ಕಡೆ ಅಲ್ಲಲ್ಲಿ ಬಂದಿರುವ ಭಾಷ್ಯವಚನಗಳಿಂದ ಹಾಗೂ 'ಉತ್ತಮತ್ವಂ ಹಿ ದೇವಾನಾಮ್' ಎಂದು ಮುಂದಿನ ಅಧಿಕರಣದಲ್ಲಿ ಬಂದಿರುವ ಪ್ರಾಣನಿಗಿಂತ ಹರಿಯೊಬ್ಬನೇ ಉತ್ತಮ ಎಂದು ಪ್ರತಿಪಾದನೆ ಮಾಡುವ ಭಾಷ್ಯವಚನಗಳಿಂದಲೂ ಬಾಧಿತವಾಗಿದೆ. ಅದೇ ರೀತಿ ಹಿಂದೆ ಹೇಳಿದೆ ಭಾಷ್ಯವಚನಗಳಿಗೆ ಅನುಸಾರಿಯಾದ ಭಗವಂತನನ್ನು ಮಾತ್ರ ಹೊರತುಪಡಿಸಿ ಎಂದಷ್ಟೇ ಅರ್ಥ ಸಂಕೋಚ ಮಾಡಲ್ಪಟ್ಟ ಸರ್ವಶಬ್ದವುಳ್ಳ ಪ್ರಕೃತ ಶ್ರುತಿಯಿಂದಲೂ ಬಾಧಿತವಾಗಿದೆ. ಹೀಗೆ ಅನುಮಾನವು ಅಪ್ರಮಾಣವಾದ್ದರಿಂದ ಉಪಾಸಕ-ರಲ್ಲಿ ಪ್ರಾಣನೇ ಕೊನೆ ಎಂದು ಸಿದ್ಧವಾಗುತ್ತದೆ.

**ಅಧಿಕರಣ ಫಲ :-** ಹಿಂದೆ ಸರ್ವಗುಣೋಪಸಂಹಾರಕ್ಕೆ ಬ್ರಹ್ಮದೇವರೇ ಅಧಿಕಾರಿಗಳು ಎಂದು ಹೇಳಿದೆ, ಉಪಾಸಕರು ನಿರವಧಿಕರು (ಪ್ರಾಣಾ-ವಧಿಕರಲ್ಲ) ಎಂದಾದರೆ ಇದು ಕೂಡುವುದಿಲ್ಲ. ಹಾಗಾಗಿ ಅದರ ಸಮರ್ಥನೆಯನ್ನು ಈ ಅಧಿಕರಣದಲ್ಲಿ ಮಾಡಲಾಗಿದೆ. ಇದೇ ಈ ಅಧಿಕರಣದ ಪ್ರಯೋಜನ.

## ॥ ಓಂ ವ್ಯತಿಹಾರೋ ವಿಶಿಂಷಂತಿ ಹೀತರವತ್ ಓಂ ॥
## ೩-೩-೨೨

ಮುಖ್ಯಪ್ರಾಣ ಹಾಗೂ ಹಿರಣ್ಯಗರ್ಭ ಇವರು ಸಮಾನರಾದ್ದರಿಂದ ಹಿಂದೆ ಮುಖ್ಯಪ್ರಾಣನಿಗೆ ಸರ್ವಗುಣೋಪಸಂಹಾರ ಹೇಳಲಾಗಿದೆ. ಆದರೆ ಅದು ಸರಿಯಲ್ಲ. ಏಕೆಂದರೆ ಮುಖ್ಯಪ್ರಾಣನೇ ಸರ್ವೋತ್ತಮ. ಅವನಿಂದ

ಉಪಾಸ್ಯನಾದವನು ಯಾರೂ ಇಲ್ಲ ಎಂದು ಶಂಕಾ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಸಂಗತಿಯಿದೆ. ಅಥವಾ, ಉಪಾಸನಾಧಿಕಾರಿಗಳ ವಿಚಾರವನ್ನು ಮಾಡಿ ಈಗ ಈ ಅಧಿಕರಣದಲ್ಲಿ ಉಪಾಸ್ಯ ವಿಚಾರ ಮಾಡುತ್ತಿರುವುದರಿಂದ ಸಂಗತಿಯಿದೆ.

ಹಿಂದೆ ಪ್ರಾಣನಿಗಿಂತ ಉತ್ತಮನೆಂದು ಪ್ರಕೃತನಾದ ವಿಷ್ಣುವು ಪ್ರಾಣನಿಗಿಂತ ಉತ್ತಮನಲ್ಲವೋ ಅಥವಾ ಉತ್ತಮನೋ? ಛಾಂದೋಗ್ಯದಲ್ಲಿ 'ಪ್ರಾಣೋ ವಾ ಆಶಾಯಾ ಭೂಯಾನ್' ಎಂದು ಪ್ರಾಣನಿಗೆ ಆಶಾ(ವಾಣೀ)ಗಿಂತಲೂ ಉತ್ತಮತ್ವ ಹೇಳಲಾಗಿದೆ. ಅದೇ ರೀತಿ 'ಸತ್ಯಂ ತ್ವೇವ ವಿಜಿಜ್ಞಾಸಿತವ್ಯಂ' ಎಂದು ಪ್ರಾಣನ ನಂತರ ಹೇಳಲ್ಪಟ್ಟ ಸರ್ವೋತ್ತಮನಾದ ಸತ್ಯನಾಮಕನು ಪ್ರಾಣನೇ ಆಗಿದ್ದಾನೆ ಅಥವಾ ಪ್ರಾಣನಿಗಿಂತ ಅನ್ಯನಾದ ವಿಷ್ಣುವೋ? ಪ್ರಾಣಪ್ರಕರಣಕ್ಕಿಂತ ಸತ್ಯಪ್ರಕರಣ ಬೇರೆ ಎನ್ನುವುದಕ್ಕೆ ಪ್ರಮಾಣ ಇಲ್ಲವೋ ಅಥವಾ ಇದೆಯೋ? ಹೀಗೆ ಪರಸ್ಪರ ಸಂಗತವಾದ ವಿಚಾರ ಪ್ರಸ್ತುತವಾಗಿದೆ.

ಪ್ರಾಣನೇ ಸರ್ವೋತ್ತಮ ಎಂದು ಪೂರ್ವಪಕ್ಷ. ಏಕೆಂದರೆ, ನಾಮದಿಂದ ಆರಂಭಿಸಿ ಪ್ರಾಣನ ತನಕ ಹದಿನೈದು ಪ್ರಕರಣಗಳಿವೆ. ಅವುಗಳಲ್ಲಿ ಪರಸ್ಪರ ಭೇದವಿದೆ ಎಂದು ಪ್ರಶ್ನೆ, ಪ್ರತಿವಚನ (ಉತ್ತರ)ಗಳಿಂದ ತಿಳಿಯುತ್ತದೆ. ಆದರೆ, ಈ ಪ್ರಶ್ನೆ, ಪ್ರತಿವಚನಗಳು ಅಂದರೆ 'ಅಸ್ತಿ ಪ್ರಾಣಾತ್ ಭೂಯಃ'? ಎಂಬ ಪ್ರಶ್ನೆ 'ಸತ್ಯಂ ವಾ ವ ಪ್ರಾಣಾದ್ಭೂಯಃ' ಎಂಬ ಪ್ರತಿವಚನ. ಇದು ಪ್ರಾಣ, ಸತ್ಯ ಪ್ರಕರಣಗಳ ಮಧ್ಯೆ ಇಲ್ಲ. ಹಾಗಾಗಿ ಪ್ರಾಣ, ಸತ್ಯ ಪ್ರಕರಣಗಳು ಬೇರೆ ಬೇರೆ ಅಲ್ಲ, ಒಂದೇ ಪ್ರಕರಣ ಎಂದು ಒಪ್ಪಬೇಕು. ಆಗ ಪ್ರಾಣನೇ ಸತ್ಯಶಬ್ದ ವಾಚ್ಯ ಎಂದು ಸಿದ್ಧನಾಗುತ್ತಾನೆ. ಹಾಗಾಗಿ ವಿಷ್ಣುವು ಸತ್ಯಶಬ್ದವಾಚ್ಯನಾಗಿ ಪ್ರಾಣನಿಗಿಂತ ಉತ್ತಮನಾಗಲು ಸಾಧ್ಯವಿಲ್ಲ. ಪ್ರಕರಣಭೇದಕವಾದ ಪ್ರಶ್ನ - ಪ್ರತಿವಚನಗಳನ್ನು ಅಧ್ಯಾಹಾರ ಮಾಡಿಕೊಳ್ಳಬಹುದಲ್ಲಾ? ಎಂದರೆ ಹಾಗೆ ಅಧ್ಯಾಹಾರ ಮಾಡಿಕೊಳ್ಳುವುದಕ್ಕೆ ಯಾವುದೇ ಜ್ಞಾಪಕವಿಲ್ಲ.

**ಸಿದ್ಧಾಂತ** :- ವಿಷ್ಣುವೇ ಸರ್ವೋತ್ತಮ, ಪ್ರಾಣನಲ್ಲ. ಏಕೆಂದರೆ 'ಸ ವಾ ಏಷ ಏವಂ ಪಶ್ಯನ್ ಏವಂ ಮನ್ವಾನಃ ಏವಂ ವಿಜಾನನ್ ಅತಿವಾದೀ ಭವತಿ'

ಎಂಬುದಾಗಿ ಪ್ರಾಣವಾದಿಗೆ (ಪ್ರಾಣನನ್ನು ಕುರಿತು ಹೇಳುವವನಿಗೆ) ಅತಿವಾದಿತ್ವವು ಹೇಳಲ್ಪಟ್ಟಿದೆ. ಅತಿವಾದಿತ್ವ ಎಂದರೆ ಅತಿಶಯಿತ ವಸ್ತು ವಾದಿತ್ವ. (ಶ್ರೇಷ್ಠ ವಸ್ತುವನ್ನು ಕುರಿತು ಹೇಳುವುದು) ನಂತರ, 'ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ' ಎಂಬುದಾಗಿ ಸತ್ಯನಾಮಕ ವಸ್ತುವಾದಿಗೂ ಅತಿವಾದಿತ್ವ ಹೇಳಲಾಗಿದೆ. ಆದರೆ, ಪ್ರಾಣಾತಿವಾದಿಗಿಂತಲೂ ಸತ್ಯಾತಿ-ವಾದಿಯಲ್ಲಿ ವಿಶೇಷವಿದೆ ಎಂದು 'ತು' ಶಬ್ದದಿಂದ ತಿಳಿಯುತ್ತಿದೆ. ಈ ಜ್ಞಾಪಕ ಇರುವುದರಿಂದ ಪ್ರಶ್ನ - ಪ್ರತಿವಚನಗಳನ್ನು ಅಧ್ಯಾಹಾರ ಮಾಡಿಕೊಂಡು ಪ್ರಾಣ, ಸತ್ಯ, ಪ್ರಕರಣಗಳು ಬೇರೆ ಬೇರೆ ಎಂದು ಹೇಳಬೇಕು. ಹಾಗಾಗಿ ಪ್ರಾಣನು ಸತ್ಯಶಬ್ದವಾಚ್ಯನಲ್ಲ ವಿಷ್ಣುವೇ ಸತ್ಯಶಬ್ದವಾಚ್ಯ, ಆದ್ದರಿಂದ ಪ್ರಾಣನಿಗಿಂತ ಸತ್ಯಶಬ್ದವಾಚ್ಯನಾದ ವಿಷ್ಣುವೇ ಉತ್ತಮ ಎಂದು ಸಿದ್ಧವಾಗುತ್ತದೆ. 'ಉತ್ತಮತ್ವಂ ಹಿ ದೇವಾನಾಂ' ಎಂಬ ಸ್ಮೃತಿಯೂ ಕೂಡ ವಿಷ್ಣುವು ಪ್ರಾಣನಿಗಿಂತ ಉತ್ತಮ ಎಂದು ಹೇಳುತ್ತಿದೆ.

**ಪ್ರಶ್ನೆ** :- 'ತು' ಶಬ್ದವು ಅಧ್ಯಾಹಾರ ಮಾಡಿಕೊಳ್ಳುವುದಕ್ಕೆ ಜ್ಞಾಪಕವಲ್ಲ. ಏಕೆಂದರೆ, 'ವಿಜ್ಞಾನಂ ತ್ವೇವ' 'ಮತಿಸ್ತ್ವೇವ' ಎಂದು ಮುಂದೆ ಬರುವ ರೀತಿಯಲ್ಲಿ ಭೇದವಿಲ್ಲದೇ ಇರುವ ಕಡೆಯಲ್ಲೂ 'ತು' ಶಬ್ದವು ಶ್ರುತವಾಗಿದೆ. ಹಾಗಾಗಿ ವ್ಯಭಿಚಾರ ಬರುತ್ತದೆ (ತು ಶಬ್ದವು ಪ್ರಕರಣಭೇದಕ ಎಂಬ ವ್ಯಾಪ್ತಿಗೆ)?

**ಉತ್ತರ** :- ಈ ಪ್ರಶ್ನೆಗೆ ಉತ್ತರವನ್ನು ಭೂಮಾಧಿಕರಣದಲ್ಲೇ ಹೇಳಿಯಾಗಿದೆ. ಈ ಆಕ್ಷೇಪ ನಿರಾಕರಣವು ಭೂಮಾಧಿಕರಣ ಚಂದ್ರಿಕಾದಲ್ಲಿ ಸ್ಪಷ್ಟವಾಗಿದೆ.

**ಅಧಿಕರಣ ಫಲ** :- 'ಆನಂದಾದಯಃ ಪ್ರಧಾನಸ್ಯ' ಎಂಬ ಸೂತ್ರದಲ್ಲಿ ಆತ್ಮತ್ವೋಪಾಸನೆಯು ಹೇಳಲ್ಪಟ್ಟಿದೆ. ಆತ್ಮತ್ವೋಪಾಸನೆ ಎಂದರೆ ಸ್ವಾಮಿತ್ವೋ-ಪಾಸನೆ. ಇದು ಸರ್ವಾಧಿಕಾರಿಕವಾದ ಉಪಾಸನೆ. ವಿಷ್ಣುವು ಸರ್ವೋತ್ತಮ ಎಂದು ಸಿದ್ಧವಾಗದೇ ಹೋದರೆ, ಈ ಸ್ವಾಮಿತ್ವೋಪಾಸನೆ ಕೂಡುವುದಿಲ್ಲ, ಹಾಗಾಗಿ ಅದು ಸಮರ್ಥನೀಯ. ಅದನ್ನೇ ಈ ಅಧಿಕರಣದಲ್ಲಿ ಮಾಡಲಾಗಿದೆ.

## ॥ ಓಂ ಸೈವ ಹಿ ಸತ್ಯಾದಯಃ ಓಂ ॥ ೩-೩-೨೩

ಹಿಂದೆ ಪ್ರಾಣನಿಗಿಂತ ವಿಷ್ಣುವು ಉತ್ತಮ ಎಂದು ಹೇಳಲಾಗಿದೆ. ಅದರದ್ದೇ ವಿಶೇಷವಿಚಾರ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಸಂಗತಿಯಿದೆ.

ಪ್ರಕೃತನಾದ ಪ್ರಾಣನಿಗಿಂತ ಸತ್ಯಪದೋಕ್ತನಾದ ವಿಷ್ಣು ಒಬ್ಬನೇ ಉತ್ತಮನೋ ಅಥವಾ ಇನ್ನೂ ಅನೇಕ ಉತ್ತಮರಿದ್ದಾರೋ? ಸತ್ಯನ ನಂತರ ಶ್ರುತರಾದ ವಿಜ್ಞಾನ - ಮತಿ - ಶ್ರದ್ಧಾ - ನಿಷ್ಠಾ - ಕೃತಿ - ಸುಖ - ಭೂಮ - ಅಹಂಕಾರ - ಆತ್ಮ ಈ ಒಂಭತ್ತಕ್ಕೂ ಸತ್ಯಪದೋಕ್ತನಾದ ವಿಷ್ಣುವಿಗೂ ಮತ್ತು ಪರಸ್ಪರ ಭೇದವಿದೆಯೋ ಅಥವಾ ಅಭೇದವೋ? ಅಭೇದಜ್ಞಾಪಕ ಇಲ್ಲವೋ ಅಥವಾ ಇದೆಯೋ? ಎಂದು ಈ ರೀತಿಯಾಗಿ ಪರಸ್ಪರ ಸಂಬದ್ಧವಾದ ವಿಚಾರಗಳು ಪ್ರಸ್ತುತವಾಗಿವೆ.

ಪ್ರಾಣನಿಗಿಂತ ಸತ್ಯನಾಮಕನಾದ ವಿಷ್ಣುವಲ್ಲದೇ ಅನೇಕ ಜನ ಉತ್ತಮರಿದ್ದಾರೆ ಎಂದೇ ಪೂರ್ವಪಕ್ಷ. ಏಕೆಂದರೆ, ಸತ್ಯದಿಂದ ಆರಂಭ-ಮಾಡಿಕೊಂಡು ಆತ್ಮದವರೆಗೆ ಇರುವ ಹತ್ತು ವ್ಯಕ್ತಿಗಳಿಗೆ ಅಭೇದವಿದೆ ಎನ್ನುವುದಕ್ಕೆ ಯಾವುದೇ ಜ್ಞಾಪಕವಿಲ್ಲ. ಶಬ್ದಾಂತರನ್ಯಾಯ (ಶಬ್ದ ಬೇರೆ-ಯಾದ್ದರಿಂದ ವ್ಯಕ್ತಿಯೂ ಬೇರೆ) ದಿಂದ ಅವುಗಳಿಗೆ ಭೇದವನ್ನು ಒಪ್ಪುವುದೇ ಯುಕ್ತವಾಗಿದೆ. ಹೀಗಾಗಿ ಪ್ರಾಣನಿಗಿಂತ ಸತ್ಯನೇ ಮೊದಲಾದ ಅನೇಕ ಜನ ಉತ್ತಮರಿದ್ದಾರೆ ಎಂದೇ ಹೇಳಬೇಕು.

**ಸಿದ್ಧಾಂತ** :- ಪ್ರಾಣನಿಗಿಂತ ವಿಷ್ಣು ಒಬ್ಬನೇ ಉತ್ತಮ. ಏಕೆಂದರೆ ವಿಜ್ಞಾನಾದಿಗಳನ್ನು ಸತ್ಯಪದದೋಕ್ತ ವಿಷ್ಣುವಿಗಿಂತ ಬೇರೆ ಎನ್ನಬಾರದು. 'ಸತ್ಯಂ ಭಗವೋ ವಿಜಿಜ್ಞಾಸೇ' ಎಂದು ಸತ್ಯನಾಮಕ ವಿಷ್ಣುವಿನ ಗುಣಜಿಜ್ಞಾಸೆಯ ಪ್ರಶ್ನೆ ಮಾಡಿದಾಗ ತದವಿನಾಭೂತವಾದ ವಿಜ್ಞಾನವನ್ನು ಉಪದೇಶ ಮಾಡಿದ್ದಾರೆ. ಈ ಪ್ರಶ್ನೋತ್ತರಗಳು ಭೇದವನ್ನು ಒಪ್ಪಿದರೆ ಅಸಂಗತವಾಗುತ್ತದೆ. ಇದನ್ನು ಬೇರ ರೀತಿ ಕೂಡಿಸಲು ಬರುವುದಿಲ್ಲ-ವಾದ್ದರಿಂದ 'ಸತ್ಯಂ ಭಗವೋ ವಿಜಿಜ್ಞಾಸೇ' ಎಂಬುದು ಸತ್ಯಗುಣ-ಜಿಜ್ಞಾಸಾ ಪ್ರಶ್ನೆ. ಅದಕ್ಕೆ ಉತ್ತರವಾಗಿ, ಸತ್ಯ ಅವಿನಾಭೂತವಾದ ವಿಜ್ಞಾನದ ಉಕ್ತಿ. ಹೀಗೆ ಅಭೇದವನ್ನೇ ಹೇಳಬೇಕು. (ಸತ್ಯನಾಮಕ ಪರಮಾತ್ಮನ

ಗುಣವನ್ನು ಅರಿಯಬಯುಸುತ್ತೇವೆ ಎಂದು ಪ್ರಶ್ನೆ. ಸತ್ಯನಾಮಕನ ವಿಜ್ಞಾನ ವೆಂಬ ಗುಣವನ್ನು ಅರಿತುಕೊಳ್ಳಬೇಕು ಎಂದು ಉತ್ತರ. ವಿಜ್ಞಾನವು ಸತ್ಯನಾಮಕ ವಿಷ್ಣುವಿನದ್ದೇ ರೂಪವಾಗಿದ್ದರೂ ವಿಶೇಷ ಬಲದಿಂದ ಸತ್ಯನ ಗುಣ ಎಂದು ಹೇಳಿದ್ದು ಸರಿ). ಇದೇ ರೀತಿ ಮುಂದೆಯೂ ಕೂಡ 'ವಿಜ್ಞಾನಂ ಭಗವೋ ವಿಜಿಜ್ಞಾಸೇ' ಎಂದು ವಿಜ್ಞಾನಗುಣಜಿಜ್ಞಾಸಾ ಬಂದಾಗ ವಿಜ್ಞಾನ ಅವಿನಾಭೂತವಾದ ಮತಿಯನ್ನು ಹೇಳಿದ್ದು ಹೀಗೆ ಹಿಂದಿನ ಹಿಂದಿನದರ ಗುಣಜಿಜ್ಞಾಸೆಗೆ ಉತ್ತರವಾಗಿ ಮುಂದಿನ ಮುಂದಿನ ಅವಿನಾಭೂತ-ಗುಣಗಳನ್ನು ಉತ್ತರವಾಗಿ ಹೇಳದ್ದರಿಂದ ಸತ್ಯಾದಿ ಎಲ್ಲಕ್ಕೂ ಅಭೇದವನ್ನು ಹೇಳುವುದೇ ನ್ಯಾಯ.

ಇನ್ನು 'ಸತ್ಯಾದ್ಯಾಃ ಅಹಮಾತ್ಮಾಂತಾ ಯದ್ಗುಣಾ' ಎಂಬ ಸ್ಮೃತಿಯೂ ಕೂಡ ಸತ್ಯಾದಿ ಆತ್ಮಾಂತ ಸರ್ವಕ್ಕೂ ಅಭೇದವಿದೆ ಎಂದು ಹೇಳುತ್ತಿದೆ.

ಆದ್ದರಿಂದ ವಿಷ್ಣು ಒಬ್ಬನೇ ಪ್ರಾಣನಿಗಿಂತ ಉತ್ತಮ ಎಂದು ಸಿದ್ಧವಾಯಿತು.

## ॥ ಓಂ ಕಾಮಾದಿತರತ್ರ ತತ್ರ ಚಾಯತನಾದಿಭ್ಯಃ ಓಂ ॥
## ೩-೩-೨೪

ಹೀಗೆ ಸತ್ಯಾದಿ ಎಲ್ಲವೂ ಕೂಡ ವಿಷ್ಣು ಎಂದು ಸಿದ್ಧವಾದ ಮೇಲೆ ಲಕ್ಷ್ಮೀ ದೇವಿಯೂ ಅಧಿಕಾರಿವರ್ಗದಲ್ಲಿ ಸೇರುವುದರಿಂದ, ಅವಳನ್ನೂ ಪ್ರಾಣನ ನಂತರ ಅಧಿಕಾರಿ ಎಂದು ಗ್ರಹಿಸಬೇಕು. ಹಾಗಾದರೆ, ಪ್ರಾಣನೇ ಅಧಿಕಾರಿ-ಗಳಲ್ಲಿ ಕೊನೆಯವನು ಎಂದು ಹಿಂದೆ ಹೇಳಿದ್ದು ತಪ್ಪಾಗುತ್ತದೆ. ಎಂದು ಶಂಕಾ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಹಿಂದಿನಿಂದ ಸಂಗತಿಯಿದೆ.

ಪ್ರಾಣ ಹಾಗೂ ವಿಷ್ಣು ಇವರ ವಿಚಾರ ಮಾಡುತ್ತಿರುವಾಗ ಬುದ್ಧಿಯಲ್ಲಿ ಸನ್ನಿಹಿತಳಾದ ಲಕ್ಷ್ಮೀದೇವಿಯು ಉಪಾಸನೆಯಲ್ಲಿ ಅಧಿಕಾರಿ ಆಗಿದ್ದಾಳೋ ಇಲ್ಲವೋ? ಲಕ್ಷ್ಮೀದೇವಿಗೆ ಸಂಸಾರಬಂಧ ಇದೆಯೋ ಅಥವಾ ಇಲ್ಲವೋ? ಸೀತಾದಿರೂಪದಿಂದ ಲಕ್ಷ್ಮೀದೇವಿಯು ಭೂಮಿಯಲ್ಲಿ ಹುಟ್ಟಿದ್ದು ಜೀವರಂತೆ ದೇಹವನ್ನು ಪಡೆದುಕೊಂಡೋ ಅಥವಾ ಕೇವಲ ಪ್ರಾದುರ್ಭಾವವೋ? ಲಕ್ಷ್ಮೀದೇವಿಯು ಭಗವಂತನ ಆರಾಧನೆ ಮಾಡುವುದು ಜನ್ಮಾದಿಗಳಿಗೆ

ಕಾರಣವಾದ ಕರ್ಮಬಂಧವನ್ನು ಕಳೆದುಕೊಳ್ಳುವುದಕ್ಕಾಗಿಯೋ ಅಥವಾ ಮುಕ್ತರಂತೆ ನಿರುಪಾಧಿಕವಾದ ಅತಿಶಯ ಭಕ್ತಿಯಿಂದಲೋ? ಅತಿಶಯ ಭಕ್ತಿಯಿಂದಲೇ ಎಂದು ಹೇಳುವುದಕ್ಕೆ ಕಲ್ಪಕ (ಪ್ರಮಾಣ) ಇಲ್ಲವೋ ಇದೆಯೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಪ್ರಸ್ತುತವಾಗಿವೆ.

ಲಕ್ಷ್ಮೀದೇವಿಯೂ ಉಪಾಸನಾಧಿಕಾರಿಯೇ ಎಂದು ಪೂರ್ವಪಕ್ಷ. ಏಕೆಂದರೆ, 'ಯದರ್ಜಿತಂ ಬ್ರಹ್ಮಭವಾದಿಭಿಸ್ಸುರೈಃ ಶ್ರಿಯಾ ಚ ದೇವ್ಯಾ ಮುನಿಭಿಶ್ಚ ಸಾತ್ವತೈಃ' ಎಂಬಲ್ಲಿ ಶ್ರೀದೇವಿಯೂ ಭಗವದುಪಾಸನೆ ಮಾಡುತ್ತಾಳೆ ಎಂದು ತಿಳಿಯುತ್ತದೆ. ಈ ಉಪಾಸನೆಯು ಕೂಡ ಇತರರು ಮಾಡುವಂತೆ ಭಗವಂತನ ಪ್ರೀತಿ ಪಡೆಯುವುದರ ಮೂಲಕ ಬಂಧಮೋಕ್ಷ-ಕ್ಕಾಗಿಯೇ ಎನ್ನಬೇಕು. ಲಕ್ಷ್ಮೀದೇವಿಯು ಕೃತಕೃತ್ಯಳಾಗಿದ್ದರೆ ಉಪಾಸನೆ ಕೂಡುವುದಿಲ್ಲ. ಲಕ್ಷ್ಮೀದೇವಿಯು ಅತಿಶಯ ಭಕ್ತಿಯಿಂದ ಉಪಾಸನೆ ಮಾಡುತ್ತಾಳೆ ಕರ್ಮಬಂಧಮೋಕ್ಷಕ್ಕಾಗಿ ಅಲ್ಲ? ಎಂದರೆ ಹಾಗೆ ಹೇಳಲು ಯಾವುದೇ ಪ್ರಮಾಣವಿಲ್ಲ. ಒಂದು ವೇಳೆ ಶ್ರೀದೇವಿಯು ಮಾಡುವ ಉಪಾಸನೆಯನ್ನು ಯಾವುದೇ ಕಲ್ಪಕ ಇಲ್ಲದೇ ಹೋದರೂ, ಭಕ್ತ್ಯತಿಶಯ-ದಿಂದಲೇ ಹೊರತು ಬಂಧಮೋಕ್ಷಕ್ಕಾಗಿ ಅಲ್ಲ ಎನ್ನುವುದಾದರೆ, ಸಾತ್ವತರು (ಯಾದವರು) ಮಾಡುವ ಉಪಾಸನೆಯೂ ಕೂಡ ಕರ್ಮಬಂಧಮೋಕ್ಷಕ್ಕಾಗಿ ಅಲ್ಲವೆನ್ನಬೇಕು. ಹಾಗಾಗಿ ಕರ್ಮಬಂಧಮೋಚನಕ್ಕಾಗಿಯೇ ಶ್ರೀದೇವಿಯು ಉಪಾಸನೆ ಮಾಡುತ್ತಾಳೆಂದ ಮೇಲೆ ಸೀತಾ, ರುಗ್ಮಿಣೀ ಮೊದಲಾದ ರೂಪ-ಗಳಿಂದ ಕಾಣಿಸುವುದು, ಕಣ್ಮರೆಯಾಗುವುದು ಕೂಡ, ಇತರ ಜೀವರಂತೆ ಕರ್ಮಾಧೀನವಾದ ದೇಹವನ್ನು ಪಡೆಯುವುದು, ಬಿಡುವುದು ಎಂದೇ ಹೇಳಬೇಕು. ಆದ್ದರಿಂದ ಶ್ರೀದೇವಿಗೂ ಬಂಧವಿದೆ ಎಂದಾಯಿತು. ಬದ್ಧರಾಗಿದ್ದು ಯಾರು ಸಾಧುಸ್ವಭಾವದವರೋ ಅವರೇ ಅಧಿಕಾರಿಗಳು. ಶ್ರೀದೇವಿಯೂ ಹಾಗೇ ಇರುವುದರಿಂದ ಅವಳೂ ಉಪಾಸನೆಯಲ್ಲಿ ಅಧಿಕಾರಿ ಎಂದು ಸಿದ್ಧವಾಯಿತು.

**ಸಿದ್ಧಾಂತ :-** ಲಕ್ಷ್ಮೀದೇವಿಯು ಉಪಾಸನಾಧಿಕಾರಿಯಲ್ಲ. ಏಕೆಂದರೆ 'ಸರ್ವಾಯತನಾ ಸರ್ವಕಾಲಾ' ಇತ್ಯಾದಿ ಭಾಷ್ಯದಲ್ಲಿ ಹೇಳಲ್ಪಟ್ಟ ಶ್ರುತಿ-ಗಳಿಂದ ಲಕ್ಷ್ಮೀದೇವಿಯು ನಿತ್ಯಭಗವತ್ಸಂಬಂಧ ಉಳ್ಳವಳಾಗಿ ಅತಿಶಯವಾದ

ಭಗವತ್ಪ್ರಸಾದಕ್ಕೆ ಪಾತ್ರಳು. ಹಾಗಾಗಿ ನಿತ್ಯಮುಕ್ತಳು ಎಂದು ತಿಳಿಯುತ್ತಿದೆ. ನಿತ್ಯಮುಕ್ತಳಾದ್ದರಿಂದಲೇ ಭೂಮಿಯಲ್ಲಿ ಅವಳ ಭವನ ತಿರೋಧಾನಗಳೂ ಈಶ್ವರೇಚ್ಛಾಧೀನಾದ ತನ್ನ ಇಚ್ಛೆಯಿಂದಾದ ಪ್ರಾದುರ್ಭಾವಾದಿಗಳೇ ಎನ್ನಬೇಕು. ಹಾಗಾಗಿ ಅವಳು ಜೀವರಂತೆ ಕರ್ಮಾಧೀನವಾದ ದೇಹವನ್ನು ಪಡದೆ ಹುಟ್ಟುವುದಿಲ್ಲ ಎಂದು ಸಿದ್ಧವಾಗುತ್ತದೆ. ಆದ್ದರಿಂದಲೇ ಬಂಧವೂ ಇಲ್ಲ. ಈ ಕಲ್ಪಕ ಇರುವುದರಿಂದ ಲಕ್ಷ್ಮೀದೇವಿಯು ಮಾಡುವ ಉಪಾಸನೆ ಕೇವಲ ಭಕ್ತ್ಯತಿಶಯದಿಂದ ಎನ್ನಬೇಕು. 'ಯಥಾಶ್ರೀರ್ನಿತ್ಯಮುಕ್ತಾಪಿ' ಎಂಬ ಸ್ಮೃತಿಯೂ ಕೂಡ ಶ್ರೀದೇವಿಯು ಅತಿಶಯಭಕ್ತಿಯಿಂದಲೇ ಭಗವದರ್ಚನೆ ಮಾಡುತ್ತಾಳೆಂದು ಹೇಳುತ್ತಿದೆ.

ಅಧಿಕರಣದ ಫಲ :- ಹಿಂದೆ ಪ್ರಾಣದೇವರೇ ಉಪಾಸನಾಧಿಕಾರಿಗಳಲ್ಲಿ ಕೊನೆಯವರು ಎಂದು ಹೇಳಿದ್ದರು. ಅದರ ಸಮರ್ಥನೆಯನ್ನೇ ಈ ಅಧಿಕರಣದಲ್ಲಿ ಮಾಡಲಾಗಿದೆ.

## ॥ ಓಂ ತನ್ನಿರ್ಧಾರಣಾರ್ಥನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬಂಧಃ ಫಲಮ್ ಓಂ ॥ ೩-೩-೨೫

ಹಿಂದಿನ ಅಧಿಕರಣದಲ್ಲಿ ಲಕ್ಷ್ಮೀದೇವಿಯು ಕೃತಕೃತ್ಯಳಾದ್ದರಿಂದ ಉಪಾಸನೆಗೆ ಫಲವಿಲ್ಲ ಎಂದು ಶಂಕೆ ಬಂದಾಗ ಅದನ್ನು ಒಪ್ಪಿಕೊಂಡು ಆದರದಿಂದ ಉಪಾಸನಾ ಮಾಡುತ್ತಾಳೆ ಎಂದು ಹೇಳಲಾಯಿತು. ಹಾಗಾದರೆ, ಕೃತಕೃತ್ಯರಲ್ಲದವರಿಗೂ ಕೂಡ ಶ್ರವಣಾದಿ ಸಮಸ್ತ ಉಪಾಸನೆಗೆ ಫಲವಿಲ್ಲ-ದಿರುವುದರದಿಂದ ಸಮಸ್ತ ಉಪಾಸನೆ ಬೇಡ ಎಂದು ಶಂಕಿಸಿದ್ದರಿಂದ ಸಂಗತಿ.

ಶ್ರವಣ, ಮನನ, ನಿಧಿಧ್ಯಾಸನ ಎಂಬ ಮೂರುವಿಧವಾದ ಉಪಾಸನೆಯನ್ನು ವ್ಯಸ್ತವಾಗಿ (ಒಂದೊಂದೆ)ಮಾಡಬೇಕೋ ಅಥವಾ ಸಮಸ್ತವಾಗಿ (ಎಲ್ಲವನ್ನೂ) ಮಾಡಬೇಕೋ? ಶ್ರವಣಾದಿ ಮೂರು ವಿಧವಾದ ಉಪಾಸನೆಗೂ ಫಲ ಇಲ್ಲವೋ ಅಥವಾ ಇದೆಯೋ? ದರ್ಶನವು ಶ್ರವಣಾದಿ ಯಾವುದಾದರೂ ಒಂದರಿಂದಲೇ ಆಗುತ್ತದೋ ಅಥವಾ ಮೂರರಿಂದಲೇ ಆಗುವುದೋ?

ಶ್ರವಣಾದಿ ಮೂರೂ ಕೂಡ ದರ್ಶನಕ್ಕೆ ಸಾಧನ ಎನ್ನುವುದಕ್ಕೆ ಪ್ರಮಾಣ ಪ್ರಯೋಜನಗಳು ಇಲ್ಲವೋ ಅಥವಾ ಇದೆಯೋ? ಹೀಗೆ ಒಂದಕ್ಕೊಂದು ಪೂರಕವಾದ ವಿಚಾರಗಳು ಬಂದಿವೆ.

ಶ್ರವಣಾದಿ ಸಮಸ್ತೋಪಾಸನೆ ಅವಶ್ಯಕವಲ್ಲ ಎಂದು ಪೂರ್ವಪಕ್ಷ. ಏಕೆಂದರೆ, ಉಪಾಸನೆ ಮಾಡುವುದು ಭಗವಂತನ ದರ್ಶನಕ್ಕಾಗಿ 'ದ್ರಷ್ಟವ್ಯಃ' ಎಂಬ ಶ್ರುತಿಯೇ ಇದಕ್ಕೆ ಪ್ರಮಾಣ. ದರ್ಶನವು ಶ್ರವಣಮನನದಿಂದಲೋ ಅಥವಾ ಧ್ಯಾನದಿಂದಲೋ ಆಗುವಾಗ ಮೂರನ್ನೂ ಅನುಷ್ಠಾನಮಾಡ-ಬೇಕೆಂಬುದಕ್ಕೆ ಪ್ರಮಾಣವಿಲ್ಲ. 'ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿಧಿಧ್ಯಾಸಿತವ್ಯಃ' ಎಂಬ ಶ್ರುತಿಯು ಮೂರನ್ನೂ ವಿಧಾನಮಾಡು-ತ್ತಿದೆಯಲ್ಲಾ? ಎಂದರೆ, ಇಲ್ಲ, ಈ ಶ್ರುತಿಯು ದರ್ಶನಕ್ಕೆ ಶ್ರವಣಾದಿ ಯಾವುದಾದರೂ ಒಂದನ್ನು ವಿಧಾನ ಮಾಡುತ್ತಿದೆ ಎಂದೂ ಹೇಳಬಹುದು, ಯಾವುದೇ ಅನುಪಪತ್ತಿ ಇಲ್ಲ. ಶ್ರವಣಾದಿ ಮೂರನ್ನು ವಿಧಾನ ಮಾಡುವುದಕ್ಕೆ ಯಾವುದೇ ಪ್ರಯೋಜನವೂ ಇಲ್ಲ.

**ಪ್ರಶ್ನೆ :-** ಮೂರಕ್ಕೂ ಪ್ರಯೋಜನವಿಲ್ಲ ಎಂದು ಹೇಳಿದ್ದು ತಪ್ಪು. ಏಕೆಂದರೆ ಶ್ರವಣದಿಂದ ತಿಳಿಯದೇ ಇದ್ದದ್ದು ತಿಳಿಯುತ್ತದೆ. ಮನನದಿಂದ ನಿಶ್ಚಯಾತ್ಮಕ ವಾದ ಜ್ಞಾನ ಹುಟ್ಟುತ್ತದೆ. ಧ್ಯಾನದಿಂದ ದರ್ಶನವಾಗುತ್ತದೆ. ಹೀಗೆ ಮೂರಕ್ಕೂ ಪ್ರಯೋಜನವಿದೆಯಲ್ಲಾ?

**ಪರಿಹಾರ :-** ಹೀಗೆ ಹೇಳಿದರೆ ಶ್ರವಣಾದಿ ಮೂರಕ್ಕೂ ಪ್ರತ್ಯೇಕ ಪ್ರತ್ಯೇಕ ಫಲವಿದೆ ಎಂದಾಯಿತು. ಹಾಗಾದರೆ, ದರ್ಶನವನ್ನು ಉದ್ದೇಶ್ಯವಾಗಿ ಇಟ್ಟುಕೊಂಡು ಮೂರನ್ನೂ ವಿಧಾನ ಮಾಡಿದ್ದು ಕೂಡುವುದಿಲ್ಲ. (ಹಾಗಾಗಿ ವೈಕಲ್ಪಿಕವಾಗಿ ದರ್ಶನಕ್ಕೆ ಶ್ರವಣಾದಿ ಮೂರು ಸಾಧನಗಳು ಎನ್ನಬೇಕು). ಹಾಗಾಗಿ ಸಮಸ್ತೋಪಾಸನೆಗೆ ಪ್ರಮಾಣ ಪ್ರಯೋಜನಗಳಿಲ್ಲವಾದ್ದರಿಂದ ದರ್ಶನವು ಮೂರರಿಂದಲೂ ಸಾಧ್ಯ ಎನ್ನಬಾರದು. ಹೀಗಾಗಿ ಸಮಸ್ತೋ-ಪಾಸನೆಯು ನಿಷ್ಫಲವಾದ್ದರಿಂದ ಅನುಷ್ಠೇಯವಲ್ಲ.

**ಸಿದ್ಧಾಂತ :-** ಸಮಸ್ತೋಪಾಸನೆಯು ಕಾರ್ಯವೇ. ಏಕೆಂದರೆ, 'ದ್ರಷ್ಟವ್ಯಃ' ಎಂಬ ಶ್ರುತಿಯಲ್ಲಿ ದರ್ಶನವನ್ನು ಉದ್ದೇಶ್ಯವಾಗಿ ಇಟ್ಟುಕೊಂಡು ಮೂರನ್ನೂ

ವಿಧಾನಮಾಡಿದ್ದಾರೆ. ಇಲ್ಲಿ ವಿಕಲ್ಪದ್ಯೋತಕವಾದ ಶಬ್ದವಿಲ್ಲ. ಹಾಗಾಗಿ ಸಮುಚ್ಚಯವೇ ಶ್ರುತಿಯ ಅಭಿಪ್ರಾಯ ಎಂದು ತಿಳಿಯುತ್ತದೆ. ಹಾಗಾಗಿ ಶ್ರವಣಾದಿ ಮೂರೂ ಕೂಡಿಯೇ ದರ್ಶನಕ್ಕೆ ಕಾರಣವಾಗಿದೆಯಾದ್ದರಿಂದ ಮೂರೂ ಅನುಷ್ಠೇಯವೇ ಆಗಿದೆ.

ಮೂರನ್ನೂ ವಿಧಾನ ಮಾಡಿದ್ದು ವ್ಯರ್ಥ ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ, ಧ್ಯಾನದಿಂದಲೇ ದರ್ಶನವಾಗುವುದಾದರೂ ಆ ಧ್ಯಾನವು ದರ್ಶನವನ್ನು ಹುಟ್ಟಿಸಬೇಕಾದರೆ ಅದಕ್ಕೆ ಅಜ್ಞಾನ ಸಂಶಯ ವಿಪರ್ಯಯ ಎಂಬ ಪ್ರತಿಬಂಧಕವಿರಬಾರದು. ಈ ಪ್ರತಿಬಂಧಕನಿವೃತ್ತಿಯು ಶ್ರವಣ-ಮನನದಿಂದಾಗುತ್ತದೆ. ಹಾಗಾಗಿ ಶ್ರವಣಮನನಗಳು ಪ್ರತಿಬಂಧಕ-ನಿವೃತ್ತಿದ್ವಾರಾ ದರ್ಶನಕ್ಕೆ ಕಾರಣವಾದ್ದರಿಂದ ವ್ಯರ್ಥವಲ್ಲ.

**ಅಧಿಕರಣ ಫಲ** :- ಜಿಜ್ಞಾಸಾ ಸೂತ್ರದಲ್ಲಿ ಶ್ರವಣಾದಿ ಮೂರೂ ಕರ್ತವ್ಯ ಎಂದು ಹೇಳಿದೆ. ಅದರ ಸಮರ್ಥನೆಯನ್ನೇ ಇಲ್ಲಿ ಮಾಡಲಾಗಿದೆ. ಇದೇ ಈ ಅಧಿಕರಣದ ಫಲ.

## ॥ ಓಂ ಪ್ರದಾನವದೇವ ಹಿ ತದುಕ್ತಮ್ ಓಂ ॥ ೩-೩-೨೬

ಪ್ರಧಾನ ಸಾಧನವಾದ ಶ್ರವಣಾದಿಗಳಿಗೆ ಕರ್ತವ್ಯತ್ವ ಸಿದ್ಧವಾದ ಮೇಲೆ ಈ ಅಧಿಕರಣದಲ್ಲಿ ಶ್ರವಣಾದಿಗಳಿಗೆ ಅಂಗವಾದದ್ದನ್ನು ನಿರೂಪಿಸ-ಲಾಗುತ್ತಿದೆಯಾದ್ದರಿಂದ ಸಂಗತಿಯಿದೆ. ಅಥವಾ ಹಿಂದೆ ಶ್ರವಣಾದಿ ಮೂರಕ್ಕೂ ಫಲ ಯಾವುದೆಂದು ಹೇಳಿದೆ. ಈಗ ಅವುಗಳಿಗೆ ಅಂಗ ಯಾವುದೆಂದು ಹೇಳಲಾಗುತ್ತಿದೆಯಾದ್ದರಿಂದ ಸಂಗತಿಯಿದೆ. ಹಿಂದೆ ದರ್ಶನಕ್ಕೆ ಕಾರಣವಾದ ಧ್ಯಾನಕ್ಕೆ ಶ್ರವಣಮನನಗಳು ಅಂಗ ಎಂದು ಹೇಳಲಾಗಿದೆ. ಈಗ ಶ್ರವಣಾದಿ ಮೂರಕ್ಕೂ ಸೇರಿ ಅಂಗ ಯಾವುದೆಂದು ನಿರೂಪಿಸುತ್ತಿದ್ದಾರೆ. ಹೀಗೆ ಸಂಗತಿಯಿದೆ.

ದರ್ಶನಕ್ಕೆ ಸಾಧನವೆಂದು ಪ್ರಕೃತವಾದ ಶ್ರವಣಾದಿಗಳನ್ನು ಹೇಗಾದರೂ ಅನುಷ್ಠಾನ ಮಾಡಿದರೂ ಜ್ಞಾನಕ್ಕೆ ಕಾರಣವಾಗುತ್ತದೋ ಅಥವಾ ಪ್ರೀತಿಪೂರ್ವಕವಾಗಿ ಗುರುಗಳಿಂದ ಉಪದೇಶಿಸಲ್ಪಟ್ಟರೆ ಮಾತ್ರವೋ?

ಶ್ರವಣಾದಿಗಳು ಪ್ರೀತಿಪೂರ್ವಕವಾಗಿ ಗುರೂಪದಿಷ್ಟವಾದರೆ ಮಾತ್ರ ಫಲ-ಜನಕವಾಗುತ್ತದೆ ಎಂಬುದಕ್ಕೆ ಸಾಧಕವಿಲ್ಲ. ಶ್ರುತಿವಿರೋಧವೇ ಮೊದಲಾದ ಬಾಧಕವಿದೆಯೋ ಅಥವಾ ಸಾಧಕವಿದ್ದು ಬಾಧಕವಿಲ್ಲವೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

ಶ್ರವಣಾದಿಗಳಿಗೆ ಪ್ರೀತಿಪೂರ್ವಕಗುರೂಪದೇಶ ಬೇಕಿಲ್ಲ ಎಂದೇ ಪೂರ್ವಪಕ್ಷ. ಏಕೆಂದರೆ, ಗುರೂಪದೇಶ ಸಹಿತವಾದ ಶ್ರವಣಾದಿಗಳೇ ದರ್ಶನಕ್ಕೆ ಕಾರಣವಾಗುತ್ತದೆ ಎನ್ನುವುದಕ್ಕೆ ಪ್ರಮಾಣವಿಲ್ಲ. ಅದರ ಬದಲಾಗಿ ಬಾಧಕವೇ ಇದೆ. ಅದೇನೆಂದರೆ, 'ದ್ರಷ್ಟವ್ಯಃ' ಎಂಬ ಶ್ರುತಿಯಲ್ಲಿ ದರ್ಶನಕ್ಕೆ ಕೇವಲ ಶ್ರವಣಾದಿ ತ್ರಿತಯವೇ ಕಾರಣತ್ವೇನ ವಿಹಿತವಾಗಿದೆ. ಈಗ ಗುರೂಪದೇಶವೂ ಅವಶ್ಯಕ ಎಂದಾದರೆ ಈ ಶ್ರುತಿಯ ವಿರೋಧ ಬರುತ್ತದೆ. ಇದು ಒಂದು ಬಾಧಕ. ಜ್ಞಾನವು ಗುರುಪ್ರಸಾದಕ್ಕೆ ಅಧೀನವಾದರೆ, ಜ್ಞಾನಿಯ ಮೋಕ್ಷವೂ ಕೂಡ ಗುರುವಿನ ಅಧೀನ ಎಂದಾಗಿ ಎಂದಾದರೂ ಗುರುವಿಗೆ ಕೋಪ ಬಂದರೆ ಆಗ ಜ್ಞಾನಿಯಾದರೂ ಅವನಿಗೆ ಮೋಕ್ಷವಾಗದೇ ಹೋಗಬೇಕಾಗುತ್ತದೆ. ಆಗ 'ಅನಿಯಮಸ್ಸರ್ವೇಷಾಂ' ಎಂಬಲ್ಲಿ ನಿಯಮೇನ ಎಲ್ಲಾ ಜ್ಞಾನಿಗಳಿಗೂ ಮೋಕ್ಷವಾಗುತ್ತದೆ ಎಂದು ಹೇಳಿದ್ದು ತಪ್ಪಾಗುತ್ತದೆ. ಇದೇ ಇನ್ನೊಂದು ಬಾಧಕ. ಹೀಗೆ ಸಾಧಕವಿಲ್ಲ ಬಾಧಕವಿದೆಯಾದ್ದರಿಂದ ಗುರೂಪದೇಶವು ಜ್ಞಾನಕ್ಕೆ ಕಾರಣವಲ್ಲ, ಕೇವಲ ಶ್ರವಣಾದಿಗಳೇ ಕಾರಣ ಎಂದು ಸಿದ್ಧವಾಯಿತು.

ಗುರುಕೋಪವು ಮೋಕ್ಷಕ್ಕೆ ಪ್ರತಿಬಂಧಕವಾಗುವುದಿಲ್ಲ ಎನ್ನಬಾರದು. ಹಾಗಾದರೆ ಗುರುಪ್ರಸಾದವು ಜ್ಞಾನಕ್ಕೂ ಕಾರಣವಲ್ಲ ಎನ್ನಬೇಕಾಗುತ್ತದೆ.

**ಸಿದ್ಧಾಂತ** :- ಪ್ರೀತಿಪೂರ್ವಕಗುರೂಪದೇಶ ಎಂಬ ಅಂಗದಿಂದ ಕೂಡಿದ ಶ್ರವಣಾದಿಗಳೇ ಜ್ಞಾನಕ್ಕೆ ಕಾರಣವಾಗುತ್ತದೆ ಹೊರತು ಅದಿಲ್ಲದೇ ಇರುವ ಶ್ರವಣಾದಿಗಳಲ್ಲ. ಏಕೆಂದರೆ 'ಆಚಾರ್ಯವಾನ್ ಪುರುಷೋ ವೇದ' ಎಂಬಲ್ಲಿ ಜ್ಞಾನವು ಗುರುಪ್ರಸಾದಾಧೀನ ಎಂದು ತಿಳಿಯುತ್ತಿದೆ. ಹಾಗಾಗಿ ಗುರುಪ್ರಸಾದ ರಹಿತವಾದ ಶ್ರವಣಾದಿಗಳಿಂದ ಜ್ಞಾನಸಿದ್ಧಿಸುವುದಿಲ್ಲ. ಇನ್ನು 'ಸಮ್ಯಗ್ಲಕ್ಷಣಸಂಪನ್ನೋ ಯದದ್ಯಾತ್ಯುಪ್ರಸನ್ನಧೀಃ । ಶಿಷ್ಯಾಯ ಸತ್ಯಂ

ಭವತಿ ತತ್ಸರ್ವಂ ನಾತ್ರ ಸಂಶಯಃ' ಎಂಬ ಸ್ಮೃತಿಯಿಂದಲೂ ಹಾಗೆ 'ನಾತಿ ಪ್ರಸನ್ನಹೃದಯೋ ಯದ್ದದ್ಯಾದ್ಗುರುರಪ್ಯಸೌ । ನ ತತ್ಸತ್ಯಂ ಭವೇತ್ತಸ್ಮಾದರ್ಚನೀಯೋ ಗುರುಸ್ಸದಾ' ಎಂಬ ಸ್ಮೃತಿಯಿಂದಲೂ ಗುರುಪ್ರಸಾದವು ಅವಶ್ಯಕ ಎಂದು ತಿಳಿಯುತ್ತಿದೆ. 'ದ್ರಷ್ಟವ್ಯಃ' ಎಂಬ ಶ್ರುತಿಯ ವಿರೋಧವೂ ಇಲ್ಲ, ಏಕೆಂದರೆ, ಶ್ರವಣಾದಿಗಳು ಪ್ರಧಾನ ಸಾಧನ. ಗುರುಪ್ರದಾನವು ಶ್ರವಣಾದಿಗಳಿಗೆ ಅಂಗ. (ಶ್ರುತಿಯಲ್ಲಿ ಪ್ರಧಾನಸಾಧನಗಳನ್ನು ಹೇಳಿದ್ದಾರೆ).

**ಪ್ರಶ್ನೆ** :- ಜ್ಞಾನವು ಗುರುಪ್ರದಾನಾಧೀನವಾದ್ದರಿಂದ ಗುರುವು ಅಂಗವಾಗುವುದು ಹೇಗೆ ? ಅದೇ ಪ್ರಧಾನವಾಗಬೇಕಲ್ಲವೇ?

**ಉತ್ತರ** :- ಸೋಮಯಾಗವು ಸೋಮರಸಸಾಧ್ಯ (ಉತ್ಪಾದ್ಯ). ಆದರೆ ಸೋಮಯಾಗವು ದೃಢಮುಷ್ಟಿನಿಪೀಡನಾಧೀನವಾಗಿದೆ. (ಗಟ್ಟಿಯಾಗಿ ಸೋಮಲತೆಯನ್ನು ಹಿಂಡುವುದು) ದೃಢಮುಷ್ಟಿನಿಪೀಡನವಿಲ್ಲದೇ ಸೋಮಪ್ರಾಪ್ತಿಯಿಲ್ಲ. ಸೋಮರಸವಿಲ್ಲದೇ ಸೋಮಯಾಗವಿಲ್ಲ. ಹಾಗಿದ್ದರೂ ದೃಢಮುಷ್ಟಿನಿಪೀಡನವು ಅಂಗವೇ ಆಗಿದೆ. ಸೋಮರಸವೇ ಪ್ರಧಾನಸಾಧನ. ಅದರಂತೆ ಜ್ಞಾನವು ಗುರುಪ್ರದಾನಾಧೀನವಾಗಿದ್ದರೂ ಅದು ಜ್ಞಾನಕಾರಣ-ವಾದ ಶ್ರವಣಾದಿಗಳಿಗೆ ಅಂಗವಾಗಬಹುದು.

**ಪ್ರಶ್ನೆ** :- ಗುರುಪ್ರದಾನವು ದ್ರಷ್ಟವ್ಯ ಶ್ರುತಿಗೆ ಅಭಿಮತವೆಂದು ಹೇಗೆ ತಿಳಿಯುತ್ತದೆ?

**ಉತ್ತರ** :- ಗುರುಪ್ರದಾನವು ದ್ರಷ್ಟವ್ಯಃ ಎಂಬ ಶ್ರುತಿಯಲ್ಲಿ ಸಾಕ್ಷಾತ್ ವಿಹಿತವಾಗದೇ ಹೋದರೂ, ಗುರುಪ್ರದಾನವು ಅಂಗವಾದ್ದರಿಂದ ಅಂಗವು ಪ್ರಧಾನಸಾಧನದ ಸಮಾನಯೋಗಕ್ಷೇಮವುಳ್ಳದಾದ್ದರಿಂದ ಅರ್ಥಾತ್ ಸಿದ್ಧವಾಗುತ್ತದೆ. ಹೇಗೆ ದೃಢಮುಷ್ಟಿನಿಪೀಡನವು ಸಾಕ್ಷಾತ್ ವಿಹಿತವಾಗದೇ ಹೋದರೂ ಅರ್ಥಾತ್ ಸಿದ್ಧವಾಗಿದೆಯೋ ಹಾಗೆ. ಬೇರೆ ಪ್ರಮಾಣಗಳಿಂದಲೂ ಗುರುಪ್ರದಾನವು ಪ್ರಾಪ್ತವಾಗಿದೆ. ಹೀಗಾಗಿ ಗುರುಪ್ರದಾನ ದ್ರಷ್ಟವ್ಯಃ ಶ್ರುತಿಗೆ ಅಭಿಮತ ಎಂದೇ ಹೇಳಬೇಕು. (ಇತಿಕರ್ತವ್ಯತಾಸಹಿತವಾದ ಸಾಧನವನ್ನೇ ಶ್ರುತಿಯು ವಿಧಾನ ಮಾಡುವುದು. ಇತಿಕರ್ತವ್ಯತಾವು ಅರ್ಥಾತ್ ಅಥವಾ ವಚನಾಂತರದಿಂದ ಸಿದ್ಧವಾಗುತ್ತದೆ. ಅದೇ ರೀತಿ ಇಲ್ಲಿ ಗುರುಪ್ರದಾನವೂ ಕೂಡ ಎಂದು ಅಭಿಪ್ರಾಯ).

ಗುರುಕೋಪದಿಂದ ಜ್ಞಾನವಾಗಲೀ, ಜ್ಞಾನಿಗೆ ಆಗುವ ಮೋಕ್ಷವಾಗಲೀ ಇಲ್ಲ ಎಂದಾಗುವುದಿಲ್ಲ. ಏಕೆಂದರೆ, ಜ್ಞಾನ ಹಾಗು ಮೋಕ್ಷ ಇವೆರಡೂ ಭಗವದಧೀನ. ಹಾಗಾಗಿ ಗುರುಕೋಪದಿಂದ ಜ್ಞಾನ, ಮೋಕ್ಷಗಳ ಅಭಾವ ಎಂಬುದಿಲ್ಲ. ಹಾಗಾದರೆ ಗುರುಶಾಪವು ವ್ಯರ್ಥ ಎನ್ನಬಾರದು. 'ಜ್ಞಾನಿನೋ ಗುರುಶಾಪೇಽಪಿ' ಎಂಬ ಸ್ಮೃತಿಯಿಂದ ಗುರುಶಾಪವು ಜ್ಞಾನಾದಿಗಳ ಹ್ರಾಸಕ್ಕೆ ಕಾರಣವಾಗುತ್ತದೆ ಎಂದು ತಿಳಿಯುತ್ತಿದೆ. ಹಾಗಾಗಿ ಅದು ಸಾರ್ಥಕವೇ ಆಗಿದೆ.

**ಅಧಿಕರಣ ಫಲ :-** 'ಇತರೇತ್ವರ್ಥಸಾಮಾನ್ಯಾತ್' ಎಂಬಲ್ಲಿ ಉಪಾಸನೆಗೆ ಗುರುಸಾಪೇಕ್ಷತ್ವವನ್ನು ಹೇಳಲಾಗಿದೆ. ಅದರ ಸಮರ್ಥನೆಯನ್ನೇ ಇಲ್ಲಿ ಮಾಡಲಾಗಿದೆ. ಇದೇ ಈ ಅಧಿಕರಣದ ಪ್ರಯೋಜನ.

## ॥ ಓಂ ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ ಓಂ ॥
## ೩-೩-೨೭

ಪೂರ್ವ ಪ್ರಕೃತವಾದ ಅಂಗಾಂಗಿಗಳ ಮಧ್ಯೆ ಅಂಗವೇ ಪ್ರಬಲ ಎಂದು ಸಾಧನೆ ಮಾಡುತ್ತಿರುವುದರಿಂದ ಸಂಗತಿಯಿದೆ. ಶ್ರವಣಾದಿ ಸಾಧನ ಮತ್ತು ಅದಕ್ಕೆ ಅಂಗವಾದ ಗುರುಪ್ರದಾನ ಇವೆರಡು ಸಮಬಲವಾಗಿದೆಯೋ ಅಥವಾ ಯಾವುದಾದರೂ ಒಂದು ಪ್ರಬಲವಾಗಿದೆಯೋ? ಗುರುಶಿಷ್ಯರಿಬ್ಬರೂ ಪುರುಷರಾದ್ದರಿಂದ ಈ ಪುರುಷತ್ವಸಾಮ್ಯವು ಗುರುವಿನ ಪ್ರದಾನ ಶಿಷ್ಯನ ಪ್ರಯತ್ನ ಇವೆರಡಕ್ಕೂ ಸಾಮ್ಯವನ್ನು ತಂದುಕೊಡುತ್ತದೆಯೋ ಇಲ್ಲವೋ?

ಹಾಗೇ ಎರಡರಲ್ಲಿ ಒಂದು ಪ್ರಬಲ ಎಂಬ ಪಕ್ಷದಲ್ಲೂ ಶಿಷ್ಯಪ್ರಯತ್ನ ಪ್ರಬಲವೋ ಅಥವಾ ಗುರುಪ್ರದಾನವೋ? ಗುರುಪ್ರದಾನವು ಪ್ರಬಲ ಎನ್ನುವುದಕ್ಕೆ ಸಾಧಕವಿಲ್ಲ ಬಾಧಕವಿದೆಯೋ ಅಥವಾ ಸಾಧಕವಿದೆ ಬಾಧಕ-ವಿಲ್ಲವೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

ಗುರುಪ್ರದಾನವು ಪ್ರಬಲವಲ್ಲ ಎಂದೇ ಪೂರ್ವಪಕ್ಷ. ಏಕೆಂದರೆ ಸಾಧನಕ್ಕಿಂತ ಇತಿಕರ್ತವ್ಯವೇ ಪ್ರಧಾನವಾಗಿರುವುದು ಎಲ್ಲೂ ಕಂಡಿಲ್ಲ. ಮತ್ತು ಗುರುಪ್ರದಾನವೇ ಪ್ರಬಲ ಎಂದರೆ ಅದಕ್ಕೆ ಇತಿಕರ್ತವ್ಯತ್ವವೇ

ಇಲ್ಲ ಎನ್ನಬೇಕಾಗುತ್ತದೆ. ಜೊತೆಗೆ ಶ್ರವಣಾದಿಗಳು ವ್ಯರ್ಥವಾಗ-ಬೇಕಾಗುತ್ತದೆ. ಈ ಎರಡು ಬಾಧಕವಿರುವುದರಿಂದ ಹಾಗು ಯಾವುದೇ ಸಾಧಕವಿಲ್ಲದಿರುವುದರಿಂದ ಗುರುಪ್ರದಾನವು ಪ್ರಬಲ ಎನ್ನಬಾರದು. ಶಿಷ್ಯ-ಪ್ರಯತ್ನರೂಪವಾದ ಶ್ರವಣಾದಿಗಳೇ ಪ್ರಬಲ ಎನ್ನಬೇಕು. ಏಕೆಂದರೆ, ಶ್ರವಣಾದಿಗಳೇ ಪ್ರಧಾನಸಾಧನವಾಗಿವೆಯಾದ್ದರಿಂದ. ಶಿಷ್ಯಪ್ರಯತ್ನಕ್ಕೆ ಪ್ರಾಬಲ್ಯ ಒಪ್ಪದಿದ್ದರೂ, ಗುರುಶಿಷ್ಯರಿಬ್ಬರೂ ಪುರುಷರೇ ಆದ್ದರಿಂದ ಗುರುಪ್ರದಾನ ಶಿಷ್ಯಪ್ರಯತ್ನ ಇವೆರಡಕ್ಕೂ ಸಾಮ್ಯವನ್ನೇ ಹೇಳಬೇಕೇ ಹೊರತು ಶಿಷ್ಯಪ್ರಯತ್ನ ದುರ್ಬಲ ಎನ್ನಬಾರದು. ಇವೆರಡರಲ್ಲಿ ಒಂದು ನ್ಯೂನವಾಗಿ ಇನ್ನೊಂದು ಅಧಿಕವಾಗಲು ಯಾವುದೇ ವಿಶೇಷಕಾರಣವಿಲ್ಲ.

**ಸಿದ್ಧಾಂತ** :- ಗುರುಪ್ರದಾನವೇ ಪ್ರಬಲ. ಹೇಗೆಂದರೆ, ಗುರುಪ್ರದಾನ ಹಾಗು ಶಿಷ್ಯಪ್ರಯತ್ನಕ್ಕೆ ಸಾಮ್ಯವನ್ನು ಹೇಳಬಾರದು. ಗುರುಶಿಷ್ಯರಿಬ್ಬರೂ ಪುರುಷರೇ ಆದರೂ ಅವರಲ್ಲಿ ಗುರುತ್ವ ಶಿಷ್ಯತ್ವ ಎಂಬ ವಿಶೇಷವಿದ್ದೇ ಇದೆ. ಅದರಂತೆ ಅವರಿಬ್ಬರ ಕ್ರಿಯೆಗಳಾದ ಪ್ರದಾನ ಹಾಗೂ ಪ್ರಯತ್ನಗಳಲ್ಲಿಯೂ ನ್ಯೂನಾಧಿಕ ಭಾವವಿರಲು ಸಾಧ್ಯವಿದೆ. ಪುರುಷತ್ವ ಎಂಬ ಹೇತುವು ಅಪ್ರಯೋಜಕ. ನ್ಯೂನಾಧಿಕಭಾವವನ್ನೂ ಕೂಡ ಗುರುಪ್ರದಾನವೇ ಅಧಿಕ, ಶಿಷ್ಯಪ್ರಯತ್ನ ನ್ಯೂನ ಎಂದು ಹೀಗೆ ಹೇಳುವುದೇ ಸರಿ. ಏಕೆಂದರೆ ಗುರು-ಪ್ರದಾನ ಅಧಿಕವಾಗಲು 'ಲಿಂಗಬಾಹುಲ್ಯ' ಎಂಬ ಸಾಧಕವಿದೆ. ಗುರು-ಪ್ರದಾನವು ಪ್ರಧಾನವಾದರೆ ಅದಕ್ಕೆ ಅಂಗತ್ವ (ಇತಿ ಕರ್ತವ್ಯತ್ವ)ವೇ ಕೂಡುವುದಿಲ್ಲ ಎಂಬ ಬಾಧಕವೂ ಇಲ್ಲ. ಏಕೆಂದರೆ, ಯಾವುದು ಅಂಗವೋ ಅದು ಪ್ರಧಾನವಲ್ಲ ಎಂದೇನಿಲ್ಲ. ಹಿಂಸೆಯು ಪಾಪಕ್ಕೆ ಕಾರಣವಾಗುತ್ತದೆ. ಆದರೆ, ಯಜ್ಞದಲ್ಲಿ ಮಾಡುವ ಪಶುಹಿಂಸೆಯು ಪಾಪಹೇತುವಾಗುವುದಿಲ್ಲ. ಏಕೆಂದರೆ, ಪಶುವನ್ನು ಹಾಗೇ ಹಿಂಸಿಸಿದರೆ, ಅದು ಪಾಪಹೇತುವಾಗುತ್ತದೆ. ಯಜ್ಞದಲ್ಲಿ ಪ್ರೋಕ್ಷಣ, ಅಂಜನ, ಪರ್ಯಗ್ನಿಕರಣ ಎಂಬ ಇತಿಕರ್ತವ್ಯ ಅನುಷ್ಠಾನ ಮಾಡುವುದರಿಂದ ಪಶುಹಿಂಸೆಯು ಪುಣ್ಯಜನಕವೇ ಆಗುತ್ತದೆ. ಇಲ್ಲೆಲ್ಲಾ ಇತಿಕರ್ತವ್ಯವು ಪ್ರಬಲವಾಗಿರುವುದು ಕಂಡಿದೆ. ಅದರಂತೆ ಗುರುಪ್ರದಾನವು ಅಂಗ (ಇತಿಕರ್ತವ್ಯತಾ ರೂಪ)ವಾದರೂ ಅದು ಪ್ರಧಾನವಾಗಬಹುದು. ಪ್ರಧಾನವಾದ ಮಾತ್ರಕ್ಕೆ ಅದಕ್ಕೆ ಅಂಗತ್ವವೇ ಕೂಡುವುದಿಲ್ಲ ಎಂಬುದು ಸರಿಯಲ್ಲ.

ಗುರುಪ್ರದಾನವೇ ಪ್ರಬಲವಾದರೆ ಅದೊಂದೇ ಸಾಕು ಶ್ರವಣಾದಿಗಳು ವ್ಯರ್ಥ ಎಂಬ ಬಾಧಕಕ್ಕೂ ಇಲ್ಲ. ಏಕೆಂದರೆ 'ಶ್ರೋತವ್ಯ...' ಎಂಬ ಶ್ರುತಿಯು 'ಗುರುಪ್ರಸಾದೋ ಬಲವಾನ್' ಎಂಬ ಸ್ಮೃತಿಯೂ ಕೂಡ ಶ್ರವಣಾದಿಗಳು ಅವಶ್ಯ ಎಂದು ಹೇಳುತ್ತಿವೆ. ಹಾಗಾಗಿ ಶ್ರವಣಾದಿಗಳು ವ್ಯರ್ಥವಲ್ಲ.

ಲಿಂಗಬಾಹುಲ್ಯ ಎಂಬ ಸಾಧಕವು ತತ್ತ್ವಪ್ರಕಾಶಿಕಾದಲ್ಲಿ ಸ್ಪಷ್ಟವಾಗಿ ನಿರೂಪಿತವಾಗಿದೆ.

**ಅಧಿಕರಣ ಫಲ :-** ಹಿಂದಿನ ಅಧಿಕರಣದಲ್ಲಿ ಇತಿಕರ್ತವ್ಯತಾ ಸಹಿತವಾದ ಶ್ರವಣಾದಿಗಳೇ ಜ್ಞಾನಕ್ಕೆ ಕಾರಣ ಎಂದು ಹೇಳಲಾಗಿದೆ. ಅದರ ಸಮರ್ಥನೆಯನ್ನೇ ಈ ಅಧಿಕರಣದಲ್ಲಿ ಮಾಡಲಾಗಿದೆ. ಗುರುಪ್ರದಾನವು ಪ್ರಬಲ ಎಂದು ಸಮರ್ಥನೆ ಮಾಡದೇ ಹೋದರೆ ಕೆಲವುಕಡೆ (ಸಾಧನವು ಮೂರು ವಿಧವಾಗಿರುವುದರಿಂದ ಕರಣಪ್ರಧಾನ ಎಂಬ ಪಕ್ಷದಲ್ಲಿ ಹಾಗು ಇತಿಕರ್ತವ್ಯ ಕರಣಗಳಿಗೆ ಸಾಮ್ಯ ಎಂಬ ಪಕ್ಷದಲ್ಲಿ) ಗುರುಪ್ರದಾನವು ಅನಪೇಕ್ಷಿತ ಎಂದಾಗುತ್ತದೆ. ಆಗ 'ಪ್ರದಾನವದೇವ' ಎಂಬಲ್ಲಿ ಹೇಳಿದ್ದು ಸರಿಯಲ್ಲ ಎಂದಾಗುತ್ತದೆ. ಇದೇ ಈ ಅಧಿಕರಣದ ಪ್ರಯೋಜನ.

## ।। ಓಂ ಪೂರ್ವವಿಕಲ್ಪಃ ಪ್ರಕರಣಾತ್ಸ್ಯಾತ್ಕ್ರಿಯಾಮಾನಸವತ್ ಓಂ ।। ೩-೩-೨೮

ಹಿಂದಿನ ಅಧಿಕರಣದಲ್ಲಿ ಗುರುಪ್ರಸಾದವೇ ಪ್ರಬಲವೆಂದು ಹೇಳಲಾಯಿತು. ಇಲ್ಲಿ ಗುರುಗಳ ವಿಚಾರ ಮಾಡಲ್ಪಡುತ್ತದೆ. ಆದ್ದರಿಂದ ಸಂಗತಿ. ಗುರುಗಳು ಮೊದಲು ದೊರೆತವರೇ ಯಾವಾಗಲೂ ಇರಬೇಕೆಂಬ ನಿಯಮವಿದೆಯೋ ಅಥವಾ ಮತ್ತೊಬ್ಬರಾಗಬಹುದೋ? ಮೊದಲು ಪ್ರಾಪ್ತರಾದ ಗುರುಗಳನ್ನು ಬಿಡುವುದರಲ್ಲಿ ಕಾರಣವಿಲ್ಲವೋ ಬಾಧಕ-ವಿದೆಯೋ ಅಥವಾ ಕಾರಣವಿದ್ದು ಬಾಧಕವಿಲ್ಲವೋ? ಬೇರೆ ಗುರುಗಳನ್ನು ಸ್ವೀಕರಿಸಬಹುದು ಎಂಬ ಪಕ್ಷದಲ್ಲಿ ಆ ಗುರುಗಳು ಯಾರಾದರೂ ಆಗ-ಬಹುದೋ ಅಥವಾ ಪೂರ್ವಗುರುಗಳಿಗಿಂತ ಉತ್ತಮರು ಮತ್ತು ಸಮಗ್ರಾನು-ಗ್ರಹ ಮಾಡುವವರಾಗಬೇಕೋ? ಎಂಬ ವಿಚಾರವು ಇಲ್ಲಿ ಮಾಡಲ್ಪಟ್ಟಿದೆ.

**ಪೂರ್ವಪಕ್ಷ** :- ಶುಭಲಾಭಕ್ಕೋಸ್ಕರವಾಗಿ ಎಲ್ಲರೂ ಗುರುಗಳನ್ನು ಅವಲಂಬಿಸುತ್ತಾರೆ. ಆ ಶುಭಲಾಭವು ಪೂರ್ವಪ್ರಾಪ್ತಗುರುಗಳಿಂದ ಆಗುವುದಾದರೆ, ಅವರನ್ನು ಬಿಡಲು ಕಾರಣವಿಲ್ಲ. 'ಗುರುಮಂತ್ರಪರಿತ್ಯಾಗೀ ರೌರವಂ ನರಕಂ ವ್ರಜೇತ್' ಎಂಬುದಾಗಿ ನರಕಪ್ರಾಪ್ತಿಯಾಗುತ್ತದೆ ಎಂಬ ಬಾಧಕವಿರುವುದರಿಂದಲೂ, ಪೂರ್ವಪ್ರಾಪ್ತ ಗುರುಗಳನ್ನು ಬಿಟ್ಟು ಮತ್ತೊಬ್ಬರನ್ನು ಆಶ್ರಯಿಸಬಾರದು ಬೇರೊಬ್ಬರನ್ನು ಆಶ್ರಯಿಸಬೇಕು ಎಂಬ ಪಕ್ಷದಲ್ಲಿಯೂ 'ಇಂಥವರೇ' ಆಗಬೇಕು ಎಂಬುದಕ್ಕೆ ನಿಯಾಮಕವಿಲ್ಲದೇ ಇರುವುದರಿಂದ ಯಾರನ್ನಾದರೂ ಸ್ವೀಕರಿಸಬಹುದು.

**ಸಿದ್ಧಾಂತ** :- ಗುರುಗಳನ್ನು ಸ್ವೀಕರಿಸುವುದು ಕೇವಲ ಶುಭಲಾಭಕ್ಕೋಸ್ಕರ ಅಲ್ಲ. ಕಿಂತು ತನಗೇ ಅಪೇಕ್ಷಿತವಾದ ಮತ್ತು ಯೋಗ್ಯವಾದ ಎಲ್ಲಾ ಶುಭ-ಲಾಭಕ್ಕೋಸ್ಕರವೇ ಆಗಿರುತ್ತದೆ. ಮೊದಲು ದೊರೆತವರು ಅದಕ್ಕೆ ಅಸಮರ್ಥ-ರಾಗಿದ್ದರೆ, ಸಮಗ್ರಾನುಗ್ರಹ ಮಾಡುವ ಮತ್ತೊಬ್ಬರನ್ನು ಸ್ವೀಕರಿಸಬೇಕು. ಅವರು ಮೊದಲಿನವರಿಗಿಂತ ಉತ್ತಮರಾಗಿರಬೇಕು. ಅನಂತರದ ಗುರುಗಳು ಪೂರ್ವರಿಗೆ ಸಮರಾಗಿದ್ದರೆ, ಪೂರ್ವಗುರುಗಳ ಅನುಜ್ಞೆಯಿಂದ ಸ್ವೀಕಾರ ಮಾಡಬಹುದು. ಅಥವಾ ಬಿಡಲೂಬಹುದು. ಸ್ವೀಕಾರ ಮಾಡಲೇಬೇಕು ಎಂಬ ನಿಯಮವೇನೂ ಇಲ್ಲ. ಸಮಾನವಾದ ಫಲವುಳ್ಳ ಎರಡು ಧ್ಯಾನಗಳ ಪೈಕಿ ಹೇಗೆ ವಿಕಲ್ಪವೋ ಹಾಗೆಯೇ ಇಲ್ಲಿ ವಿಕಲ್ಪ. ಅನಂತರ ಪ್ರಾಪ್ತಗುರುಗಳು ಉತ್ತಮರಾಗಿದ್ದರೆ ಈ ಪ್ರಮೇಯವು 'ಪೂರ್ವಸ್ಮಾದುತ್ತಮೋ ಲಬ್ಧಃ' ಮತ್ತು 'ಸಮಗ್ರಾನುಗ್ರಹಂ ಕಶ್ಚಿತ್' ಎಂಬ ಸ್ಮೃತಿಯಿಂದಲೂ ಮತ್ತು 'ಬ್ರಹ್ಮೋ-ಪಾಸ್ವ' ಎಂಬ ಶ್ರುತಿಯಲ್ಲಿ ಪೂರ್ವಗುರುಗಳು ಸ್ವಸಮ ಅಥವಾ ಉತ್ತಮ-ಗುರುಗಳಲ್ಲಿ ಹೇಗೆ ನಡೆದುಕೊಳ್ಳಬೇಕು ಎಂದು ಉಪದೇಶ ಮಾಡಿದ್ದರಿಂದಲೂ ಸಿದ್ಧವಾಗುತ್ತದೆ. 'ಗುರುಮಂತ್ರಪರಿತ್ಯಾಗೀ' ಎಂಬಲ್ಲಿ ದೋಷ ಹೇಳಿದ್ದು ಅದು ಅಧಮಗುರುಸ್ವೀಕಾರವಿಷಯಕ-, ವ್ಯರ್ಥಸ್ವೀಕಾರವಿಷಯಕ- ಅಥವಾ ಪೂರ್ವಾನನುಜ್ಞಾವಿಷಯಕಸ್ವೀಕಾರ- ಆಗಿದೆ ಎಂದು ಭಾವಿಸಬೇಕು. ಸರ್ವಜ್ಞಗುರುಗಳು ಹೇಳಿದ ಪ್ರಕಾರ ಗುಣಧ್ಯಾನ ಮಾಡಬೇಕು ಎಂಬುದಾಗಿ 'ಇತರೇ ತು' ಎಂಬ ಅಧಿಕರಣದಲ್ಲಿ ಹೇಳಿದ ವಿಷಯಸಮರ್ಥನೆಯೇ ಇದರ ಫಲ.

## ॥ ಓಂ ವಿದ್ಯೈವ ತು ನಿರ್ಧಾರಣಾತ್ ಓಂ ॥ ೩-೩-೪೯

ಇದುವರೆಗೆ ಉಪಾಸನೆಗೆ ಬೇಕಾದ ಗುರುಪ್ರಸಾದರೂಪ ಸಹಕಾರಿ, ಫಲಭೇದ, ಅರ್ಹತೆ ಹಾಗೂ ಧ್ಯಾನ ಮಾಡಬೇಕಾದ ರೂಪಗುಣಗಳನ್ನು ಹೇಳಲಾಯಿತು. ಆದರೆ, ಸುಲಭವಾದ ಕರ್ಮದಿಂದ ಮೋಕ್ಷವಾಗುತ್ತದೆ ಎಂಬ ಶ್ರುತಿ ಇರುವುದರಿಂದ ಉಪಾಸನೆಯೇ ಬೇಕೆಂಬ ನಿರ್ಣಯವಾಗ-ದಿರುವುದರಿಂದ ಉಪಾಸನೆಯ ವಿಚಾರವೆಲ್ಲವೂ ಗೋಡೆ ಇಲ್ಲದೇ ಚಿತ್ರ ಬಿಡಿಸಿದಂತಾಯಿತು ಎಂದು ಶಂಕೆ ಮಾಡುವುದರಿಂದ ಈ ಅಧಿಕರಣ ಸಂಗತವಾಯಿತು.

ಈ ಅಧಿಕರಣದಲ್ಲಿ ಉಪಾಸನೆಯು ಬೇಕಾಗಿಲ್ಲವೋ ಅಥವಾ ಬೇಕೋ? ಉಪಾಸನೆಯು ಜ್ಞಾನದ್ವಾರಾ ಮೋಕ್ಷಕ್ಕೆ ಕಾರಣವೋ ಎಂಬ ನಿರ್ಣಯ ಶಕ್ಯವಲ್ಲವೋ ಅಥವಾ ಶಕ್ಯವೋ? ಕರ್ಮವು ಮೋಕ್ಷಕಾರಣ ಎಂಬ ವಾಕ್ಯ-ಗಳಿಗೆ 'ಭಾಕ್ತಂ ವಾ' ಎಂಬ ಸೂತ್ರದಲ್ಲಿ ಹೇಳಿದಂತೆ 'ಪರಂಪರಯಾ ಕರ್ಮವು ಮೋಕ್ಷಕಾರಣ' ಎಂಬ ಅಮುಖ್ಯಾರ್ಥ ಹೇಳುವುದು ಅಯುಕ್ತವೋ ಯುಕ್ತವೋ? ಕರ್ಮಣಾ ಎಂಬಲ್ಲಿ ತೃತೀಯಾ ವಿಭಕ್ತಿಯಿಂದ ಬೋಧಿತವಾದ 'ಕರ್ಮವು ಸಾಕ್ಷಾತ್ ಮುಕ್ತಿಹೇತು' ಎಂಬುದನ್ನು ಕೈಬಿಡಲು ಪ್ರಮಾಣ-ವಿಲ್ಲವೋ ಇದೆಯೋ? ಕರ್ಮವು ಜ್ಞಾನದ್ವಾರಾ ಮುಕ್ತಿ ಕಾರಣ ಎಂಬ ಪಕ್ಷದಲ್ಲಿಯೂ ಪರೋಕ್ಷ ಜ್ಞಾನಮಾತ್ರದ ಮೂಲಕವೋ ಅಥವಾ ಅಪರೋಕ್ಷ ಜ್ಞಾನಮೂಲಕವೂ ಮುಕ್ತಿ ಕಾರಣವೋ? ಎಂಬ ಇಷ್ಟು ವಿಚಾರಗಳು ಒಂದಕ್ಕೊಂದು ಪೂರಕವಾದ್ದರಿಂದ ಇಲ್ಲಿ ಚರ್ಚಿಸಲ್ಪಟ್ಟಿವೆ.

**ಪೂರ್ವಪಕ್ಷ** :- 'ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ' ಎಂಬಲ್ಲಿರುವ ಅವಧಾರಣಾರ್ಥಕ ಏವಕಾರವನ್ನು 'ಆಸ್ಥಿತಾ ಏವ ಎಂಬಲ್ಲಿ ಅನ್ವಯಮಾಡಿ (ಕರ್ಮದಿಂದಲೇ ಮೋಕ್ಷ ಎಂದು ಅನ್ವಯ ಮಾಡದೇ ಕರ್ಮದಿಂದ ಮೋಕ್ಷವನ್ನು ಹೊಂದಿಯೇ ಇದ್ದಾರೆ). ಸಾವಕಾಶಗೊಳಿಸ-ಬಹುದಾದರೂ ಕರ್ಮಣಾ ಎಂಬ ತೃತೀಯಾ ವಿಭಕ್ತಿಯಿಂದ ಸಂಸಿದ್ಧಿ ಶಬ್ದಿತ ಮೋಕ್ಷವನ್ನು ಕುರಿತು ಸಾಕ್ಷಾತ್ ಕಾರಣತ್ವವು ಬೋಧಿತವಾಗಿದೆ. ಅದಕ್ಕೆ ಅಪವಾದಕವಾದ ಯಾವ ಪ್ರಮಾಣವೂ ಇಲ್ಲದಿರುವುದರಿಂದ ಕರ್ಮವೇ

ಮೋಕ್ಷಕ್ಕೆ ಕಾರಣ 'ತರತಿ ಶೋಕಮಾತ್ಮವಿತ್' ಎಂಬ ಶ್ರುತಿಯೂ ಜ್ಞಾನವು ಮುಕ್ತಿಕಾರಣ ಎಂದು ಮಾತ್ರ ಹೇಳುತ್ತಿದೆ ಹೊರತು ಸಾಕ್ಷಾತ್ ಕಾರಣತ್ವ-ವನ್ನಲ್ಲ. ಆದ್ದರಿಂದ ಅದು ಅಪವಾದಕವಾಗುವುದಿಲ್ಲ. ಹೀಗಾಗಿ 'ಭಾಕ್ತಂ ವಾ' ಎಂಬಲ್ಲಿ 'ಕರ್ಮಕ್ಕೆ ಮುಕ್ತಿ ಹೇತುತ್ವವು ಗೌಣ' ಎಂದು ಹೇಳಿದ್ದು ಯುಕ್ತ-ವಲ್ಲವಾದ್ದರಿಂದ ಜ್ಞಾನದ್ವಾರಾ ಶ್ರವಣಾದ್ಯುಪಾಸನವೇ ಮುಕ್ತಿಹೇತು ಎಂದು ನಿರ್ಣಯ ಶಕ್ಯವಲ್ಲ. ಮತ್ತು ಲಘುವಾದ ಕರ್ಮರೂಪ ಉಪಾಸನೆಯಿಂದ ಫಲಸಿದ್ಧಿಸುವಾಗ ಕಠಿಣವಾದ ಉಪಾಸನೆಯು ಸರಿಯಲ್ಲ.

ಅಥವಾ ಜ್ಞಾನದ್ವಾರಾ ಉಪಾಸನೆಯು ಮುಕ್ತಿಹೇತುವಾಗಲಿ. ಆದರೂ 'ತಮೇವಂ ವಿದ್ವಾನ್' ಎಂಬ ಶ್ರುತಿಯ ಪ್ರಕಾರ ಪರೋಕ್ಷಜ್ಞಾನದ್ವಾರಾ ಮುಕ್ತಿಯಾಗುತ್ತದೆ. ಅದು ಶ್ರವಣದಿಂದಲೇ ಸಾಧ್ಯ. ಹೀಗಿರುವಾಗ ಅಪರೋಕ್ಷಜ್ಞಾನಸಾಧಕವಾದ ಧ್ಯಾನರೂಪ ಉಪಾಸನೆಯು ಅನಗತ್ಯ.

**ಸಿದ್ಧಾಂತ** :- 'ನಾನ್ಯಃ ಪಂಥಾ ಅಯನಾಯ ವಿದ್ಯತೇ' (ಜ್ಞಾನವನ್ನು ಹೊರತುಪಡಿಸಿ ಮೋಕ್ಷಕ್ಕೆ ಬೇರೆ ಕಾರಣವಿಲ್ಲ). ಎಂಬ ಜ್ಞಾನವಚನವು ಸಾವಧಾರಣವಾದ್ದರಿಂದ ಕರ್ಮವಚನಕ್ಕಿಂತ ಪ್ರಬಲವಾಗಿದೆ. ಇದೇ ವಾಕ್ಯವು ಕರ್ಮವು ಸಾಕ್ಷಾತ್ ಮೋಕ್ಷಕಾರಣ ಎನ್ನುವುದಕ್ಕೆ ಅಪವಾದಕವಾಗಿದೆ. 'ಕರ್ಮಣೈವ' ಎಂಬ ಸ್ಮೃತಿವಾಕ್ಯಕ್ಕೂ ಕರ್ಮವು ಪರಂಪರಯಾ ಮುಕ್ತಿಕಾರಣ ಎಂಬ ಅರ್ಥವನ್ನೇ ಹೇಳಬೇಕು. ಆದ್ದರಿಂದ ಉಪಾಸನೆಯೇ ಜ್ಞಾನದ್ವಾರಾ ಮುಕ್ತಿಹೇತು ಎಂದು ನಿರ್ಣಯಿಸಲು ಬರುವುದರಿಂದ ಉಪಾಸನೆ ಆವಶ್ಯಕ.

ದ್ವಾರಭೂತವಾದ ಜ್ಞಾನವಾದರೂ, ಅಪರೋಕ್ಷಜ್ಞಾನವೇ ಹೊರತು ಕೇವಲ ಪರೋಕ್ಷ ಜ್ಞಾನವಲ್ಲ. 'ತಮೇವಂ ವಿದ್ವಾನ್' ಎಂಬ ಶ್ರುತಿಯಿದ್ದರೂ ಅದಕ್ಕೆ 'ದೃಷ್ಟ್ವೈವತಂ ಮುಚ್ಯತೇ' ಎಂಬ ಶ್ರುತಿಬಲದಿಂದ ಅಪರೋಕ್ಷಜ್ಞಾನ ಪರತ್ವವನ್ನೇ ಹೇಳಬೇಕು. ಆದ್ದರಿಂದ ಅಪರೋಕ್ಷಕ್ಕಾಗಿ ಶ್ರವಣ ಮನನ ಧ್ಯಾನವೆಂದು ತ್ರಿತಯರೂಪವಾದ ಉಪಾಸನೆಯನ್ನು ಮಾಡಲೇಬೇಕು. 'ಕರ್ಮಣೈವ' ಸ್ಮೃತಿಯೂ ಸಾವಧಾರಣವಾಗಿದೆ ಎಂಬ ಶಂಕೆಯನ್ನು ಮುಂದೆ ನಿರಾಕರಿಸಲಾಗುವುದು. ಪೂರ್ವೋಕ್ತವಾದ ಉಪಾಸನೆಯ ಸಮರ್ಥನೆ ಫಲ.

## ॥ ಓಂ ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ ಓಂ ॥ ೩-೩-೩೦

'ತಮೇವಂ ವಿದ್ವಾನ್' ಎಂಬ ಶ್ರುತಿಯು ಅವಧಾರಣ ಸಹಿತವಾದ್ದರಿಂದ ಪ್ರಬಲ ಎನ್ನುವುದಾರೆ 'ಕರ್ಮಣ್ಯೈವ' ಎಂಬ ಸ್ಮೃತಿಯೂ ಕೂಡ ಅವಧಾರಣ ಸಹಿತ ಮತ್ತು ಆಪ್ತವಾಕ್ಯವಾದ್ದರಿಂದ ಪ್ರಬಲವಾಗಿದೆ ಎಂದು ಶಂಕಿಸಿದ್ದರಿಂದ ಸಂಗತಿ ಇದೆ. ಇಲ್ಲಿ ಜ್ಞಾನದ ಫಲ ಎಂದು ಪ್ರಕೃತವಾದ ಮೋಕ್ಷವು ಕರ್ಮಸಾಧ್ಯವೋ ಅಥವಾ ಜ್ಞಾನಸಾಧ್ಯವೋ? ಕರ್ಮಣ್ಯೈವ ಎಂಬ ಸ್ಮೃತಿಯು 'ನಾನ್ಯಃ ಪಂಥಾ' ಎಂಬ ಶ್ರುತಿಗಿಂತ ಪ್ರಬಲವೋ ಅಲ್ಲವೋ? ಕರ್ಮಣ್ಯೈವ ಎಂಬ ಅವಧಾರಣವು ನಿರವಕಾಶವೋ, ಸಾವಕಾಶವೋ? ಸಾವಕಾಶ ಎಂಬುದಕ್ಕೆ ಆಧಾರ ಇಲ್ಲವೋ ಇದೆಯೋ? ಎಂಬ ವಿಷಯಗಳು ಒಂದಕ್ಕೊಂದು ಪೂರಕವಾದ್ದರಿಂದ ಇಲ್ಲಿ ಚರ್ಚಿಸಲ್ಪಟ್ಟಿವೆ.

**ಪೂರ್ವಪಕ್ಷ** :- 'ಕರ್ಮಣ್ಯೈವ' ಎಂಬ ಸ್ಮೃತಿ ಇರುವುದರಿಂದ ಮೋಕ್ಷವು ಕರ್ಮಸಾಧ್ಯ. ಸಾವಧಾರಣ ಶ್ರುತಿ ಬಾಧಿತವಾದ್ದರಿಂದ ಇದು ದುರ್ಬಲ ಎನ್ನುವುದು ಸರಿಯಲ್ಲ. ಸ್ಮೃತಿಯೂ ಕೂಡ ಏವ ಎಂಬುದಾಗಿ ಅವರಧಾರಣ ಸಹಿತವಾಗಿದೆ.

ಕರ್ಮವಾಕ್ಯದಲ್ಲಿರುವ ಏವಕಾರಕ್ಕೆ ಕರ್ಮದಿಂದಲೇ ಮೋಕ್ಷ ಎಂಬುದಾಗಿ ಅರ್ಥವಲ್ಲ. ಕರ್ಮದಿಂದ ಮೋಕ್ಷವು ಜ್ಞಾನದ್ವಾರಾ ಆಗಿಯೇ ಆಗುತ್ತದೆ ಎಂದು ಅರ್ಥ ಎಂದು ಸಾವಕಾಶಗೊಳಿಸಬಹುದಲ್ಲ ಎಂದರೆ ಇದಕ್ಕೆ ಯಾವ ಪ್ರಮಾಣವೂ ಆಧಾರವಾಗಿಲ್ಲ.

ಶ್ರುತಿಸ್ಮೃತಿಗಳಿಗೆ ವಿರೋಧ ಬಂದಾಗ ಶ್ರುತಿಯೇ ಪ್ರಬಲ ಎಂದು 'ವಿರೋಧೇತ್ವನಪೇಕ್ಷಂ' ಎಂಬ ಪೂರ್ವಮೀಮಾಂಸಾ ಸೂತ್ರದಲ್ಲಿ ಹೇಳಿದ್ದರೂ ಅದು ಶ್ರುತಿಮೂಲಕವಾಗಿ ಸ್ಮೃತಿಯು ಪ್ರಮಾಣವೆನ್ನುವ ಪಕ್ಷದಲ್ಲಿ ಮಾತ್ರ. ಪ್ರಕೃತದಲ್ಲಿ ಕರ್ಮಣ್ಯೈವ ಎಂಬ ಸ್ಮೃತಿಯು ಆಪ್ತವಾಕ್ಯತ್ವೇನ ಪ್ರಮಾಣವಾಗುವುದರಿಂದ ಇದೇ ಪ್ರಬಲವಾಗುತ್ತದೆ. ಆದ್ದರಿಂದ ಕರ್ಮಸ್ಮೃತಿಯಿಂದ ಜ್ಞಾನಶ್ರುತಿಗೆ ಬಾಧ ಹೇಳಬೇಕು.

**ಸಿದ್ಧಾಂತ :-** ಮೋಕ್ಷವು ಜ್ಞಾನದಿಂದಲೇ ಸಾಧ್ಯ ಹೊರತು ಕೇವಲ ಕರ್ಮ-ದಿಂದಲ್ಲ. ಜ್ಞಾನಸಾಧ್ಯವೆನ್ನಲು ಪ್ರಬಲವಾದ ಶ್ರುತಿ ಲಿಂಗ ಉಪಪತ್ತಿ ಸ್ಮೃತಿಗಳು ಪ್ರಮಾಣವಾಗಿವೆ.

'ನಾನ್ಯಃ ಪಂಥಾವಿದ್ಯತೇ' ಎಂಬ ಅವಧಾರಣವು (ಜ್ಞಾನವನ್ನು ಹೊರತು ಪಡಿಸಿ ಮತ್ತೊಂದು ಸಾಕ್ಷಾತ್ ಸಾಧನವಿಲ್ಲ ಎನ್ನುವುದು) ನಿರವಕಾಶ-ವಾದ್ದರಿಂದ ಪ್ರಬಲ.

ಹಾಗೆಯೇ ಅನೇಕ ಕರ್ಮಗಳನ್ನು ಆಚರಿಸಿದ ಇಂದ್ರನೂ ಕೂಡ ದುಃಖಾಸಂಮಿಶ್ರವಾದ ಸುಖರೂಪ ಮೋಕ್ಷಕ್ಕಾಗಿ ತತ್ತ್ವಜ್ಞಾನವನ್ನು ಪ್ರಾರ್ಥಿಸಿದ ಎಂಬ ಲಿಂಗವು ಇದೆ. ಇದು 'ಇಂದ್ರೋಽಶ್ವಮೇಧಾನ್' ಎಂಬ ಶ್ರುತಿಸಿದ್ಧವಾದ್ದರಿಂದ ಪ್ರಬಲವೂ ಆಗಿದೆ.

ಕರ್ಮವು ಅನಿತ್ಯಫಲವುಳ್ಳದ್ದು. ಅಂತಹ ಕರ್ಮದಿಂದ ನಿತ್ಯ ಪುರುಷಾರ್ಥವಾದ ಮೋಕ್ಷವು ಸಿಗಲಾರದು ಎಂಬ ಉಪಪತ್ತಿತೂ ಇದೆ. ಇದು 'ನಾಸ್ತಿ ಅಕೃತಿಃ ಕೃತೇನ' ಎಂಬ ಶ್ರುತಿಸಿದ್ಧವೂ ನಿರ್ದುಷ್ಟವೂ ಆದ್ದರಿಂದ ಪ್ರಬಲವಾಗಿದೆ.

ಮತ್ತು 'ಕರ್ಮಣಾ ಬಧ್ಯತೇ ಜಂತುಃ' ...... ತಸ್ಮಾತ್ ಕರ್ಮ ನ ಕುರ್ವಂತಿ ಯತಯಃ ಪಾರದರ್ಶಿನಃ (ಕರ್ಮವು ಬಂಧಕ ಆದ್ದರಿಂದ ಯತಿಗಳು ಕರ್ಮದಲ್ಲಿ ಆಸಕ್ತರಲ್ಲ) ಎಂಬ ಸ್ಮೃತಿಯು ಭಗವದ್ವಾಕ್ಯವೂ ಮತ್ತು ಯುಕ್ತಿಯುಕ್ತವೂ ಆದ್ದರಿಂದ ಪ್ರಬಲವಾಗಿದೆ. ಆದ್ದರಿಂದ ಕರ್ಮ ವಾಕ್ಯಕ್ಕೆ (ಕರ್ಮಣಾ ಏವ ಸಂಸ್ಥಿತಾಃ) ಎಂಬುದಕ್ಕೆ 'ಕರ್ಮಣಾ ಸಂಸಿದ್ಧಿಂ ಆಸ್ಥಿತಾ ಏವ' ಎಂದು ಸಾವಕಾಶಗೊಳಿಸಬೇಕಾದ್ದರಿಂದ ಮೋಕ್ಷವು ಕರ್ಮ ಸಾಧ್ಯ ಎನ್ನುವುದಕ್ಕೆ ಅದು ಪ್ರಮಾಣವಲ್ಲ, ಉಪಾಸನಾ ಕರ್ತವ್ಯ ಎಂದು ಸಮರ್ಥನವೇ ಈ ಅಧಿಕರಣದ ಫಲ.

## ॥ ಓಂ ಅನುಬಂಧಾದಿಭ್ಯಃ ಓಂ ॥ ३-३-३१

ವಿದ್ಯಾಧಿಕರಣದ ಗುಣಸೂತ್ರವಾದ 'ದರ್ಶನಾಚ್ಚ' ಎಂಬಲ್ಲಿ ದರ್ಶನವು ಮುಕ್ತಿಹೇತು ಎಂದು ನಿರ್ಣಯಿಸಲ್ಪಟ್ಟಿದೆ. ಹೀಗೆ ಪ್ರಕೃತವಾದ ದರ್ಶನಕ್ಕೆ ಭಕ್ತಿಸಾಧ್ಯತ್ವವನ್ನು ಇಲ್ಲಿ ಹೇಳುತ್ತಿರುವುದರಿಂದ ಸಂಗತಿಯಿದೆ. ಪ್ರಕೃತವಾದ ದರ್ಶನವು ಭಕ್ತ್ಯಾದಿಗಳಿಲ್ಲದೇ ಕೇವಲ ಗುರುಪ್ರದಾನಸಹಿತವಾದ ಶ್ರವಣಾದಿಗಳಿಂದಲೇ ಆಗುತ್ತದೋ ಅಥವಾ ಇಲ್ಲವೋ? ದರ್ಶನಕ್ಕೆ ಕಾರಣ ವಾದ ಉಪಾಸನೆಯು ಭಕ್ತ್ಯಾದಿಗಳಿಲ್ಲದೇ ಆಗುತ್ತದೋ ಅಥವಾ ಇಲ್ಲವೋ? ಭಕ್ತ್ಯಾದಿಗಳಿಲ್ಲದೇ ಮಾಡುವ ಉಪಾಸನೆಯು ಫಲಪ್ರದವಾಗುತ್ತದೋ ಇಲ್ಲವೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

ಭಕ್ತ್ಯಾದಿಗಳಿಲ್ಲದೇ ಕೇವಲ ಗುರುಪ್ರದಾನಸಹಿತವಾದ ಶ್ರವಣಾದಿಗಳಿಂದಲೇ ದರ್ಶನವಾಗುತ್ತದೆ ಎಂದು ಪೂರ್ವಪಕ್ಷ. ಏಕೆಂದರೆ 'ಸಮ್ಯಗ್ಲಕ್ಷಣ ಸಂಪನ್ನಃ' ಇತ್ಯಾದಿ ಸ್ಮೃತಿಗಳಿಂದ ಗುರುಪ್ರಸಾದದಿಂದ ಅಸಾಧ್ಯವಾದದ್ದು ಯಾವುದೂ ಇಲ್ಲ ಎಂದು ತಿಳಿಯುತ್ತಿದೆ.

ಭಕ್ತ್ಯಾದಿಗಳಿಲ್ಲದೇ ಹೋದರೆ ಉಪಾಸನೆಯೇ ಕೂಡುವುದಿಲ್ಲ ಎಂದೇನಿಲ್ಲ. ಏಕೆಂದರೆ, ದ್ವೇಷದಿಂದಲೂ ಉಪಾಸನೆ ಮಾಡಬಹುದು. ದ್ವೇಷದಿಂದ ಉಪಾಸನೆ ಮಾಡುವುದಾದರೂ ಅದು ಅಪೇಕ್ಷಿತಫಲಪ್ರದವಾಗುವುದಿಲ್ಲ? ಎಂದರೆ ಇಲ್ಲ 'ದ್ವೇಷಾಚ್ಚೈದ್ಯಾದಯೋ ನೃಪಾಃ' ಎಂದು ಸಪ್ತಮಸ್ಕಂಧ ಭಾಗವತದಲ್ಲಿ ದ್ವೇಷದಿಂದ ಧ್ಯಾನಮಾಡುವವರಿಗೂ ಮುಕ್ತಿಯಿದೆ ಎಂದು ಹೇಳಲಾಗಿದೆ.

**ಸಿದ್ಧಾಂತ :-** ಭಕ್ತ್ಯಾದಿಗಳಿಲ್ಲದೇ ಕೇವಲ ಗುರುಪ್ರದಾನಯುಕ್ತವಾದ ಉಪಾಸನೆಯಿಂದ ದರ್ಶನವಾಗುವುದಿಲ್ಲ. ಭಕ್ತ್ಯಾದಿಗಳಿಂದ ಕೂಡಿದ ಉಪಾಸನೆಯಿಂದಲೆ ದರ್ಶನವಾಗುವುದು. ಏಕೆಂದರೆ, ಭಕ್ತ್ಯಾದಿಗಳಿಲ್ಲದೇ ದ್ವೇಷದಿಂದ ಉಪಾಸನೆ ಮಾಡಬಹುದಾದರೂ, ಅಂತಹ ಉಪಾಸನೆಯು ಪುರುಷಾರ್ಥಕ್ಕೆಕಾರಣವಾಗುವುದಿಲ್ಲ. ಅದರ ಬದಲಾಗಿ ಅನರ್ಥಕ್ಕೆ ಕಾರಣವಾಗುತ್ತದೆ. ಈ ವಿಷಯವು 'ದ್ವೇಷಾದ್ಯನ್ಮುಕ್ತಿಕಥನಂ ಶ್ರುತಿವಾಕ್ಯವಿರೋಧಿ ತತ್' ಎಂದು ಆರಂಭಮಾಡಿಕೊಂಡು ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಅನೇಕ ಪ್ರಮಾಣಗಳಿಂದ ಸಿದ್ಧವಾಗಿದೆ.

ಭಕ್ತ್ಯಾದಿಗಳಿಂದ ಕೂಡಿದ ಉಪಾಸನೆಯೇ ಫಲಪರ್ಯವಸಾಯೀ ಆಗುತ್ತದೆ. ಹಾಗೂ ಗುರುಪ್ರಸಾದವೂ ಭಕ್ತ್ಯಾದಿಗಳಿಲ್ಲದೇ ದೊರೆಯುವುದಿಲ್ಲ ಎಂದು 'ತಥಾಪ್ಯನಾದಿಸಂಸಿದ್ಧ ಭಕ್ತ್ಯಾದಿಗುಣಯೋಗತಃ ಲಭೇದ್ಗುರು ಪ್ರಸಾದಂ' ಇತ್ಯಾದಿ ಸ್ಮೃತಿಗಳಿಂದ ಸಿದ್ಧವಾಗಿದೆ. ಹಾಗಾದರೆ 'ದ್ವೇಷಾಚ್ಚೈ-ದ್ಯಾದಯೋ' ಎಂಬುದಕ್ಕೆ ಏನು ಗತಿ ಎಂದರೆ, ಅದು ಸ್ವಾಭಾವಿಕಭಕ್ತನನ್ನು ಕುರಿತಾದದ್ದು ಎಂದು ಕೂಡಿಸಬೇಕು.

**ಅಧಿಕರಣ ಫಲ** :- ಭಕ್ತಿಪಾದದಲ್ಲಿ ಭಗವನ್ಮಾಹಾತ್ಮ್ಯವು ಹೇಳಲ್ಪಟ್ಟಿದೆ. ಅದು ಭಕ್ತಿ ಹುಟ್ಟುವುದಕ್ಕಾಗಿ ಹೇಳಿದ್ದು. ಭಕ್ತಿಯೇ ವ್ಯರ್ಥ ಎಂದಾದರೆ-ಮಾಹಾತ್ಮ್ಯಕಥನವು ವ್ಯರ್ಥವಾಗುತ್ತದೆ. ಹಾಗಾಗಿ ಭಕ್ತಿಗೆ ಸಾಫಲ್ಯವನ್ನು ಅವಶ್ಯವಾಗಿ ಸಮರ್ಥಿಸಬೇಕು. ಅದನ್ನೇ ಈ ಅಧಿಕರಣದಲ್ಲಿ ಮಾಡಲಾಗಿದೆ.

## ॥ ಓಂ ಪ್ರಜ್ಞಾಂತರಪೃಥಕ್ತ್ವವದ್ದೃಷ್ಟಿಶ್ಚ ತದುಕ್ತಮ್ ಓಂ ॥
## ೩-೩-೩೨

ಯಾವ ದರ್ಶನಕ್ಕೆ ಭಕ್ತ್ಯಾದಿಗಳು ಆವಶ್ಯಕ ಎಂದು ಹೇಳಲಾಗಿತ್ತೋ ಅಂತಹ ದರ್ಶನದಲ್ಲಿ ತಾರತಮ್ಯವನ್ನು ನಿರೂಪಣೆ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಸಂಗತಿಯಿದೆ.

ಪ್ರಸ್ತುತವಾದ ಮುಕ್ತಿ ಹೇತುಭಗವದ್ದರ್ಶನವು ಏಕಪ್ರಕಾರವಾಗಿದೆಯೋ ಅಥವಾ ಅನೇಕ ಪ್ರಕಾರವಾಗಿದೆಯೋ? 'ದೃಷ್ಟ್ವೈವ ತಂ ಮುಚ್ಯತೇ', 'ಭಕ್ತ್ಯಾ ಮಾಮಭಿಜಾನಾತಿ' ಇತ್ಯಾದಿ ವಾಕ್ಯಗಳು ಎಲ್ಲಾ ಮುಕ್ತಿಯೋಗ್ಯರಿಗೆ ಬರುವ ಮುಕ್ತಿಹೇತು ಜ್ಞಾನವು ಒಂದೇ ರೀತಿಯದ್ದಾಗಿರುತ್ತದೆ ಎಂದು ಹೇಳುತ್ತಿದೆಯೋ ಅಥವಾ ಇಲ್ಲವೋ? ಎಲ್ಲರಿಗೂ ಬರುವ ಮುಕ್ತಿಹೇತುಜ್ಞಾನವು ಒಂದೇ ರೀತಿ ಯಾಗಿರುವುದಿಲ್ಲ ಎನ್ನುವುದಕ್ಕೆ ಕಲ್ಪಕ(ಪ್ರಮಾಣ) ಇಲ್ಲವೋ ಅಥವಾ ಇದೆಯೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

ಎಲ್ಲರ ಮುಕ್ತಿಹೇತು ಜ್ಞಾನವು ಒಂದೇ ರೀತಿಯಾಗಿರುತ್ತದೆ ಎಂದು ಪೂರ್ವಪಕ್ಷ. ಏಕೆಂದರೆ 'ದೃಷ್ಟ್ವೈವ ತಂ ಮುಚ್ಯತೇ' ಎಂಬ ಶ್ರುತಿಯಲ್ಲಿ ಅವಿಶೇಷಿತ (ಏಕರೂಪ) ಜ್ಞಾನದಿಂದಲೇ ಎಲ್ಲರಿಗೂ ಮೋಕ್ಷವಾಗುತ್ತದೆ

ಎಂದು ಶ್ರುತವಾಗಿದೆ. 'ಭಕ್ತ್ಯಾ ಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ತ್ವತಃ ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಮ್' ಎಂಬ ಗೀತಾ-ವಾಕ್ಯದಲ್ಲಿಯೂ ಕೂಡ ಎಲ್ಲರಿಗೂ ಭಕ್ತಿಯಿಂದ ಪೂರ್ಣಜ್ಞಾನವಾಗುತ್ತದೆ. ಅಂತಹ ಪೂರ್ಣಜ್ಞಾನದಿಂದಲೇ ಮೋಕ್ಷವಾಗುತ್ತದೆ ಎಂದು ಹೇಳಿದೆ.

ಈ ಶ್ರುತಿಸ್ಮೃತಿಗಳು ವಿಶೇಷಪರ (ತಾರತಮ್ಯೋಪೇತ ದರ್ಶನಪರ) ಎಂದು ಹೇಳಲು ಯಾವುದೇ ಪ್ರಮಾಣವಿಲ್ಲ. ಜ್ಞಾನಕ್ಕೆ ಕಾರಣವಾದ ಉಪಾನಸೆಯು ಅನೇಕ ವಿಧವಾದ್ದರಿಂದ ದರ್ಶನವೂ ಅನೇಕ ವಿಧವಾಗ-ಬೇಕು. ಹಾಗಾಗಿ ಉಪಸನಾತಾರತಮ್ಯವೇ ದರ್ಶನತಾರತಮ್ಯಕ್ಕೆ ಕಲ್ಪಕ ಎಂದೇಕೆ ಹೇಳಬಾರದು? ಎಂದರೆ ಇದು ಸರಿಯಲ್ಲ. ಏಕೆಂದರೆ ಸಾಧನವು ಅನೇಕ ವಿಧವಾಗಿದ್ದರೂ ಕೃಷಿ ಮೊದಲಾದಲ್ಲಿ ಕೆಲವೊಮ್ಮೆ ಫಲವು ಒಂದೇ ರೀತಿಯಾಗಿರುವುದು ಕಂಡಿದೆ. ಹಾಗಾಗಿ ಸಾಧನತಾರತಮ್ಯ ಎಂಬುದು ಅಪ್ರಯೋಜಕ (ಫಲತಾರತಮ್ಯಕ್ಕೆ ಸಾಧಕವಾಗುವುದಿಲ್ಲ). 'ಭಕ್ತ್ಯಾ ಮಾಂ......' ಎಂಬ ಸ್ಮೃತಿಯಲ್ಲಿ ಸಂಪೂರ್ಣಜ್ಞಾನದಿಂದಲೇ ಮೋಕ್ಷ ಎಂದು ಹೇಳಿದೆ. ಈಗ ಜ್ಞಾನದಲ್ಲಿ ನ್ಯೂನಾಧಿಕಭಾವ ಎಂಬ ವಿಶೇಷವನ್ನು ಒಪ್ಪಿದರೆ ಕೆಲವರಿಗೆ ಸಂಪೂರ್ಣ ಜ್ಞಾನವಾಗುವುದಿಲ್ಲ ಎಂದು ಹೇಳಿದಂತಾಗುತ್ತದೆ. ಆಗ ಅಂತಹವರಿಗೆ ಮೋಕ್ಷವಿಲ್ಲ ಎಂದಾಗುತ್ತದೆ. ಹಾಗಾದರೆ 'ಅನಿಯಮ-ಸ್ಸರ್ವೇಷಾಂ' ಎಂಬಲ್ಲಿ ಹೇಳಿರುವ ಎಲ್ಲಾ ಜ್ಞಾನಿಗಳಿಗೂ ನಿಯಮೇನ ಮೋಕ್ಷವಾಗುತ್ತದೆ ಎಂಬುದು ಸರಿಯಲ್ಲ ಎಂದಾಗುತ್ತದೆ.

**ಸಿದ್ಧಾಂತ** :- ಅಧಿಕಾರಿಗಳಿಗೆ ಆಗುವ ಭಗವದ್ದರ್ಶನ ಅನೇಕವಿಧ-ವಾಗಿರುತ್ತದೆ. ಏಕೆಂದರೆ ಆ ದರ್ಶನಕ್ಕೆ ಸಾಧನವಾದ ಉಪಾಸನೆಯೂ ಅನೇಕ ವಿಧವಾಗಿರುತ್ತದೆ. ಅಂತಹ ಅನೇಕವಿಧ ಉಪಾಸನಾಜನ್ಯಜ್ಞಾನದಲ್ಲಿ ವೈಚಿತ್ರ್ಯವನ್ನು ಒಪ್ಪಲೇಬೇಕು. ಏಕೆಂದರೆ ಫಲವು ಸಾಧನಕ್ಕೆ ಅನುಸಾರ-ವಾಗಿಯೇ ಇರುತ್ತದೆ. ಸಾಧನತಾರತಮ್ಯವಿದ್ದರೂ ಫಲಸಾಮ್ಯ ಕೆಲವೊಮ್ಮೆ ಕಂಡಿದೆಯಾದ್ದರಿಂದ ಸಾಧನತಾರತಮ್ಯವು ಅಪ್ರಯೋಜಕ ಎಂದು ಹಿಂದೆ ಹೇಳಿದೆಯಲ್ಲಾ? ಎಂದರೆ, ಅದು ಸರಿಯಲ್ಲ 'ಅಂತರ್ದೃಷ್ಟಯಃ ಬಹಿ-ರ್ದೃಷ್ಟಯಃ' ಎಂಬಿತ್ಯಾದಿ ಶ್ರುತಿಗಳಲ್ಲಿ ಜ್ಞಾನವೈಚಿತ್ರ್ಯ ಪ್ರಮಿತವಾಗಿದೆ. ಹಾಗಾಗಿ ಎಲ್ಲರಿಗೂ ಏಕರೂಪಜ್ಞಾನ ಒಪ್ಪಿದರೆ ಈ ಶ್ರುತಿಯ ವಿರೋಧ

ಬರುತ್ತದೆ. ಆದ್ದರಿಂದ ಏಕರೂಪಜ್ಞಾನವನ್ನು ಒಪ್ಪಿ ಉಪಾಸನಾತಾರತಮ್ಯವನ್ನು ಕಾದಾಚಿತ್ಕವಾದ ಕರ್ಷಕ ದೃಷ್ಟಾಂತವನ್ನು ಇಟ್ಟುಕೊಂಡು ಕೂಡಿಸುವುದು ಸರಿಯಲ್ಲ.

ಜ್ಞಾನದಲ್ಲಿ ನ್ಯೂನಾಧಿಕಭಾವ ಒಪ್ಪಿದರೆ ಎಲ್ಲರಿಗೂ ಮೋಕ್ಷವಾಗದೇ ಹೋಗಬೇಕಾಗುತ್ತದೆ ಎಂಬ ಆಕ್ಷೇಪಕ್ಕೂ ಅವಕಾಶವಿಲ್ಲ. ಏಕೆಂದರೆ, 'ದೃಷ್ಟ್ವೈವ ಹ್ಯವತಾರಾಣಾಮ್' ಎಂಬ ಸ್ಮೃತಿಯಲ್ಲಿ ಅಧಿಕಾರಿಗಳಿಗೆ ಅವರವರ ಯೋಗ್ಯತಾನುಸಾರವಾದ ಭಗವದ್ದರ್ಶನದಿಂದಲೇ ಮೋಕ್ಷವಾಗುತ್ತದೆ ಎಂದು ಹೇಳಲಾಗಿದೆ.

ಹಾಗಾದರೆ 'ಭಕ್ತ್ಯಾ ಮಾಂ.....' ಎಂಬಲ್ಲಿ ಯಾವಾನ್ ಯಶ್ಚಾಸ್ಮಿ ಎಂಬುದಾಗಿ ಸರ್ವರಿಗೂ ಪೂರ್ಣಜ್ಞಾನವಾಗುತ್ತದೆ ಎಂದು ಹೇಳಿರುವುದಕ್ಕೆ ಏನು ಗತಿ? ಎಂದರೆ ಸಾಮಾನ್ಯವಾದ ಸರ್ವವಿಷಯಕ ಜ್ಞಾನವು ಮೋಕ್ಷಹೇತು ಎಂದಷ್ಟೇ ಈ ಸ್ಮೃತಿಯ ಅಭಿಪ್ರಾಯ. ಅಥವಾ ವಿಶೇಷವಾದ ಸರ್ವವಿಷಯಕ ಜ್ಞಾನವೇ ಇಲ್ಲಿ ಹೇಳಲ್ಪಟ್ಟಿದೆ ಎಂದರೆ, ಆಗ ಅದು ಅಂತಹ ಜ್ಞಾನಕ್ಕೆ ಅಧಿಕಾರಿಯಾದ ಹಿರಣ್ಯಗರ್ಭನನ್ನು ಕುರಿತಾಗಿ ಹೇಳಿದ್ದು ಎಂದು ಇಟ್ಟುಕೊಳ್ಳಬೇಕು.

**ಅಧಿಕರಣ ಫಲ** :- 'ಯಾವದಧಿಕಾರಮ್' ಎಂಬ ಸೂತ್ರದಲ್ಲಿ ಮೋಕ್ಷತಾರತಮ್ಯವು ಹೇಳಲ್ಪಟ್ಟಿದೆ. ದರ್ಶನ ತಾರತಮ್ಯವನ್ನು ಹೇಳುವುದರ ಮೂಲಕ ಮೋಕ್ಷತಾರತಮ್ಯದ ಸಮರ್ಥನೆಯನ್ನೇ ಇಲ್ಲಿ ಮಾಡಲಾಗಿದೆ. ಇದೇ ಈ ಅಧಿಕರಣದ ಪ್ರಯೋಜನ.

## ॥ ಓಂ ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಹಿ ಲೋಕಾಪತ್ತಿಃ ಓಂ ॥ ೩-೩-೩೩

ಯಾವ ಭಗವದ್ದರ್ಶನದಲ್ಲಿ ವೈಚಿತ್ರ್ಯವು ಹಿಂದೆ ಹೇಳಲ್ಪಟ್ಟಿತ್ತೋ ಅಂತಹ ದರ್ಶನವು ಬಿಂಬವಿಷಯಕವಾದರೆ ಮಾತ್ರ ಮೋಕ್ಷಕ್ಕೆ ಹೇತುವಾಗುತ್ತದೆ ಎಂದು ನಿರೂಪಣೆ ಮಾಡುತ್ತಿರುವುದರಿಂದ ಸಂಗತಿಯಿದೆ. ಪ್ರಕೃತವಾದ ಭಗವದ್ದರ್ಶನವು ಯಾವುದಾದರೂ ಒಂದು ರೂಪ (ಭಗವಂತನ)ದ್ದಾದರೂ

ಮುಕ್ತಿಹೇತುವಾಗುತ್ತದೋ ಅಥವಾ ಬಿಂಬರೂಪದ ದರ್ಶನವೇ ಆಗ ಬೇಕೋ? ನಿರ್ದಿಷ್ಟವಾದ ರೂಪದ ದರ್ಶನವೇ ಮೋಕ್ಷಹೇತುವಾದರೆ 'ನ ಸ್ಥಾನತೋಪಿ' ಎಂಬ ಸೂತ್ರದಲ್ಲಿ ಭಗವಂತನ ರೂಪಗಳಿಗೆ ಭೇದವಿಲ್ಲ ಎಂದು ನಿರ್ಣಯಿಸಿದ್ದು ತಪ್ಪು ಎಂದಾಗುತ್ತದೋ ಅಥವಾ ಇಲ್ಲವೋ? ಯಾವುದೋ ಒಂದು ರೂಪದ ದರ್ಶನ ಮುಕ್ತಿಗೆ ಹೇತುವಾಗುವುದಿಲ್ಲ ಎಂದರೆ ಆಗ ಅಂತಹ ದರ್ಶನ ವ್ಯರ್ಥ ಎಂದಾಗುತ್ತದೋ ಅಥವಾ ಇಲ್ಲವೋ? ಎಂದು ಹೀಗೆ ಪರಸ್ಪರ ಸಂಗತ ವಿಚಾರಗಳು ಬಂದಿವೆ.

ಯಾವುದಾದರೊಂದು ರೂಪದ ದರ್ಶನದಿಂದಲೇ ಮೋಕ್ಷವಾಗುತ್ತದೆ ಎಂದು ಪೂರ್ವಪಕ್ಷ . ಏಕೆಂದರೆ, ಭಗವಂತನ ನಿರ್ದಿಷ್ಟ ರೂಪಕ್ಕೆ ಮಾತ್ರ ಮೋಕ್ಷ ಕೊಡುವ ಶಕ್ತಿ ಇದೆ. ಇನ್ನೊಂದಕ್ಕೆ ಇಲ್ಲ ಎಂದರೆ'ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ' ಎಂಬಲ್ಲಿ ಹೇಳಲ್ಪಟ್ಟ ಭಗವಂತನ ಸರ್ವರೂಪಗಳಿಗೂ ಸಾಮ್ಯ ಎಂಬುದು ಕೂಡುವುದಿಲ್ಲ. ಮತ್ತು ಸಾಮಾನ್ಯ-ದರ್ಶನವು ಮೋಕ್ಷಕ್ಕೆ ಹೇತುವಾಗದೇ ಹೋದರೆ ಅಂತಹ ದರ್ಶನ ವ್ಯರ್ಥ ಎಂದಾಗುತ್ತದೆ. ಭಗವಂತನ ದರ್ಶನ ವ್ಯರ್ಥ ಎನ್ನುವುದು ಸರಿಯಲ್ಲ. ಹಾಗಾಗಿ ಮೋಕ್ಷವೇ ಫಲ ಎನ್ನಬೇಕು. ಆಗ ಸಾಮಾನ್ಯದರ್ಶನವೂ ಮೋಕ್ಷಹೇತು ಎಂದು ಸಿದ್ಧವಾಯಿತು. ಇನ್ನು ನಿಗದಿತವಾದ ಕಿಂಚಿದ್ರೂಪ-ಜ್ಞಾನವು ಮೋಕ್ಷಹೇತು ಬೇರೆಯದು ಅಲ್ಲ ಎಂದರೆ, ಬಿಂಬದರ್ಶನದಲ್ಲಿಯೂ ಕೂಡ ಕಿಂಚಿತ್ ಬಿಂಬಜ್ಞಾನವು ಅಂದರೆ ಕೆಲವರ ಜ್ಞಾನವು ಮೋಕ್ಷಹೇತು, ಉಳಿದದ್ದು ಅಲ್ಲ ಎಂದು ಹೀಗೆ ಹೇಳಲು ಬರುವುದರಿಂದ 'ಅನಿಯಮಃ ಸರ್ವೇಷಾಂ' ಎಂದು ಸಕಲಜ್ಞಾನಿಗಳಿಗೂ ಮೋಕ್ಷ ಎಂದು ಹಿಂದೆ ಹೇಳಿದ್ದು ತಪ್ಪಾಗುತ್ತದೆ.

**ಸಿದ್ಧಾಂತ** :- ಬಿಂಬದರ್ಶನವೇ ಮೋಕ್ಷಹೇತು ಯತ್ಕಿಂಚಿತ್‌ರೂಪ-ಜ್ಞಾನವಲ್ಲ. ಹೇಗೆ, ಎಲ್ಲಾ ದೇಹತ್ಯಾಗವೂ ದೇಹತ್ಯಾಗವೇ ಆದರೂ ಚರಮ ದೇಹತ್ಯಾಗ ಎಂಬ ವಿಶೇಷ ಮರಣದ ನಂತರವೇ ಮೋಕ್ಷವಾಗುತ್ತದೋ ಹಾಗೆ ಭಗವದ್ರೂಪಗಳಲ್ಲಿ ಸಾಮ್ಯವಿದ್ದರೂ ಭಗವಂತನ ಸಂಕಲ್ಪಕ್ಕನುಸಾರವಾಗಿ ಬಿಂಬರೂಪದರ್ಶನವೆಂಬ ವಿಶೇಷಜ್ಞಾನವೇ ಮೋಕ್ಷಕ್ಕೆ ಕಾರಣವಾಗುತ್ತದೆ. ಯಾವುದೋ ಒಂದು ರೂಪಜ್ಞಾನವಲ್ಲ. 'ಸಮೋಪಿ ಭಗವಾನ್ ಸ್ವಬಿಂಬ-

ದರ್ಶನೇ ಏವೈನಂ ಮೋಚಯತಿ' ಎಂಬ ಶ್ರುತಿಯೂ ಬಿಂಬದರ್ಶನ-ದಿಂದಲೇ ಮೋಕ್ಷ ಎಂದು ಹೇಳುತ್ತಿದೆ. ಹಾಗಾದರೆ ಸಾಮಾನ್ಯದರ್ಶನ ವ್ಯರ್ಥವಾಯಿತಲ್ಲ? ಎಂದರೆ ಇಲ್ಲಿ 'ಸಾಮಾನ್ಯದರ್ಶನಾಲ್ಲೋಕಾಃ' ಎಂಬ ಸ್ಮೃತಿಯಲ್ಲಿ ಹೇಳಿದಂತೆ ಸಾಮಾನ್ಯದರ್ಶನದಿಂದ ಮಹರಾದಿಲೋಕ-ಪ್ರಾಪ್ತಿಯಾಗುತ್ತದೆ. ಹಾಗಾಗಿ ಅದು ವ್ಯರ್ಥವಲ್ಲ. 'ಮುಚ್ಯತೇ ನಾತ್ರ ಸಂದೇಹೋ ದೃಷ್ಟ್ವಾ ತು ಸ್ವಾತ್ಮಯೋಗ್ಯಯಾ' ಎಂಬ ಸ್ಮೃತಿ ಇರುವುದರಿಂದ ದರ್ಶನದಲ್ಲಿ ಸಾಮಾನ್ಯದರ್ಶನ ಬಿಂಬದರ್ಶನ ಎಂಬ ವಿಕಲ್ಪವಿದ್ದರೂ ಬಿಂಬದರ್ಶನದಲ್ಲಿ ಈ ರೀತಿ ವಿಕಲ್ಪ ಕೂಡುವುದಿಲ್ಲ.

**ಅಧಿಕರಣ ಫಲ** :- ನಿಯಮೇನ ಬಿಂಬೋಪಾಸನೆ ಮಾಡಬೇಕು ಎಂಬುದರ ಸಮರ್ಥನೆಯನ್ನೇ ಇಲ್ಲಿ ಮಾಡಲಾಗಿದೆ. ಇದೇ ಈ ಅಧಿಕರಣದ ಫಲ.

## ॥ ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬಂಧಃ ಓಂ ॥ ೩-೩-೩೪

ಹಿಂದೆ ಭಕ್ತಿಯು ದರ್ಶನಕ್ಕೆ ಹೇತು ಎಂದು ಹೇಳಲಾಗಿದೆ. ಅಂತಹ ಭಕ್ತಿಗೆ ಸ್ವಾತಂತ್ರ್ಯವನ್ನು ಇಲ್ಲಿ ನಿರಾಕರಣೆ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಹಿಂದಿನಿಂದ ಸಂಗತಿಯಿದೆ.

ಪ್ರಕೃತವಾದ ದರ್ಶನವು ಭಕ್ತಿಸಾಮರ್ಥ್ಯದಿಂದ ಆಗುತ್ತದೋ ಅಥವಾ ಈಶ್ವರಶಕ್ತಿಯಿಂದಲೋ? 'ಭಕ್ತಿರೇವೈನಂ ದರ್ಶಯತಿ' ಎಂಬ ಶ್ರುತಿಯು ಭಕ್ತಿಗೆ ಸ್ವಾತಂತ್ರ್ಯವನ್ನು ಹೇಳುತ್ತಿದೆಯೋ ಅಥವಾ ಈಶ್ವರನಿಂದಾಗುವ ದರ್ಶನಕ್ಕೆ ಭಕ್ತಿಯು ಕರಣ ಎಂದು ಹೇಳುತ್ತಿದೆಯೋ? ಭಕ್ತಿಯು ಕರಣ ಎಂಬ ಪಕ್ಷದಲ್ಲಿ ಕಲ್ಪಕವಿಲ್ಲ 'ಭಕ್ತಿರೇವ' ಎಂದು ಬೇರೆ ಸಾಧನಗಳನ್ನು ಬಿಟ್ಟು ವಿಶೇಷವಾಗಿ ಭಕ್ತಿಯನ್ನೇ ಹೇಳಿದ್ದು ಕೂಡುತ್ತದೆ ಎಂತಲೋ ಅಥವಾ ಕರಣತ್ವಪಕ್ಷದಲ್ಲಿ ಕಲ್ಪಕವಿದ್ದು ವಿಶೇಷೋಕ್ತಿಯನ್ನು ಬೇರೆ ರೀತಿಯಿಂದ ಕೂಡಿಸ-ಬಹುದು ಎಂತಲೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

ಭಕ್ತಿಸಾಮರ್ಥ್ಯದಿಂದಲೇ ದರ್ಶನವಾಗುತ್ತದೆ ಎಂದು ಪೂರ್ವಪಕ್ಷ. ಏಕೆಂದರೆ, 'ಭಕ್ತಿರೇವೈನಂ ದರ್ಶಯತಿ' ಎಂಬ ಶ್ರುತಿಯಲ್ಲಿ ದರ್ಶನವನ್ನು

ಕುರಿತು ಭಕ್ತಿಯು ಕರ್ತೃ ಎಂದು ಶ್ರುತವಾಗಿದೆ. ಇಂತಹ ಭಕ್ತಿಗೆ ಕರಣತ್ವವನ್ನು ಹೇಳಲು ಯಾವುದೇ ಕಲ್ಪಕವಿಲ್ಲ. ದರ್ಶನಕ್ಕೆ ಬೇರೆ ಅನೇಕ ಸಾಧನಗಳಿದ್ದರೂ ಅವೆಲ್ಲವನ್ನೂ ಬಿಟ್ಟು ವಿಶೇಷವಾಗಿ ಭಕ್ತಿಯನ್ನೇ ಏಕೆ ಹೇಳಿದ್ದಾರೆ? ಅದಕ್ಕೆ ಯಾವುದೇ ಕಾರಣ ಗೋಚರವಾಗುತ್ತಿಲ್ಲ. ಈ ಕಾರಣದಿಂದಲೂ ಕರಣತ್ವಕಲ್ಪನೆ ಸರಿಯಲ್ಲ.

ಹಾಗಾಗಿ ಭಕ್ತಿಯೇ ಈಶ್ವರಪ್ರಸಾದದ ಅಪೇಕ್ಷೆಯಿಲ್ಲದೇ ತನ್ನ ಸಾಮರ್ಥ್ಯದಿಂದಲೇ ಭಗವಂತನ ಅಪರೋಕ್ಷವನ್ನು ಮಾಡಿಸುತ್ತದೆ.

**ಸಿದ್ಧಾಂತ :-** ಈಶ್ವರಸಾಮರ್ಥ್ಯದಿಂದಲೇ ದರ್ಶನವಾಗುವುದು. ಭಕ್ತಿಯೇ ದರ್ಶನಕರ್ತೃ ಎಂದಾದರೆ 'ಏತೈರುಪಾಯೈರ್ಯತತೇ ಯಸ್ತು ವಿದ್ವಾನ್ ತಸ್ಯೈಷ ಆತ್ಮಾ ವಿಶತೇ ಬ್ರಹ್ಮಧಾಮ' ಎಂಬ ಅಥರ್ವಣ ಶ್ರುತಿಯ ವಿರೋಧ ಬರುತ್ತದೆ. ಏಕೆಂದರೆ, ಈ ಶ್ರುತಿಯಲ್ಲಿ ಪ್ರವಚನ, ಭಕ್ತಿ ಮೊದಲಾದ ಉಪಾಯಗಳಿಂದ ಯಾರು ದರ್ಶನಕ್ಕಾಗಿ ಪ್ರಯತ್ನಪಡುತ್ತಾನೋ ಅಂತಹ-ವನಿಗೆ ಪ್ರಸನ್ನನಾದ ಭಗವಂತನು ಬ್ರಹ್ಮಧಾಮ ಎನಿಸಿಕೊಂಡ ವಾಯುವಿನಲ್ಲಿ ಗೋಚರನಾಗುತ್ತಾನೆ ಎಂದು ಹೇಳಿದೆ. ಹಾಗಾಗಿ ಈ ಶ್ರುತಿಯಿಂದ ಭಕ್ತ್ಯಾದಿ-ಗಳಿಂದ ಪ್ರಸನ್ನನಾದ ಈಶ್ವರನೇ ತನ್ನ ಅಪರೋಕ್ಷವನ್ನು ಕೊಡುತ್ತಾನೆಂದು ತಿಳಿಯುತ್ತಿದೆ. ಹಾಗಾಗಿ 'ಭಕ್ತಿರೇವೈನಂ' ಎಂಬ ಶ್ರುತಿಯು ಭಕ್ತಿಗೆ ಕರ್ತೃತ್ವ-ವನ್ನು ಹೇಳುತ್ತಿಲ್ಲ. ಬದಲಾಗಿ ಕರಣತ್ವವನ್ನೇ ಹೇಳುತ್ತಿದೆ ಎನ್ನಬೇಕು.

ವಿಶೇಷೋಕ್ತಿಯನ್ನು ಹೇಗೆ ಕೂಡಿಸುವುದು? ಎಂದರೆ, ಸಾಧನಗಳಲ್ಲಿ ಭಕ್ತಿಯೇ ಪ್ರಧಾನವಾದ್ದರಿಂದ ಅದನ್ನೇ ವಿಶೇಷವಾಗಿ ಶ್ರುತಿಯು ಹೇಳುತ್ತಿದೆ ಎಂದು ಕೂಡಿಸಬಹುದು. ಮೊದಲನೇ ಅಧ್ಯಾಯದಲ್ಲಿ ಭಕ್ತ್ಯಾದಿ ಸಕಲ ಶಬ್ದಗಳನ್ನೂ ವಿಷ್ಣುವಿನಲ್ಲಿ ಸಮನ್ವಯ ಮಾಡಿಯಾಗಿದೆ. ಪ್ರಕೃತ್ಯಧಿಕರಣ ನ್ಯಾಯದಿಂದ ಸ್ತ್ರೀಲಿಂಗ ಭಕ್ತಿಶಬ್ದವೂ ಕೂಡ ಮುಖ್ಯವಾಗಿ ವಿಷ್ಣುವಾಚಕವೇ ಆಗಿದೆ. ಹಾಗಾಗಿ 'ಭಕ್ತಿರೇವೈನಂ' ಎಂಬ ಶ್ರುತಿಯಲ್ಲಿರುವ ಭಕ್ತಿ ಶಬ್ದಕ್ಕೂ ವಿಷ್ಣು ಎಂದು ಅರ್ಥ ಮಾಡಿ ಈ ಶ್ರುತಿಗೆ ವಿಷ್ಣುಪರತ್ವವನ್ನು ಹೇಳಬಹುದು.

'ಭಕ್ತಿಸ್ಥಃ ಪರಮೋ ವಿಷ್ಣುಃ' ಎಂಬ ಸ್ಮೃತಿಯೂ ಪರಮಾತ್ಮನಿಂದಲೇ ದರ್ಶನವಾಗುವುದೆಂದು ಹೇಳುತ್ತಿದೆ. ಹೀಗೆ ಅನಾದಿಭಕ್ತಿಯಿಂದ ಪ್ರಸನ್ನನಾದ

ಈಶ್ವರನೇ ತನ್ನ ಸಾಮರ್ಥ್ಯದಿಂದ ಅಪರೋಕ್ಷವನ್ನು ನೀಡುತ್ತಾನೆಂದು ಸಿದ್ಧವಾಯಿತು.

**ಅಧಿಕರಣ ಫಲ :-** 'ತದವ್ಯಕ್ತಮಾಹ ಹಿ' ಎಂಬಲ್ಲಿ ಹೇಳಲ್ಪಟ್ಟ ಭಗವಂತನ ಅವ್ಯಕ್ತತ್ವದ ಸಮರ್ಥನೆಯನ್ನೇ ಇಲ್ಲಿ ಮಾಡಲಾಗಿದೆ. ಭಕ್ತಿಯೇ ಸ್ವತಂತ್ರವಾಗಿ ಭಗವಂತನ ದರ್ಶನ ಮಾಡಿಸುತ್ತದೆ ಎಂದರೆ, ಅವ್ಯಕ್ತತ್ವಕ್ಕೆ ಭಂಗ ಬರುತ್ತದೆ. ತಾನೇ ತನ್ನ ಸಾಮರ್ಥ್ಯದಿಂದ ಗೋಚರನಾಗುತ್ತಾನೆ ಎಂದು ಹೇಳಿದರೆ ಅವ್ಯಕ್ತತ್ವಕ್ಕೆ ಭಂಗವಿಲ್ಲ. ಇದೇ ಈ ಅಧಿಕರಣದ ಪ್ರಯೋಜನ.

## ॥ ಓಂ ಏಕ ಆತ್ಮನಃ ಶರೀರೇ ಭಾವಾತ್ ಓಂ ॥ ೩-೩-೩೫

ಅನಾದಿ ಭಕ್ತಿಯು ದರ್ಶನಕ್ಕೆ ಕರಣ ಎಂದು ಹೇಳಿದ್ದು ಸರಿಯಲ್ಲ. ಏಕೆಂದರೆ, 'ಓಂ ಸ್ಥಾನವಿಶೇಷಾತ್' ಎಂಬಲ್ಲಿ ಭಾಷ್ಯಾದಿಗಳಲ್ಲಿ ಹೇಳಲ್ಪಟ್ಟ ಅನಾದಿಭಕ್ತ್ಯಾದಿಸಂಪತ್ತಿ ಎಂಬ ಯೋಗ್ಯತಾ ಅದರ ಸಾಪೇಕ್ಷತ್ವ ಏನಿದೆಯೋ ಅದೇ ಕೂಡುವುದಿಲ್ಲ ಎಂದು ಶಂಕಾ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಸಂಗತಿಯಿದೆ. ಪ್ರಕೃತವಾದ ಉಪಾಸನಾದಿಗಳು ಅನಾದಿ-ಯೋಗ್ಯತಾ ಸಾಪೇಕ್ಷವಾಗಿಲ್ಲವೋ ಅಥವಾ ಆಗಿದೆಯೋ? ಯೋಗ್ಯತೆಯು ಅನಾದಿ ಎಂಬುದು ಅಸಂಭಾವಿತವೋ ಅಥವಾ ಸಂಭಾವಿತವೋ? ಅರ್ಜುನಾದಿ ಅಂಶರಿಗೆ ಸ್ವರೂಪೋತ್ಪತ್ತಿ ಇದೆಯೋ ಅಥವಾ ಇಲ್ಲವೋ? ಅಂಶಾಂಶಿಗಳಿಗೆ ಭೇದವೋ ಅಥವಾ ಅಭೇದವೋ? ಅಂಶಾಂಶಿಗಳಿಗೆ ಅಭೇದ ಸಾಧಕ ಪ್ರಮಾಣ ಇಲ್ಲ - ಬಾಧಕವೇ ಇದೆಯೋ ಅಥವಾ ಸಾಧಕವಿದೆ ಬಾಧಕವಲ್ಲವೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

ಉಪಾಸನಾದಿಗಳಿಗೆ ಅನಾದಿಯೋಗ್ಯತಾ ಅಪೇಕ್ಷೆ ಇಲ್ಲ ಎಂದೇ ಪೂರ್ವಪಕ್ಷ. ಏಕೆಂದರೆ, ಅಂಶಾಂಶಿಗಳಿಗೆ ಅಭೇದವಿದೆ ಎನ್ನುವುದಕ್ಕೆ ಸಾಧಕ-ಪ್ರಮಾಣವಿಲ್ಲ. ಅದರ ಬದಲಾಗಿ ಬಾಧಕವೇ ಇದೆ. ಅಂಶಾಂಶಿಗಳಲ್ಲಿ ಚೈತ್ರ-ಮೈತ್ರರಲ್ಲಿ ಹೇಗೋ ಹಾಗೆ ಜ್ಞಾನ, ಸುಖ, ದುಃಖ ಮೊದಲಾದವು-ಗಳಲ್ಲಿ ಭೇದವೇ ಕಂಡುಬಂದಿದೆ. ಅಭೇದವನ್ನು ಒಪ್ಪಿದರೆ ಪ್ರಮಿತವಾದ ಜ್ಞಾನಸುಖಾದಿಗಳ ಭೇದವನ್ನು ಕೈಬಿಡಬೇಕಾಗುತ್ತದೆ ಇದೇ ಬಾಧಕ.

ಹೀಗೆ ಸಾಧಕವಿಲ್ಲ, ಬಾಧಕವಿರುವುದರಿಂದ ಅಂಶಾಂಶಿಗಳಿಗೆ ಭೇದವನ್ನು ಅವಶ್ಯವಾಗಿ ಒಪ್ಪಬೇಕು.

ಅಂಶಿಯಾದ ಇಂದ್ರನು ಅನಾದಿಯಾದರೂ ಅವನ ಅಂಶನಾದ ಅರ್ಜುನನಿಗೆ ಸ್ವರೂಪೋತ್ಪತ್ತಿಯನ್ನು ಹೇಳಬಹುದು. ಹೀಗೆ ಇಂದ್ರಾದಿಗಳ ಅಂಶರಾದ ಅರ್ಜುನಾದಿಗಳು ಸಾದಿ ಎಂದಾದ ಮೇಲೆ ಅವರ ಧರ್ಮವಾದ ಯೋಗ್ಯತೆಯೂ ಸಾದಿ ಎಂದು ಒಪ್ಪಲೇಬೇಕು. ಆದ್ದರಿಂದ ಯೋಗ್ಯತೆಯು ಅನಾದಿಯಲ್ಲವೆಂದು ಸಿದ್ಧವಾಯಿತು. ಹೀಗಾಗಿ ಉಪಾಸನಾದಿಗಳಿಗೆ ಅನಾದಿಯೋಗ್ಯತಾ ಅಪೇಕ್ಷೆ ಇಲ್ಲ ಎಂದೇ ಹೇಳಬೇಕು.

**ಸಿದ್ಧಾಂತ :-** ಉಪಾಸನಾದಿಗಳಲ್ಲಿ ಅನಾದಿಯೋಗ್ಯತಾ ಅಪೇಕ್ಷೆ ಇದೆ. ಅಂಶಕ್ಕೆ ಸ್ವರೂಪೋತ್ಪತ್ತಿಯನ್ನು ಒಪ್ಪಿದರೆ ಈ ಶರೀರ ಬರುವುದಕ್ಕೆ ಕಾರಣ ವಾದ, ಅಂಶವು ಆಚರಿಸಿದ ಯಾವುದೇ ಪೂರ್ವತನ ಕರ್ಮ ಇಲ್ಲವಾದ್ದರಿಂದ ಶರೀರ ಬರುವುದಕ್ಕೆ ಸಾಧ್ಯವಿಲ್ಲ. ಶರೀರವು ಕರ್ಮನಿರ್ಮಿತ ಅಲ್ಲ ಎಂದರೆ ಆಗ ಮೋಕ್ಷವೇ ಇಲ್ಲ ಎಂದಾಗಬೇಕಾಗುತ್ತದೆ. (ಕರ್ಮನಿರ್ಮಿತ-ವಾದರೆ ಆಗ ಕರ್ಮನಾಶವಾದ ಮೇಲೆ ಶರೀರನಾಶ ಹೇಳಬಹುದು. ಇಲ್ಲದೇ ಹೋದರೆ ಅಸಾಧ್ಯ).

ಹಾಗಾಗಿ 'ಅಂಶಿನಸ್ತು ಪೃಥಗ್ಜಾತಾ ಅಂಶಾಸ್ತಸ್ಯೈವ ಕರ್ಮಣಾ' ಎಂಬ ಸ್ಮೃತಿಗನುಸಾರವಾಗಿ ಅಂಶಿಯ ಕರ್ಮದಿಂದ ಹುಟ್ಟಿದ ಶರೀರದಲ್ಲಿ ಅಂಶರಾದ ಅರ್ಜುನಾದಿಗಳು ಇದ್ದಾರೆ ಎಂದೇ ಹೇಳಬೇಕು. ಹೀಗೆ ಹೇಳ-ಬೇಕಾದರೆ ಅಂಶಾಂಶಿಗಳಿಗೆ ಭೇದವಿರಬಾರದು. ಅಂಶಿಕರ್ಮಾರ್ಜಿತ ಶರೀರದಲ್ಲಿ ಅಂಶಾವಸ್ಥಾನವನ್ನು ಅಭೇದವನ್ನು ಬಿಟ್ಟು ಬೇರೆ ರೀತಿ ಕೂಡಿಸಲು ಬರುವುದಿಲ್ಲವಾದ್ದರಿಂದ ಈ ಅನ್ಯಥಾನುಪಪತ್ತಿ ಎಂಬ ಅಭೇದಸಾಧಕ ಪ್ರಮಾಣದಿಂದ ಅಂಶಾಂಶಿಗಳಿಗೆ ಅಭೇದ ಒಪ್ಪಬೇಕು. ಜೊತೆಗೆ ಅಂಶಿಯು ಮಾಡುವ ಪ್ರಧಾನಸಾಧನವಾದ ಉಪಾಸನೆಯ ಫಲ ವನ್ನು ಅಂಶನೂ ಅನುಭವಿಸುತ್ತಾನೆ. ಅಭೇದವನ್ನು ಒಪ್ಪದೇ ಇದನ್ನು ಬೇರೆ ರೀತಿ ಕೂಡಿಸಲು ಬರುವುದಿಲ್ಲ. ಹಾಗಾಗಿ ಈ ಅನ್ಯಥಾನುಪಪತ್ತಿರೂಪ ಅಭೇದಸಾಧಕ ಪ್ರಮಾಣದಿಂದಲೂ ಅಂಶಾಂಶಿಗಳಿಗೆ ಅಭೇದ

ಸಿದ್ಧವಾಗುತ್ತದೆ. ಇನ್ನು ಅಂಶನು, ಅಂಶಿಯು ಅನುಭವಿಸುವ ಅಲ್ಪಜ್ಞಾನ ಸುಖದುಃಖಾದಿಗಳನ್ನು ಅನುಭವಿಸದೇ ಇರುವುದಕ್ಕೆ ಕಾರಣ, ಅಂಶನು ಮನುಷ್ಯನಾಗಿ ಹುಟ್ಟಿರುವುದು. ಭೂಸಂಪರ್ಕ, ಪ್ರಾಕೃತಾನ್ನ ಭೋಜನ ಇತ್ಯಾದಿ ಹಾಗೂ ಭಗವಂತನ ಇಚ್ಛೆ ಇವುಗಳೇ ಆಗಿದೆ. ಹಾಗಾಗಿ ಹಿಂದೆ ಹೇಳಿದ ಬಾಧಕಕ್ಕೂ ಅವಕಾಶವಿಲ್ಲ. ಹೀಗೆ ಅಂಶಾಂಶಿಗಳಿಗೆ ಅಭೇದ ಸಿದ್ಧವಾದ ಮೇಲೆ ಅಂಶಿಯು ಅನಾದಿಯಾದ್ದರಿಂದ ಅಂಶವೂ ಅನಾದಿಯೇ ಆಗಬೇಕು. ಅಂಶಕ್ಕೆ ಸ್ವರೂಪೋತ್ಪತ್ತಿ ಕೂಡುವುದಿಲ್ಲ. ಅನಾದಿಯಾದ ಅಂಶನ ಧರ್ಮವಾದ ಯೋಗ್ಯತೆಯೂ ಅನಾದಿಯೇ ಆಯಿತು. ಹೀಗಾಗಿ ಉಪಾಸನಾದಿಗಳಲ್ಲಿ ಅನಾದಿಯೋಗ್ಯತಾಪೇಕ್ಷಾ ಎಂಬುದು ಸಿದ್ಧವಾಯಿತು.

**ಅಧಿಕರಣ ಫಲ** :- ಉಪಾಸನೆಯಲ್ಲಿ ಅನಾದಿ ಯೋಗ್ಯತಾಸಾ-ಪೇಕ್ಷತ್ವವನ್ನು ಒಪ್ಪದೇ ಹೋದರೆ ಆಗ ಯೋಗ್ಯತೆ ಇಲ್ಲದವರೂ ಉಪಾಸನೆ ಮಾಡಬಹುದು ಎಂದಾಗಿ ಅವ್ಯವಸ್ಥೆ ಉಂಟಾಗುತ್ತದೆ. ಹಾಗಾಗಿ ಅನಾದಿ-ಯೋಗ್ಯತಾಸಾಪೇಕ್ಷತ್ವವನ್ನು ಸಮರ್ಥಿಸಬೇಕು. ಇದೇ ಈ ಅಧಿಕರಣದ ಪ್ರಯೋಜನ.

## ॥ ಓಂ ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಮ್ ಓಂ ॥ ೩-೩-೩೬

ಹಿಂದೆ ಅರ್ಜುನಾದ್ಯಂಶರಿಂದ ಅಭಿನ್ನರು ಎಂದು ಪ್ರಕೃತರಾದ ಇಂದ್ರಾದಿ ದೇವತೆಗಳ ಉಪಾಸನೆಯನ್ನು ಆ ದೇವತೆಗಳ ಯೋಗ್ಯತಾನುಸಾರವಾಗಿ ಮಾಡಬೇಕು ಎಂದು ಸಮರ್ಥನೆ ಮಾಡುತ್ತಿರುವುದರದಿಂದ ಸಂಗತಿಯಿದೆ. ಪ್ರಕೃತವಾದ ಭಗವದುಪಾಸನೆಯನ್ನು ಅದೊಂದನ್ನೇ ಮಾಡಬೇಕೋ ಅಥವಾ ಬ್ರಹ್ಮಾದಿ ಅಂಗದೇವತೋಪಾಸನಾ ಸಹಿತವಾಗಿ ಮಾಡಬೇಕೋ? ತಮೇವೈಕಂ ಜಾನಥ', ಪೂಜಯೋನ್ನಾನ್ಯದೇವತಾ' ಇತ್ಯಾದಿ ಕಡೆಳಗಲ್ಲಿ ಸರ್ವಾತ್ಮನಾ ಅನ್ಯದೇವತಾ ಉಪಾಸನೆಯನ್ನು ನಿಷೇಧ ಮಾಡಿದ್ದಾರೋ ಅಥವಾ ಅನ್ಯ-ದೇವತೆಗಳನ್ನು ಪ್ರಧಾನವಾಗಿ ಉಪಾಸನೆ ಮಾಡಬಾರದು ಎಂಬ ಅಭಿಪ್ರಾಯವೋ? ಪ್ರಾಧಾನ್ಯೇನ ಉಪಾಸನೆ ಮಾಡಬಾರದು ಎಂಬುದಕ್ಕೆ ಜ್ಞಾಪಕ ಇಲ್ಲವೋ ಅಥವಾ ಇದೆಯೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

ಕೇವಲ ಭಗವದುಪಾಸನೆಯನ್ನು ಮಾಡಬೇಕು ಎಂಬುದೇ ಪೂರ್ವಪಕ್ಷ. ಏಕೆಂದರೆ, 'ತಮೇವೈಕಂ ಜಾನಥ' ಮೊದಲಾದ ಶ್ರುತಿಸ್ಮೃತಿಗಳಲ್ಲಿ ಅನ್ಯ-ದೇವತೆಗಳ ಉಪಾಸನಾ ಪೂಜಾ ಇತ್ಯಾದಿಗಳನ್ನು ನಿಷೇಧ ಮಾಡಿದ್ದಾರೆ. ಅನ್ಯ-ದೇವತೆಗಳ ಉಪಾಸನಾ ನಿಷೇಧಕ್ಕೆ ಅವರನ್ನು ಸ್ವತಂತ್ರರು ಎಂದು ಉಪಾಸನೆ ಮಾಡಬಾರದು, ಎಂದಷ್ಟೇ ಅಭಿಪ್ರಾಯ ಎನ್ನಲು ಯಾವುದೇ ಜ್ಞಾಪಕವಿಲ್ಲ.

**ದ್ವಿತೀಯ ಪೂರ್ವಪಕ್ಷ** :- ಅನ್ಯದೇವತೋಪಾಸನೆಯನ್ನು ಮಾಡಬೇಕು ಎಂಬ ಪಕ್ಷದಲ್ಲಿಯೂ ಒಬ್ಬರಲ್ಲಿ ಪ್ರತೀತವಾದ ಗುಣಗಳನ್ನೇ ಇತರ ದೇವತೆಗಳಲ್ಲಿಯೂ ಇದೆ ಎಂದು ಉಪಾಸನೆ ಮಾಡಬೇಕು. ಏಕೆಂದರೆ ದೇವತ್ವವೇ ಮೊದಲಾದ ಗುಣಗಳನ್ನು ಎಲ್ಲರಲ್ಲೂ ಉಪಾಸನೆ ಮಾಡುವುದು ಕಂಡಿದೆ. ಹಾಗು ಈ ರೀತಿಯ ಉಪಾಸನೆಯಿಂದ ಯಾವ ಬಾಧಕವೂ ಇಲ್ಲ (ಸಾಮ್ಯೋ-ಪಾಸನೆ ಮಾಡಬೇಕು ಎಂದು ಅಭಿಪ್ರಾಯ).

**ಸಿದ್ಧಾಂತ** :- ಅನ್ಯದೇವತೋಪಾಸನೆಯಿಂದ ಕೂಡಿದ ಭಗವದುಪಾಸನೆ-ಯನ್ನೇ ಮಾಡಬೇಕು. ಏಕೆಂದರೆ, ವೇದದಲ್ಲಿ ದೇವತೆಗಳ ಪ್ರತಿಪಾದನೆಯಿದೆ. ಈ ಪ್ರತಿಪಾದನೆಯು 'ಆಧ್ಯಾನಾಯ ಪ್ರಯೋಜನಾಭಾವಾತ್' ಎಂಬ ಅಧಿಕರಣದಲ್ಲಿ ಹೇಳಿದ ನ್ಯಾಯದಿಂದ ಉಪಾಸನೆಗೋಸ್ಕರವೇ ಎಂದು ಹೇಳಬೇಕು. ದೇವತೆಗಳ ಉಪಾಸನೆ ಇಲ್ಲ ಎಂದರೆ ವೇದದಲ್ಲಿ ದೇವತೆಗಳ ಪ್ರತಿಪಾದನೆ ಮಾಡಿರುವುದೇ ವ್ಯರ್ಥವಾಗುತ್ತದೆ. ದೇವತೋಪಾಸನೆಯನ್ನು ಒಪ್ಪದೇ ದೇವತೆಗಳ ಪ್ರತಿಪಾದನೆಯನ್ನು ಕೂಡಿಸಲಿಕ್ಕೆ ಬರುವುದಿಲ್ಲ. ಈ ಅನ್ಯಥಾನುಪಪತ್ತಿ ಎಂಬ ಸಾಧಕವಿರುವುದರಿಂದ ದೇವತೋಪಾಸನೆ ಮಾಡಬೇಕು. ಅನ್ಯದೇವತೋಪಾಸನೆ ಮಾಡಬೇಕಾದ್ದರಿಂದಲೇ 'ತಮೇವೈಕಂ ಜಾನಥ' ಇತ್ಯಾದಿ ವಾಕ್ಯಗಳಿಗೆ ಪ್ರಾಧನ್ಯೇನ ಅನ್ಯದೇವತೋಪಾಸನೆಯನ್ನು ಮಾಡಬಾರದು ಎಂದಷ್ಟೇ ಅಭಿಪ್ರಾಯ. ಅವಶ್ಯವಾಗಿ ಹೀಗೆ ಹೇಳಬೇಕು ಹಾಗಾಗಿ 'ತಮೇವೈಕಂ ....' ಇತ್ಯಾದಿ ಶ್ರುತಿಸ್ಮೃತಿಗಳ ವಿರೋಧವೂ ಇಲ್ಲ.

ಅನ್ಯದೇವತೋಪಾಸನೆ ಮಾಡಬೇಕು ಎಂದಾದರೂ 'ಸಮತ್ವಾ-ದ್ವೋತ್ತಮತ್ವಾದ್ವಾ...' ಎಂಬ ಸ್ಮೃತಿಯಲ್ಲಿ ಹೇಳಿದಂತೆ ದೇವತೆಗಳಲ್ಲಿ ನಿಚೋಚ್ಚಭಾವವಿರುವುದರಿಂದ ಉತ್ತಮರ ಗುಣಗಳನ್ನು ಅಧಮರಲ್ಲಿ

ಉಪಾಸನೆ ಮಾಡಬಾರದು. ಆ ದೇವತೆಗಳಲ್ಲಿರಲು ಯೋಗ್ಯವಾದ ಗುಣಗಳನ್ನು ಮಾತ್ರ ಉಪಾಸನೆ ಮಾಡಬೇಕು. ಹೇಗೆ ಎಲ್ಲಾ ಭಗವದ್ವಾಚಕ ವಾಕ್ಯಗಳನ್ನು (ಸಹಸ್ರಶೀರ್ಷಾ ಇತ್ಯಾದಿ) ಇತರ ದೇವತೆಗಳಲ್ಲಿ ಸಮನ್ವಯ ಮಾಡದೇ, ಯೋಗ್ಯವಾದ ವಾಕ್ಯಗಳನ್ನು ಮಾತ್ರ (ಹಿರಣ್ಯಗರ್ಭಃ ಸಮವರ್ತತಾಗ್ರೇ ಇತ್ಯಾದಿ) ಇತರ ದೇವತೆಗಳಲ್ಲಿ ಸಮನ್ವಯ ಮಾಡಬೇಕೋ ಹಾಗೆ ಉತ್ತಮರಲ್ಲಿರುವ ಎಲ್ಲಾ ಗುಣಗಳನ್ನು ಅಧಮರಲ್ಲಿ ಉಪಾಸನೆ ಮಾಡಬಾರದು. ಯೋಗ್ಯವಾದದ್ದನ್ನು ಮಾತ್ರ ಮಾಡಬೇಕು.

ಆದರೆ ಅಧಮದೇವತೆಗಳ ಗುಣಗಳನ್ನು ಉತ್ತಮರಲ್ಲಿ ಧ್ಯಾನಮಾಡ-ಬಹುದು. ಹೇಗೆ ಅಧಮದೇವತಾಪ್ರತಿಪಾದಕ ಮಂತ್ರಗಳನ್ನು ಉತ್ತಮ-ದೇವತಾಪರವಾಗಿಯೂ ತಿಳಿಯಬೇಕೋ ಹಾಗೆ. ಗುಣೋಪಸಂಹಾರ ರೂಪವಾದ ಉಪಾಸನೆಯನ್ನು ವಿಶೇಷಫಲಕ್ಕೋಸ್ಕರ ಉತ್ತಮಾಧಿಕಾರಿಗಳು ಮಾತ್ರ ಮಾಡಬೇಕು. ಎಲ್ಲರೂ ಮಾಡಬಾರದು (ಪರಿವಾರತಯಾ ಅಂಗ-ದೇವತೆಗಳ ಉಪಾಸನೆಯನ್ನು ಎಲ್ಲರೂ ಮಾಡಬೇಕು). ಈ ವಿಚಾರವು 'ಉಪಾಸನಾಂಗದೇವಾನಾಂ' ಎಂಬ ಸ್ಮೃತಿಯಲ್ಲಿ ಹೇಳಲ್ಪಟ್ಟಿದೆ.

**ಅಧಿಕರಣದ ಫಲ :-** ದೇವತಾಪ್ರತಿಪಾದಕ ವೇದಭಾಗವು ಸಾರ್ಥಕ ಎಂದು ಸಮರ್ಥನೆ ಮಾಡುವುದೇ ಈ ಅಧಿಕರಣದ ಪ್ರಯೋಜನ.

## ॥ ಓಂ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಚ ದರ್ಶಯತಿ ಓಂ ॥ ೩-೩-೫೭

ಹಿಂದಿನ ಅಧಿಕರಣದಲ್ಲಿ ಗುಣೋಪಸಂಹಾರರೂಪ ದೇವತೋಪಾಸನೆಯ ಫಲ ಎಲ್ಲರಿಂದಲೂ ಹೊಂದಲು ಸಾಧ್ಯವಿಲ್ಲವಾದ್ದರಿಂದ ಅಂತಹ ಉಪಾಸನೆ-ಯನ್ನು ಎಲ್ಲರೂ ಮಾಡಬಾರದು ಎಂದು ಹೇಳಿದೆ. ಹಾಗಾದರೆ ಭೂಮ-ಗುಣದ ಉಪಾಸನೆಯು ಎಲ್ಲರಿಂದ ಮಾಡಲ್ಪಡಬಾರದು ಎಂಬ ಶಂಕಾ ಬರುತ್ತದೆ. ಏಕೆಂದರೆ ಭೂಮಗುಣೋಪಾಸನೆಯ ಫಲ ನಿರತಿಶಯ ಭೂಮತ್ವ. ಅದು ಎಲ್ಲರಿಂದಲೂ ಪ್ರಾಪ್ಯವಲ್ಲ. ಈ ರೀತಿ ಈ ಅಧಿಕರಣಕ್ಕೆ ಹಿಂದಿನಿಂದ ಸಂಗತಿಯಿದೆ.

'ಯೋ ವೈ ಭೂಮಾ' ಇತ್ಯಾದಿ ಶ್ರುತಿಗಳಲ್ಲಿ ಶ್ರುತವಾದ ಭೂಮಗುಣವು ಎಲ್ಲರಿಂದಲೂ ಉಪಾಸ್ಯವಲ್ಲವೋ ಅಥವಾ ಉಪಾಸ್ಯವೋ? ಭೂಮ ಗುಣೋ-ಪಾಸನೆಯು ವ್ಯರ್ಥವೋ ಅಥವಾ ಸಾರ್ಥಕವೋ? ಹೀಗೆ ಒಂದಕ್ಕೊಂದು ಪೂರಕವಾದ ವಿಚಾರ ಪ್ರಸ್ತುತವಾಗಿದೆ.

ಭೂಮಗುಣವು ಸರ್ವೋಪಾಸ್ಯವಲ್ಲ ಎಂದೇ ಪೂರ್ವಪಕ್ಷ. ಏಕೆಂದರೆ, ಹೇಗೆ ಸಂಭೃತಿ ಮೊದಲಾದ ಗುಣಗಳ ಉಪಾಸನೆಯಿಂದ ಬರುವ ಫಲವು ಎಲ್ಲರಿಂದಲೂ ಪ್ರಾಪ್ಯವಲ್ಲವಾದ್ದರಿಂದ ಸಂಭೃತ್ಯಾದಿ ಗುಣಗಳನ್ನು ಎಲ್ಲರೂ ಉಪಾಸನೆ ಮಾಡಬಾರದೋ ಹಾಗೆ ಭೂಮಗುಣದ ಉಪಾಸನೆಯನ್ನು ಎಲ್ಲರೂ ಮಾಡಬಾರದು. ಏಕೆಂದರೆ, ಭೂಮಗುಣೋಪಾಸನೆಯ ಫಲ ನಿರತಿಶಯಪೂರ್ಣತ್ವ. ಇದು ಯಾರಿಂದಲೂ ಹೊಂದಲು ಸಾಧ್ಯವಿಲ್ಲ-ವಾದ್ದರಿಂದ ಅಪೇಕ್ಷಿತವಲ್ಲ. ಹಾಗಾಗಿ ಭೂಮಗುಣೋಪಾಸನೆ ವ್ಯರ್ಥ. ಆದ್ದರಿಂದಲೇ ಸರ್ವೋಪಾಸ್ಯವಲ್ಲ.

**ಪ್ರಶ್ನೆ** :- ಭೂಮತ್ವವನ್ನು ಪ್ರತ್ಯೇಕವಾಗಿ ಉಪಾಸನೆ ಮಾಡದೇ ಹೋದರೂ ಆನಂದಾದಿ ಗುಣಗಳಿಗೆ ವಿಶೇಷಣವಾಗಿ ಉಪಸನೆ ಮಾಡಬಹುದಲ್ಲಾ?

**ಪರಿಹಾರ** :- ಎಂದರೆ ಇದು ಸರಿಯಲ್ಲ. ಹೇಗೆ ಪ್ರಿಯಶಿರಸ್ತ್ವ ಮೊದಲಾದ ಗುಣಗಳ ಉಪಾಸನೆಯು ಯೋಗ್ಯಫಲ ಹೊಂದಲನುಪಯೋಗಿಯಾದ್ದರಿಂದ ವ್ಯರ್ಥವೋ ಹಾಗೇ ಭೂಮತ್ವೋಪಾಸನೆಯೂ ಕೂಡ. ಹಾಗಾಗಿ ವಿಶೇಷಣ-ವಾಗಿಯೂ ಸರ್ವೋಪಾಸ್ಯವಲ್ಲ.

**ಸಿದ್ಧಾಂತ** :- ಭೂಮಗುಣವು ಸರ್ವೋಪಾಸ್ಯವೇ ಆಗಿದೆ. ಏಕೆಂದರೆ, 'ಭೂಮೈವ ದೇವಃ ಪರಮೋ ಹ್ಯುಪಾಸ್ಯಃ' ಎಂಬ ಶ್ರುತಿಯು ಭೂಮತ್ವದಿಂದ ಸಹಿತವಾದ ಆನಂದಾದಿಗುಣಗಳನ್ನು ಉಪಾಸನೆ ಮಾಡಿದರೆ ಮಾತ್ರ ಇಷ್ಟಫಲ ಸಿದ್ಧಿಯಾಗುತ್ತದೆ. ಇಲ್ಲದಿದ್ದರೆ ಇಲ್ಲ ಎಂದು ಹೇಳುತ್ತಿದೆ. ಹಾಗಾಗಿ ಜ್ಞಾನಂ ಭೂಮ, ಆನಂದಃ ಭೂಮಾ ಈ ರೀತಿಯಾಗಿ ಭೂಮಗುಣೋಪಾಸನೆಯು ಅಭಿಮತಫಲಪ್ರಾಪ್ತಿಗೆ ಕಾರಣವಾದ್ದರಿಂದ ಸಾರ್ಥಕವೇ ಆಗಿದೆ. ಆದ್ದರಿಂದಲೇ ಸರ್ವೋಪಾಸ್ಯವೂ ಆಗಿದೆ. ಹೇಗೆ ದೀಕ್ಷಾ, ಪ್ರಾಯಣೀಯ, ಉದಯನೀಯ, ಸವನತ್ರಯ, ಅವಭೃಥ ಇವುಗಳನ್ನು ಒಳಗೊಂಡ ಕ್ರತುವು ಸರ್ವ-

ಯಾಗಗಳಲ್ಲೂ ಅನುಸರಿಸಲ್ಪಟ್ಟರೆ ಯಾಗವು ಸಫಲವಾಗುತ್ತದೆ. ಇಲ್ಲದೇ ಹೋದರೆ ವಿಫಲವಾಗುತ್ತದೆ, ಹಾಗಾಗಿ ಕ್ರತುವು ಶ್ರೇಷ್ಠ. ಆದ್ದರಿಂದಲೇ ಸರ್ವರಿಂದಲೂ ಅವಶ್ಯಕರ್ತವ್ಯ. ಅದೇ ರೀತಿ ಭೂಮಗುಣಸಹಿತವಾಗಿ ಆನಂದಾದಿಗುಣಗಳನ್ನು ಉಪಾಸನೆ ಮಾಡಿದರೆ ಅದು ಸಫಲವಾಗುತ್ತದೆ. ಇಲ್ಲದೇ ಹೋದರೆ ಇಲ್ಲ. ಹಾಗಾಗೇ ಭೂಮತ್ವ ಶ್ರೇಷ್ಠ ಆದ್ದರಿಂದಲೇ ಸರ್ವೋಪಾಸ್ಯ.

**ಅಧಿಕರಣ ಫಲ** :- ಓಂ ಕಾರ್ಯಾಖ್ಯಾನಾತ್ ಓಂ ಎಂಬ ಸೂತ್ರದಲ್ಲಿ ಅಲೌಕಿಕಗುಣೋಪಾಸನೆಯು ವಿಧಿಸಲ್ಪಟ್ಟಿದೆ. ಅದರ ಸಮರ್ಥನೆಯನ್ನೇ ಇಲ್ಲಿ ಮಾಡಲಾಗಿದೆ. ಭೂಮತ್ವ ಸಹಿತವಾಗಿ ಆನಂದಾದಿ ಗುಣಗಳನ್ನು ಉಪಾಸನೆ ಮಾಡದೇ ಹೋದರೆ ಅಲೌಕಿಕತ್ವ ಸಿದ್ಧವಾಗುವುದಿಲ್ಲ.

## ॥ ಓಂ ನಾನಾ ಶಬ್ದಾದಿಭೇದಾತ್ ಓಂ ॥ ೩-೩-೫೮

ಹಿಂದೆ ಭೂಮಗುಣವನ್ನು ಎಲ್ಲರೂ ಉಪಾಸನೆ ಮಾಡಬೇಕೆಂದು ಸಾಮಾನ್ಯವಾಗಿ ಹೇಳಲಾಗಿತ್ತು. ಅದರ ವಿಶೇಷವಿಚಾರವನ್ನು ಇಲ್ಲಿ ಮಾಡುತ್ತಿರುವುದರಿಂದ ಸಂಗತಿಯಿದೆ. ಅಥವಾ ಭೂಮತ್ವವು ಸರ್ವೋಪಾಸ್ಯ-ವಾದರೆ ಆಗ 'ಯಾವದಧಿಕಾರಮ್' ಎಂಬಲ್ಲಿ ಹೇಳಿದ ತಾರತಮ್ಯಕ್ಕೆ ಭಂಗ ಬರುತ್ತದೆ ಎಂದು ಶಂಕಾ ಮಾಡುತ್ತಿರುವುದರಿಂದ ಸಂಗತಿಯಿದೆ. ಪ್ರಕೃತವಾದ ಭೂಮತ್ವವು ಅಧಿಕಾರಿಗಳಿಗೆ ಒಂದೇ ರೀತಿಯಾಗಿ ತೋರುತ್ತದೋ ಅಥವಾ ಅನೇಕ ವಿಧವಾಗಿ ತೋರುತ್ತದೆಯೋ? ಅನೇಕ ವಿಧವಾಗಿ ತೋರಿದರೆ ಅಂತಹ ಪ್ರತೀತಿಯು ಭ್ರಾಂತಿ ಎಂದಾಗುತ್ತದೋ ಅಥವಾ ಇಲ್ಲವೋ? ಭೂಮತ್ವವು ಒಂದೇ ರೀತಿಯಾಗಿದೆಯೋ ಅಥವಾ ನಾನಾರೂಪವಾಗಿಯೂ ಇರ-ಬಹುದೋ? ಹೀಗೆ ಒಂದಕ್ಕೊಂದು ಸಂಗತವಾದ ವಿಚಾರಗಳು ಬಂದಿವೆ.

ಭೂಮತ್ವವು ಒಂದೇ ರೀತಿಯಾಗಿದೆ ಎಂದು ಪೂರ್ವಪಕ್ಷ. ಏಕೆಂದರೆ, ಭೂಮತ್ವ ಎಂದರೆ ನಿರತಿಶಯಪೂರ್ಣತ್ವ. ಇಂತಹ ಭೂಮತ್ವದಲ್ಲಿ ತಾರತಮ್ಯ ಇರಲು ಸಾಧ್ಯವಿಲ್ಲ. ಹಾಗಾಗಿ ಭೂಮತ್ವವು ನಾನಾರೂಪವಾಗಿದೆ ಎಂಬುದು ಕೂಡುವುದಿಲ್ಲ. ಏಕರೂಪವಾಗಿದೆ ಎಂದೇ ಹೇಳಬೇಕು. ಭೂಮತ್ವವು

ಏಕರೂಪವಾಗಿದ್ದರೂ ಶ್ರವಣ, ಮನನ ಅಪರೋಕ್ಷಜ್ಞಾನಗಳಲ್ಲಿ ಅದು ತಾರತಮ್ಯದಿಂದ ತೋರುತ್ತದೆ ಎಂದರೆ ಆಗ ಅಂತಹ ಶ್ರವಣಾದಿಗಳಿಗೆ ಮಿಥ್ಯಾಜ್ಞಾನತ್ವ ಬರಬೇಕಾಗುತ್ತದೆ. ಹಾಗಾಗಿ ಭೂಮತ್ವವು ಒಂದೇ ವಿಧವಾಗಿ ತೋರುತ್ತದೆ ಎನ್ನುವುದೇ ಯುಕ್ತ.

**ಸಿದ್ಧಾಂತ :-** ಭೂಮತ್ವವು ಅನೇಕವಿಧವಾಗಿದೆ. ಹೇಗೆ ಅತೀತವಾದ ವತ್ಸರ, ಮಾಸ, ಪಕ್ಷ, ದಿನ, ಘಟಿಕಾ ಇತ್ಯಾದಿಗಳ ಆನಂತ್ಯದಲ್ಲಿ ತಾರತಮ್ಯವಿದೆಯೋ ಅದೇ ರೀತಿ ಭೂಮತ್ವವು ನಿರತಿಶಯಪೂರ್ಣತ್ವರೂಪವಾದರೂ ಅದರಲ್ಲಿ ತಾರತಮ್ಯವಿರಲು ಸಾಧ್ಯವಿದೆ. ಭಗವಂತನ ಗುಣಗಳಲ್ಲಿ ಹಾಗು ಭಗವಂತ-ನಲ್ಲಿ ಅನೇಕ ಆನಂತ್ಯಗಳಿರುವುದರಿಂದ ಆ ಆ ಅಧಿಕಾರಿಗಳಿಗೆ ಅನು-ಗುಣವಾಗಿ ಅಷ್ಟಷ್ಟು ಪೂರ್ಣತ್ವವು ಶ್ರವಣ ಮನನ ಅಪರೋಕ್ಷಜ್ಞಾನಗಳಲ್ಲಿ ತೋರುತ್ತದೆ. ಭಗವಂತನ ಗುಣದ ಪೂರ್ಣತ್ವ ಇಷ್ಟೇ ಎಂದು ತೋರುವುದಿಲ್ಲವಾದ್ದರಿಂದ ಭ್ರಾಂತಿತ್ವದ ಪ್ರಶ್ನೆ ಇಲ್ಲ.

ಭೂಮತ್ವವು ಅನೇಕ ವಿಧವಾಗಿಯೇ ತೋರುವುದರಿಂದ ಅಧಿಕಾರಿಗಳು ತಾವು ಹೊಂದಬೇಕಾದ ಫಲಕ್ಕೆ ಅನುಸಾರವಾಗಿ ಅನೇಕವಿಧವಾಗಿಯೇ ಭೂಮತ್ವದ ಉಪಾಸನೆಯನ್ನು ಮಾಡಬೇಕು.

**ಅಧಿಕರಣ ಫಲ :-** ಹಿಂದೆ 'ಯಾವದಧಿಕಾರಮ್' ಎಂಬಲ್ಲಿ ಹೇಳಿದ ಉಪಾಸಕತಾರತಮ್ಯದ ಸಮರ್ಥನೆಯನ್ನೇ ಇಲ್ಲಿ ಮಾಡಲಾಗಿದೆ.

## ॥ ಓಂ ವಿಕಲ್ಪೋ ವಿಶಿಷ್ಟಫಲತ್ವಾತ್ ಓಂ ॥ ೩-೩-೫೯

ಹಿಂದೆ ಭಗವಂತನ ಗುಣಗಳ ಉಪಾಸನೆಯಲ್ಲಿ ವಿಶೇಷವನ್ನು ಹೇಳಿದ್ದರು. ಈಗ ಭಗವಂತನ ರೂಪಗಳ ಉಪಾಸನೆಯಲ್ಲಿ ವಿಶೇಷವಿಚಾರ ಮಾಡುತ್ತಿದ್ದಾರಾದ್ದರಿಂದ ಸಂಗತಿಯಿದೆ. ಭಗವದುಪಾಸನೆಯಲ್ಲಿ ಬಿಂಬ-ರೂಪಕ್ಕಿಂತ ಅತಿರಿಕ್ತವಾದ ರೂಪದ ಉಪಾಸನೆಯನ್ನು ಮಾಡಲೇಬಾರದು ಎಂಬ ನಿಯಮವಿದೆಯೋ ಅಥವಾ ಮಾಡಬಹುದು ಅಥವಾ ಮಾಡದೇ ಇರಬಹುದು ಎಂಬ ವಿಕಲ್ಪವೋ? ಬಿಂಬಾತಿರಿಕ್ತ ಉಪಾಸನೆಗೆ ಫಲ ಇಲ್ಲವೋ ಅಥವಾ ಇದೆಯೋ? ಬಿಂಬಾತಿರಿಕ್ತೋಪಾಸನೆಗೆ ಮೋಕ್ಷವೇ ಫಲವೋ

ಅಥವಾ ಬೇರೆ ಫಲವೂ ಇದೆಯೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

ಬಿಂಬಾತಿರಿಕ್ತ ನರಸಿಂಹಾದಿರೂಪಗಳ ಉಪಾಸನೆಯನ್ನು ಮಾಡಬಾರದು ಎಂದೇ ಪೂರ್ವಪಕ್ಷ. ಏಕೆಂದರೆ ಮುಮುಕ್ಷುಗಳು ಮಾಡುವ ಉಪಾಸನೆಗೆ ಮೋಕ್ಷಬಿಟ್ಟು ಬೇರೆ ಫಲವಿರಲು ಸಾಧ್ಯವಿಲ್ಲ. ಮೋಕ್ಷವಾದರೋ 'ನ ಸಾಮಾನ್ಯಾದಪ್ಯುಪಲಬ್ಧೇಃ' ಎಂಬಲ್ಲಿ ಹೇಳಿದಂತೆ ಬಿಂಬೋಪಾಸನೆಯಿಂದಲೇ ಪ್ರಾಪ್ತವಾಗುತ್ತದೆ. ಹಾಗಾಗಿ ಬಿಂಬಾತಿರಿಕ್ತೋಪಾಸನೆಗೆ ಮೋಕ್ಷವು ಫಲ ಎನ್ನಲು ಸಾಧ್ಯವಿಲ್ಲ. ಹಾಗಾಗಿ ಅತಿರಿಕ್ತೋಪಾಸನೆಯು ನಿಷ್ಫಲ ಎಂದಾಯಿತು. ಅಷ್ಟೇ ಅಲ್ಲದೇ ಈ ಅತಿರಿಕ್ತೋಪಾಸನೆಯು ಮೋಕ್ಷೋಪಯೋಗಿಯಾದ ಬಿಂಬೋಪಾಸನೆಗೆ ವಿಘ್ನವನ್ನೂ ಉಂಟುಮಾಡುತ್ತದೆ. ಆದ್ದರಿಂದಲೂ ಅಕಾರ್ಯವಾಗಿದೆ.

**ಸಿದ್ಧಾಂತ** :- ಉಪಾಸಕರು ಮೋಕ್ಷವನ್ನೇ ಬಯಸುತ್ತಾರಾದರೂ ಮೋಕ್ಷಹೇತುವಾದ ಬಿಂಬೋಪಾಸನೆಗೆ ಉಪಯುಕ್ತವಾದ್ದರಿಂದ ಬಿಂಬಾ-ತಿರಿಕ್ತೋಪಾಸನೆಯನ್ನು ಮಾಡಬಹುದು. ನರಸಿಂಹಾದಿರೂಪಗಳ ಉಪಾಸನೆಯಿಂದ ಅಪೇಕ್ಷಿತವಾದ ದುರಿತನಿವೃತ್ತಿಯು ಉಂಟಾಗುತ್ತದೆ. ಹಾಗಾಗಿ ಅದು ಸಫಲವೇ ಆಗಿದೆ. ಆದರೆ ಯಾವ ಉಪಾಸಕನು ತೀವ್ರವಾದ ಸ್ವಬಿಂಬೋ-ಪಾಸನೆಯಿಂದಲೇ ದುರಿತಗಳನ್ನು ಪರಿಹರಿಸಿಕೊಳ್ಳಲು ಸಮರ್ಥನೋ ಅಂತಹವನು ಅತಿರಿಕ್ತೋಪಾಸನೆಯನ್ನು ಮಾಡಬಾರದು. ಹೀಗೆ ಅತಿ-ರಿಕ್ತೋಪಾಸನೆಯಲ್ಲಿ ವ್ಯವಸ್ಥಿತವಿಕಲ್ಪ ಎಂಬುದೇ ಸಿದ್ಧಾಂತ. ಹೇಗೆ ಅತಿ-ರಾತ್ರಯಾಗದಲ್ಲಿ ಷೋಡಶಿಗ್ರಹಣ ಅಗ್ರಹಣ ವಿಷಯದಲ್ಲಿ ವ್ಯವಸ್ಥಿತವಿಕಲ್ಪ ಒಪ್ಪಲಾಗಿದೆಯೋ ಅದೇ ರೀತಿ ಇಲ್ಲಿಯೂ ಕೂಡ.

ಇನ್ನು 'ಮುಕ್ತ್ಯರ್ಥಂ ಆತ್ಮಯೋಗ್ಯಂ ಹಿ' ಎಂಬ ಸ್ಮೃತಿಯೂ ಕೂಡ ಅತಿರಿಕ್ತೋಪಾಸನೆಯಲ್ಲಿ ವ್ಯವಸ್ಥಿತ ವಿಕಲ್ಪ ಎಂಬುದನ್ನೇ ಹೇಳುತ್ತಿದೆ.

ಅಧಿಕರಣ ಫಲ :- ಬಿಂಬಾತಿರಿಕ್ತೋಪಾಸನೆಯನ್ನು ಸಮರ್ಥನೆ ಮಾಡಿದ್ದರಿಂದ ನರಸಿಂಹಾದಿ ಪ್ರತಿಪಾದಕ ಗ್ರಂಥಗಳಿಗೆ ಸಾಫಲ್ಯವನ್ನು ಹೇಳಿ-ದಂತಾಯಿತು (ಆ ರೂಪಗಳ ಉಪಾಸನೆಯೆ ಇಲ್ಲ ಎಂದಾಗಿದ್ದರೆ ಅದನ್ನು ಹೇಳಿದ್ದೇ ವ್ಯರ್ಥವಾಗುತ್ತಿತ್ತು). ಇದೇ ಈ ಅಧಿಕರಣದ ಫಲ.

## ॥ ಓಂ ಕಾಮ್ಯಾಸ್ತು ಯಥಾಕಾಮಮ್ ಸಮುಚ್ಚೀಯೇರನ್ ನ ವಾ ಪೂರ್ವಹೇತ್ವಭಾವಾತ್ ಓಂ ॥ ೩-೩-೪೦

ನರಸಿಂಹಾದಿ ರೂಪಗಳ ಉಪಾಸನೆಯು ಮೋಕ್ಷೋಪಯೋಗಿಯಾದ ದುರಿತನಿವೃತ್ತಿ ಎಂಬ ಫಲವನ್ನು ಕೊಡುವುದರಿಂದ ಮಾಡಲ್ಪಡಬೇಕು ಎಂದಾದರೆ ಮೋಕ್ಷೋಪಯೋಗಿಯಾದ್ದರಿಂದಲೇ ಕಾಮ್ಯರೂಪಗಳ ಉಪಾಸನೆಯನ್ನೂ ಮಾಡಬೇಕು ಎಂದು ಶಂಕಾ ಮಾಡುತ್ತಿರುವುದರಿಂದ ಸಂಗತಿಯಿದೆ. ಅಥವಾ ನರಸಿಂಹಾದಿ ರೂಪಗಳ ಉಪಾಸನೆಯಲ್ಲಿ ಹೇಗೆ ವ್ಯವಸ್ಥಿತವಿಕಲ್ಪವನ್ನು ಸಾಧನೆ ಮಾಡಲಾಗಿದೆಯೋ ಹಾಗೇ ಕಾಮ್ಯರೂಪಗಳ ಉಪಾಸನೆಯಲ್ಲೂ ವ್ಯವಸ್ಥಿತ ವಿಕ್ಪವನ್ನು ಸಾಧನೆ ಮಾಡುತ್ತೇವೆ ಎಂದು ಹೇಳುತ್ತಿರುವುದರಿಂದ ಸಂಗತಿಯಿದೆ. ಕಾಮ್ಯಸಾಧನವಾದ ಭಗವದ್ರೂಪ ಹಾಗು ಗುಣಗಳ ಉಪಾಸನೆಯು ಆವಶ್ಯಕವೋ ಅಥವಾ ವಿಕಲ್ಪವೋ? ಕಾಮ್ಯರೂಪಗಳ ಉಪಾಸನೆಯು ಆವಶ್ಯಕ ಎಂದಾದರೆ ಅದಕ್ಕೆ ಮೋಕ್ಷೋಪಯೋಗಿತ್ವ ಇದೆಯೋ ಅಥವಾ ಇಲ್ಲವೋ? ಎಂದು ಪರಸ್ಪರ ಸಂಗತವಾದ ವಿಚಾರ ಬಂದಿದೆ.

ಕಾಮ್ಯರೂಪೋಪಾಸನೆ ಆವಶ್ಯಕ ಎಂದೇ ಪೂರ್ವಪಕ್ಷ. ಏಕೆಂದರೆ, ಸಂಪತ್ತಿಲ್ಲದೇ ಹೋದರೆ ಜ್ಞಾನ ಲಭಿಸುವುದಿಲ್ಲ. ಹಾಗಾಗಿ ಸಂಪತ್ಪ್ರದವಾದ ಯಾವ ಭಗವದ್ರೂಪಗಳು ಹಾಗು ಗುಣಗಳಿವೆಯೋ ಅವುಗಳ ಉಪಾಸನೆಯನ್ನು ಮಾಡಬೇಕು. ಇಂತಹ ಉಪಾಸನೆಯಿಂದ ಜೀವನ ನಿರ್ವಹಣೆ ಆಗುವುದರ ಮೂಲಕ ಜ್ಞಾನವೂ ಲಭಿಸುತ್ತದೆ ಮತ್ತು ಅರ್ಥಕಾಮನೆ ಎಂಬುದು ಎಲ್ಲರಲ್ಲೂ ಇದ್ದೇ ಇರುತ್ತದೆ. ಈ ಕಾರಣದಿಂದಲೂ ಕಾಮ್ಯಭಗವದ್ರೂಪಗಳ ಉಪಾಸನೆಯನ್ನು ಆವಶ್ಯವಾಗಿ ಮಾಡಬೇಕು.

**ಸಿದ್ಧಾಂತ** :- ಕಾಮ್ಯರೂಪಗಳ ಉಪಾಸನೆಯಲ್ಲಿ ವ್ಯವಸ್ಥಿತ ವಿಕಲ್ಪವನ್ನೇ ಹೇಳಬೇಕು. ಏಕೆಂದರೆ, ಸಂಪತ್ತು, ಮನೆ, ತೋಟ, ಹೊಲ ಇವುಗಳು ಇಲ್ಲದೇ ಇರುವವರೂ ಜ್ಞಾನ ಸಂಪಾದನೆ ಮಾಡಿರುವುದು ಕಂಡಿದೆ. ಹಾಗಾಗಿ ಅರ್ಥಾದಿಗಳಿಂದಲೇ ಜ್ಞಾನ ಲಭಿಸುತ್ತದೆ ಎಂಬ ನಿಯಮವಿಲ್ಲ. ಹಾಗಾಗಿ ಕಾಮ್ಯರೂಪಗಳ ಉಪಾಸನೆಯು ಮೋಕ್ಷೋಪಯೋಗಿಯಾದ ಉಪಾಸನೆಗೆ

ಉಪಯೋಗಿಯಲ್ಲ. ಮತ್ತು ಅಧಿಕಾರಿಗಳೆಲ್ಲರೂ ಮೋಕ್ಷವನ್ನೇ ಬಯಸುವುದರಿಂದ ಅವರಿಗೆ ಅರ್ಥಾದಿಗಳ ಅಪೇಕ್ಷೆ ಇರುವುದಿಲ್ಲ. ಆದ್ದರಿಂದ ಮುಮುಕ್ಷುಗಳು ಕಾಮ್ಯರೂಪೋಪಾಸನೆಯನ್ನು ಮಾಡಬಾರದು. ಯಾರು ಮುಮುಕ್ಷುಗಳಲ್ಲವೋ ಅವರು ಮಾಡಬೇಕು ಎಂದು ಹೀಗೆ ಅಧಿಕಾರಿ-ವಿಶೇಷವನ್ನು ಇಟ್ಟುಕೊಂಡು ವ್ಯವಸ್ಥಿತ ವಿಕಲ್ಪವನ್ನು ಹೇಳಬೇಕು. ಅಥವಾ ಮುಮುಕ್ಷುಗಳೂ ಕೂಡ ಅರ್ಥಾದಿಗಳಿಗೋಸ್ಕರ ಮಾಡಬಾರದು ಭಗವತ್ಪ್ರೀತಿ-ಗಾಗಿ ಮಾಡಬೇಕು ಎಂದು ಹೀಗೆ ಫಲವಿಶೇಷವನ್ನು ಇಟ್ಟುಕೊಂಡು ವ್ಯವಸ್ಥಿತ ವಿಕಲ್ಪವನ್ನು ಹೇಳಬೇಕು. ಕಾಮ್ಯೋಪಾಸನೆಯು ಆವಶ್ಯಕ ಎಂಬ ನಿಯಮ ಮಾಡಬಾರದು. ಇನ್ನು 'ಯಸ್ಯ ಯಸ್ಯ ಹಿ' ಎಂಬ ಸ್ಮೃತಿಯು ವ್ಯವಸ್ಥಿತವಿಕಲ್ಪವನ್ನೇ ಹೇಳುತ್ತಿದೆ.

**ಅಧಿಕರಣದ ಫಲ** :- ಹಿಂದೆ ವೈರಾಗ್ಯಪಾದದಲ್ಲಿ ವೈರಾಗ್ಯವನ್ನು ಹುಟ್ಟಿಸುವುದಕ್ಕಾಗಿ ಗರ್ಭಯಾತನಾದಿಗಳ ನಿರೂಪಣೆಯನ್ನು ಮಾಡ-ಲಾಗಿತ್ತು. ಅದರ ಸಮರ್ಥನೆಯನ್ನೇ ಇಲ್ಲಿ ಮಾಡಲಾಗಿದೆ (ಕಾಮ್ಯರೂಪಗಳ ಉಪಾಸನೆಯನ್ನು ಮಾಡಬೇಕು ಎಂದಾದರೆ ವೈರಾಗ್ಯವನ್ನು ಉಪದೇಶ ಮಾಡಿದ್ದು ವ್ಯರ್ಥ ಎಂದಾಗುತ್ತದೆ).

## ॥ ಓಂ ಅಂಗೇಷು ಯಥಾಶ್ರಯಭಾವಃ ಓಂ ॥ ೩-೩-೪೧

ಹಿಂದೆ ಕಾಮ್ಯೋಪಾಸನೆಗೆ ಅಧಿಕಾರಿಗಳು ಇದ್ದಾರಾದ್ದರಿಂದ ಅದು ಕಾರ್ಯವಾದರೂ ಅಂಗದೇವತೋಪಾಸನೆಗೆ ಅಧಿಕಾರಿಗಳೇ ಇಲ್ಲವಾದ್ದರಿಂದ ಅದು ಕಾರ್ಯವಲ್ಲ ಎಂದು ಶಂಕಾ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಸಂಗತಿಯಿದೆ.

ಭಗವಂತನ ಅಂಗಗಳಲ್ಲಿ ಆಶ್ರಿತರು ಎಂಬುದಾಗಿ ಬ್ರಹ್ಮಾದಿದೇವತೆಗಳ ಉಪಾಸನೆಯನ್ನು ಮಾಡಬಾರದೋ ಅಥವಾ ಮಾಡಬೇಕೋ? ಶ್ರುತಿಯಲ್ಲಿ ದೇವತೆಗಳು ಭಗವಂತನ ಅಂಗಗಳಲ್ಲಿ ಆಶ್ರಿತರಾಗಿದ್ದಾರೆ ಎಂದು ಹೇಳಿದ್ದು ಹಾಗು ಆ ರೀತಿಯ ಉಪಾಸನೆಯನ್ನು ವಿಧಾನ ಮಾಡಿದ್ದು ಜೊತೆಗೆ ಭಗವಂತನ ಗುಣಗಳೆಲ್ಲವೂ ಉಪಾಸ್ಯವೇ ಎಂಬ ಗುಣಸಾಧಾರಣ್ಯಶ್ರವಣ,

ಇವೆಲ್ಲವೂ ಅಂಗದೇವತೋಪಾಸನೆಯು ಕಾರ್ಯ ಎಂಬುದಕ್ಕೆ ಸಾಧಕ-ವಾಗಿಲ್ಲವೋ ಅಥವಾ ಆಗಿದೆಯೋ? ಅಂಗದೇವತೋಪಾಸನೆಗೆ ಅಧಿಕಾರಿ-ಗಳು ಇಲ್ಲವೋ ಅಥವಾ ಇದ್ದಾರೋ? ಅಧಿಕಾರಿಗಳು ಇದ್ದಾರೆ ಎಂಬುದಕ್ಕೆ ಕಲ್ಪಕ ಇಲ್ಲವೋ ಅಥವಾ ಇದೆಯೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

ಅಂಗದೇವತೋಪಾಸನೆಯನ್ನು ಮಾಡಬಾರದು ಎಂಬುದೇ ಪೂರ್ವಪಕ್ಷ. ಏಕೆಂದರೆ ಆ ರೀತಿಯ ಉಪಾಸನೆ ಮಾಡಬೇಕು ಎನ್ನುವುದಕ್ಕೆ ಯಾವ ಪ್ರಮಾಣವೂ ಇಲ್ಲ.

**ಪ್ರಶ್ನೆ** :- 'ಬ್ರಹ್ಮಾ ಶಿರಸಿ ಲಲಾಟೇ ರುದ್ರಃ' ಇತ್ಯಾದಿ ಶ್ರುತಿಗಳಲ್ಲಿ ದೇವತೆಗಳು ಭಗವಂತನ ಅಂಗಾಶ್ರಿತರು ಎಂದು ಹೇಳಲಾಗಿದೆ. ಹೀಗೆ ಹೇಳಿರುವುದು ಉಪಾನಸೆಗೋಸ್ಕರವೇ ಎಂದು 'ಆಧ್ಯಾನಾಯ ಪ್ರಯೋಜನಾ-ಭಾವಾತ್' ಎಂಬ ಅಧಿಕರಣನ್ಯಾಯದಿಂದ ಸಿದ್ಧವಾಗುತ್ತದೆ. ಉಪಾಸನೆಯನ್ನು ಒಪ್ಪದೇ ಹೋದರೆ ಅಂಗಾಶ್ರಿತತ್ವವನ್ನು ಹೇಳಿದ್ದೇ ವ್ಯರ್ಥವಾಗುತ್ತದೆ. ಈ ಅನ್ಯಥಾನುಪಪತ್ತಿ ಎಂಬ ಪ್ರಮಾಣವಿದೆ. ಜೊತೆಗೆ 'ಯಸ್ಮಿನ್ ಯಸ್ಮಿನ್ ಯೋ ಹಿ ಚಾಂಗೇ ನಿವಿಷ್ಟಃ ಪರಸ್ಯ ಚಿಂತ್ಯಃ ಸ ತಥಾ ತಥೈವ' ಎಂಬ ಶ್ರುತಿಯಲ್ಲಿ ಅಂಗಾಶ್ರಿತತ್ವೇನ ದೇವತೋಪಾಸನೆಯು ವಿಧಿಸಲ್ಪಟ್ಟಿದೆ. ಹಾಗೇ, 'ಸಾಧಾರಣ್ಯಾತ್ ಸರ್ವಗುಣಾಃ ಪರಸ್ಯ ಸಮಾಹಾರ್ಯಾಸ್ತತ್ವದೃಶೋ ಮುಮುಕ್ಷೋಃ' ಎಂಬ ಶ್ರುತಿಯು ಜ್ಞಾನಾನಂದಾದಿಗುಣಗಳಂತೆ ಸೂರ್ಯಾ-ದ್ಯಾಶ್ರಯ ಚಕ್ಷುಷ್ಟ್ವ (ಸೂರ್ಯನಿಗೆ ಆಶ್ರಯವಾದ ಚಕ್ಷುಸ್ಸುಳ್ಳವನು ಭಗವಂತ) ಇದೇ ಮೊದಲಾದ ಭಗವಂತನ ಗುಣಗಳನ್ನೂ ಉಪಾಸನೆ ಮಾಡಬೇಕೆಂದು ಹೇಳುತ್ತಿದೆ. ಹಾಗಾಗಿ ಈ ಎಲ್ಲಾ ಪ್ರಮಾಣಗಳೂ ಅಂಗ-ದೇವತೋಪಾಸನೆಯು ಮಾಡಲ್ಪಡಬೇಕು ಎಂಬುದಕ್ಕೆ ಸಾಧಕವಾಗಿವೆ. ಅದು ಅಕಾರ್ಯ ಹೇಗೆ?

**ಪರಿಹಾರ** :- ಎಲ್ಲಾ ಅಧಿಕಾರಿಗಳೂ ಅಂಗದೇವತೋಪಾಸನೆಯನ್ನು ಮಾಡಬೇಕು ಎಂದಾದರೆ 'ಆನಂದಾದಯಃ ಪ್ರಧಾನಸ್ಯ' ಎಂಬಲ್ಲಿ ಹೇಳಿದ ಚತುರ್ಗುಣೋಪಾಸನೆಯ ನಿಯಮಕ್ಕೆ ಭಂಗ ಬರುತ್ತದೆ. ಬ್ರಹ್ಮಾಶ್ರಿತ-

ಶಿರಸ್ಕತ್ವವೇ ಮೊದಲಾದ ಗುಣಗಳು ಭೂಮಗುಣದಂತೆ ಆನಂದಾದಿಗಳಿಗೆ ವಿಶೇಷಣವಾಗಲು ಸಾಧ್ಯವಿಲ್ಲ. ಹಾಗಾಗಿ ಅಂಗದೇವತೋಪಾಸನೆಯು ಭೂಮಗುಣೋಪಾಸನೆಯಂತೆ ಚತುರ್ಗುಣೋಪಾಸನಾ ನಿಯಮಕ್ಕೆ ಭಂಗ ತರುವುದಿಲ್ಲ ಎಂದು ಹೇಳಲಾಗುವುದಿಲ್ಲ. ಅಂಗದೇವತೋಪಾಸನೆಗೆ ದೇವತೆಗಳು ಅಧಿಕಾರಿಗಳು ಎಂಬುದಕ್ಕೆ ಕಲ್ಪಕವಿಲ್ಲ. 'ರಾಜಾ ರಾಜಸೂಯೇನ ಯಜೇತ' ಎಂಬಲ್ಲಿ 'ರಾಜಾ' ಎಂಬ ಪದದಿಂದ ರಾಜಸೂಯಯಾಗವನ್ನು ರಾಜರು ಮಾಡಬೇಕು ಎಂದು ಹೇಳಿದಂತೆ 'ಬ್ರಹ್ಮಾ ಶಿರಸಿ...' ಎಂಬ ಶ್ರುತಿಯಲ್ಲಿ 'ದೇವಾ ಏತೇ ತದುಪಾಸೀರನ್' ಎಂಬ ವಾಕ್ಯವಿಲ್ಲ. ಹೀಗೆ ವಿಶೇಷ-ವಿಧಾನವಿಲ್ಲದೇ ಹೋದರೂ ಅಧಿಕಾರಿವಿಶೇಷರನ್ನು (ದೇವತೆಗಳನ್ನು) ಕಲ್ಪನೆ ಮಾಡುವುದಾರೆ, ಆಗ 'ಚೋದನಾದ್ಯವಿಶೇಷಾತ್' ಎಂಬ ಸರ್ವವೇದಾಂತಾ-ಧಿಕರಣದಲ್ಲಿ ಹೇಳಿದ ನ್ಯಾಯಕ್ಕೆ ವಿರೋಧ ಬರುತ್ತದೆ. (ಯಥಾಶಕ್ತಿ ಎಲ್ಲರೂ ಭಗವಂತನನ್ನು ತಿಳಿಯಬೇಕು ಎಂಬುದೇ ನ್ಯಾಯ). ಹಾಗಾಗಿ ಅಂಗದೇವ ತೋಪಾಸನೆಗೆ ಅಧಿಕಾರಿಗಳಿಲ್ಲವಾದ್ದರಿಂದ ಶ್ರುತಿಯಲ್ಲಿ ಅಂಗಾಶ್ರಿತತ್ವವನ್ನು ಹೇಳಿದ್ದು ವ್ಯರ್ಥವಾಗಿ ಅದು ಅಂಗದೇವತೋಪಾಸನೆಯನ್ನು ಮಾಡಬೇಕು ಎಂಬುದಕ್ಕೆ ಸಾಧಕವಾಗುವುದಿಲ್ಲ.

**ಸಿದ್ಧಾಂತ** :- ಅಂಗದೇವತೋಪಾಸನೆಯು ಕಾರ್ಯವೇ ಅಗಿದೆ. ಪ್ರಮಾಣವಿಲ್ಲ ಎಂದೇನಿಲ್ಲ. ಶ್ರುತಿಯಲ್ಲಿ ಅಂಗಾಶ್ರಿತತ್ವವನ್ನು ಹೇಳಿದ್ದರ ಅನ್ಯಥಾನುಪಪತ್ತಿಯೇ ಮೊದಲಾದ ಅನುಷ್ಠಾಪಕಗಳು ಇದ್ದಾವೆ. ಅಧಿಕಾರಿ-ಗಳಿಲ್ಲ ಎನ್ನುವುದೂ ಸರಿಯಲ್ಲ. ಏಕೆಂದರೆ, ಈ ಉಪಾಸನೆಗೆ ದೇವತೆಗಳೇ ಅಧಿಕಾರಿಗಳು. ಹೇಗೆಂದರೆ 'ಅಂಗೈಃ ಪರಾದ್ಯೇ ಹಿ ದೇವಾ ವಿಸೃಷ್ಟಾಃ' ಎಂಬ ಶ್ರುತಿಯಲ್ಲಿ ಬ್ರಹ್ಮಾಶ್ರಿತಶಿರಸ್ಕತ್ವ, ರುದ್ರಾಶಿತಲಲಾಟತ್ವ, ಸೂರ್ಯಾಶ್ರಿತ-ಚಕ್ಷುಷ್ಟ್ವ ಮೊದಲಾದ ಗುಣಗಳ ಉಪಾಸನೆಯಿಂದ ಪರಮಸ್ಥಾನ ಪ್ರಾಪ್ತ-ವಾಗುತ್ತದೆ ಎಂದು ಹೇಳಿದೆ. ಈ ಪರಮಸ್ಥಾನವು ದೇವತೆಗಳಿಂದಲೇ ಪ್ರಾಪ್ಯ-ವಾಗಿದೆ. ಹಾಗಾಗಿ ಫಲಪರ್ಯಾಲೋಚನೆಯಿಂದ ಉಪಾಸನೆಗೆ ದೇವತೆಗಳೇ ಅಧಿಕಾರಿಗಳೆಂದು ತಿಳಿಯುತ್ತದೆ. ಹೇಗೆ ಮಧುವಿದ್ಯೆಗೆ ಅದರಿಂದ ಬರುವ ವಸ್ವಾದಿಪದಪ್ರಾಪ್ತಿ ಎಂಬ ಫಲ ಪರ್ಯಾಲೋಚನೆಯಿಂದ ದೇವತೆಗಳೇ ಅಧಿಕಾರಿಗಳೆಂದು ತಿಳಿಯುತ್ತೇವೋ ಹಾಗೇ ಇಲ್ಲಿಯೂ ಕೂಡ.

**ಅಧಿಕರಣ ಫಲ** :- ಅಂಗದೇವತೊಪಾಸನೆಯನ್ನು ಸಮರ್ಥನೆ ಮಾಡಿದ್ದ ರಿಂದ ಅಂಗಾಶ್ರಿತತ್ವೇನ ದೇವತೆಗಳನ್ನು ಹೇಳಿದ್ದು ಸಾರ್ಥಕ ಎಂದಾಗುತ್ತದೆ. ಇದೇ ಈ ಅಧಿಕರಣದ ಪ್ರಯೋಜನ.

## ।। ಓಂ ನ ವಾ ಅತತ್ಸಹಭಾವಶ್ರುತೇಃ ಓಂ ।। ೩-೩-೪೨

ಹಿಂದೆ ಹೇಳಿದ ಅಂಗದೇವತೋಪಾಸನೆಯನ್ನೇ ಇಲ್ಲಿ ವಿಶೇಷ ಹೇತು-ವಿನಿಂದ ಆಕ್ಷೇಪಿಸಿ ಸಮರ್ಥನೆ ಮಾಡುತ್ತಿರುವುದರಿಂದ ಸಂಗತಿಯಿದೆ. ಬ್ರಹ್ಮಾಶ್ರಿತಶಿರಸ್ಕತ್ವವೇ ಮೊದಲಾದ ಭಗವದ್ಗುಣಗಳ ಉಪಾಸನೆಯನ್ನು ಮಾಡಬಾರದೋ ಅಥವಾ ಮಾಡಬೇಕೋ? ಎಲ್ಲಾ ಶಾಖೆಗಳಲ್ಲೂ ಈ ಉಪಾಸನೆಯನ್ನು ಹೇಳದೇ ಇರುವುದನ್ನು ಅಕಾರ್ಯ ಎಂದು ಒಪ್ಪದೇ ಕೂಡಿಸಲು ಬರುವುದಿಲ್ಲವೋ ಅಥವಾ ಈ ಅನುಕ್ತಿಯನ್ನು ಬೇರೆ ರೀತಿಯಿಂದಲೂ ಕೂಡಿಸಬಹುದೋ? ಅನುಕ್ತಿಯನ್ನು ಬೇರೆ ರೀತಿಯಿಂದ ಕೂಡಿಸಬಹುದಾದರೆ ಅದಕ್ಕೆ ಕಲ್ಪಕ ಇಲ್ಲವೋ ಅಥವಾ ಇದೆಯೋ? ಹೀಗೆ ಪರ ಸ್ಪರ ಸಂಗತವಾದ ವಿಚಾರಗಳು ಬಂದಿವೆ.

ಈ ರೀತಿಯ ಉಪಾಸನೆಯನ್ನು ಮಾಡಲೇಬಾರದು ಎಂದು ಪೂರ್ವಪಕ್ಷ. ಏಕೆಂದರೆ, ಈ ರೀತಿಯ ಉಪಾಸನೆಯನ್ನು ಎಲ್ಲಾ ಶಾಖೆಗಳಲ್ಲೂ ಹೇಳಿಲ್ಲ. ಈ ಉಪಾಸನೆಯು ಅವಶ್ಯಕರ್ತವ್ಯ ಎಂದಾಗಿದ್ದರೆ ಆಗ ಸರ್ವಶಾಖೆಗಳಲ್ಲೂ ಹೇಳಿರುವ ಉಪಾಸನೆಯ ಜೊತೆಗೆ ಇದನ್ನೂ ಹೇಳುತ್ತಿದ್ದರು.

ಸರ್ವಶಾಖೆಗಳಲ್ಲೂ ಈ ರೀತಿಯ ಉಪಾಸನೆಯನ್ನು ಹೇಳದೇ ಇರುವುದನ್ನು ಅಕಾರ್ಯತ್ವವನ್ನು ಒಪ್ಪದೇ ಬೇರೆ ರೀತಿಯಿಂದ ಕೂಡಿಸಲು ಬರುವುದಿಲ್ಲ. ಈ ಅನ್ಯಥಾನುಪಪತ್ತಿಯೇ ಅಕಾರ್ಯತ್ವಕ್ಕೆ ಗಮಕವಾಗಿದೆ.

**ಸಿದ್ಧಾಂತ** :- ಬ್ರಹ್ಮಾಶ್ರಿತಶಿರಸ್ಕತ್ವವೇ ಮೊದಲಾದ ಭಗವದ್ಗುಣಗಳನ್ನು ಸರ್ವಥಾ ಉಪಾಸನೆ ಮಾಡಬಾರದು ಎಂದಾಗಿದ್ದರೆ ಈ ಉಪಾಸನೆಯನ್ನು ಕೆಲವು ಕಡೆಯಾದರೂ ಹೇಳದ್ದು ವ್ಯರ್ಥವಾಗುತ್ತದೆ. 'ಸತ್ಯೋ ಜ್ಞಾನಃ ಪರಮಾನಂದರೂಪಃ' ಇತ್ಯಾದಿ ಶ್ರುತಿಗಳಲ್ಲಿ ಜ್ಞಾನಾನಂದಾದಿ ನಾಲ್ಕು ಗುಣಗಳಿಗಿಂತ ಅಧಿಕಗುಣಗಳನ್ನು ದೇವತೆಗಳು ಉಪಾಸನೆ ಮಾಡಬೇಕು

ಎಂದು ಹೇಳಿದ್ದರಿಂದ ಬ್ರಹ್ಮಾಶ್ರಿತಶಿರಸ್ಕತ್ವವೇ ಮೊದಲಾದ ಉಪಾಸನೆಯನ್ನೂ ದೇವತೆಗಳೇ ಮಾಡಬೇಕಾದ್ದರಿಂದ ಎಲ್ಲಾ ಶಾಖೆಗಳಲ್ಲೂ ಹೇಳಿಲ್ಲ. ಹೀಗೆ ಸರ್ವತ್ರ ಅನುಕ್ತಿಯನ್ನು ಸರ್ವೈಃ ಅಕಾರ್ಯ ಎಂಬುದಾಗಿಯೂ ಕೂಡಿಸಬಹುದು. (ಎಲ್ಲರೂ ಮಾಡಬಾರದು ಎಂಬುದನ್ನು ಸೂಚನೆ ಮಾಡುವುದಕ್ಕಾಗಿಯೇ ಎಲ್ಲ ಕಡೆ ಹೇಳಿಲ್ಲ). ಹಾಗಾಗಿ ಈ ರೀತಿಯ ಉಪಾಸನೆಯನ್ನು ಅಧಿಕಾರಿಗಳು ಮಾಡಲೇಬೇಕು.

**ಅಧಿಕರಣ ಫಲ** :- ಹಿಂದಿನ ಅಧಿಕರಣದಲ್ಲಿ ಹೇಳಿದ ಅಂಗದೇವತೋಪಾಸನೆಯ ಸಮರ್ಥನೆಯನ್ನೇ ಇಲ್ಲಿ ಮಾಡಲಾಗಿದೆ. ಇದೇ ಈ ಅಧಿಕರಣದ ಪ್ರಯೋಜನ.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ಮೂರನೆಯ ಅಧ್ಯಾಯದ ಮೂರನೆಯ ಪಾದವು ಸಮಾಪ್ತವಾಯಿತು.**

# ಮೂರನೆಯ ಅಧ್ಯಾಯದ ನಾಲ್ಕನೆಯ ಪಾದ

## ॥ ಓಂ ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ಓಂ ॥ ೩-೪-೧

ಪೂರ್ವಪಾದದಲ್ಲಿ ಉಪಾಸನೆಯು ನಿರೂಪಿತವಾಯಿತು. ತಜ್ಜನ್ಯಜ್ಞಾನದ ಮಹಿಮೆಯನ್ನು ಇಲ್ಲಿ ಹೇಳುವುದರಿಂದ ಸಂಗತಿ ಇದೆ. ಇಲ್ಲಿ, ಜ್ಞಾನವು ಮೋಕ್ಷಕ್ಕೆ ಮಾತ್ರ ಕಾರಣವೋ? ಅಥವಾ ಮೋಕ್ಷೇತರವಾದ ಸ್ವರ್ಗಾದಿಗಳಿಗೂ ಸಾಧನವಾಗಿದೆಯೋ? ಇತರ ಪುರುಷಾರ್ಥಕ್ಕೂ ಸಾಧನ ಎಂಬುದಕ್ಕೆ ಪ್ರಮಾಣವಿಲ್ಲವೋ ಅಥವಾ ಇದೆಯೋ? ಎಂದು ವಿಚಾರ ಮಾಡಲ್ಪಟ್ಟಿದೆ.

**ಪೂರ್ವಪಕ್ಷ** :- ಜ್ಞಾನವು ಮೋಕ್ಷೇತರ ಪುರುಷಾರ್ಥಕ್ಕೆ ಕಾರಣಲ್ಲ. ಏಕೆಂದರೆ ಮುಮುಕ್ಷುಗಳಿಗೆ ಇತರ ಪುರುಷಾರ್ಥಗಳಲ್ಲಿ ಆಶೆಯೇ ಇರುವುದಿಲ್ಲ. ಸೌಭರಿ ಮೊದಲಾದವರಿಗೆ ಇದ್ದಂತೆ ಆಸೆ ಇದ್ದರೂ, ಆ ಇತರ ಪುರುಷಾರ್ಥಕ್ಕೆ ಜ್ಞಾನವು ಕಾರಣ ಎನ್ನುವುದಕ್ಕೆ ಪ್ರಮಾಣವಿಲ್ಲ. ಜ್ಞಾನವು

ಕಾರಣ ಎನ್ನುವ ಶ್ರುತ್ಯಾದಿಗಳಿಗೆ ಕರ್ಮಕಾರಣತ್ವ ಹೇಳುವ ಶ್ರುತ್ಯಾದಿಗಳಿಂದ ವಿರೋಧ ಬರುತ್ತದೆ. 'ಕರ್ಮೈವ ದೇಹಂ ದೈವಿಕಂ ಮಾನುಷಂ ವಾಪ್ಯನ್ವಾರಭೇನ್ನಾಪರಸ್ತತ್ರ ಹೇತುಃ' (ಕರ್ಮವೇ ಸ್ವರ್ಗಾದಿಗಳಿಗೆ ಕಾರಣ ಹೊರತು ಬೇರೆ ಇಲ್ಲ) ಎಂದು ಆ ಶ್ರುತಿಯು ಜ್ಞಾನಕ್ಕೆ ಸ್ವರ್ಗಾದಿ ಕಾರಣತ್ವವನ್ನು ಅಲ್ಲಗಳೆಯುತ್ತಿದೆ. ಮತ್ತು 'ಯದೇವ ವಿದ್ಯಯಾ' ಎಂಬ ಶ್ರುತಿಯ ಪ್ರಕಾರ ಜ್ಞಾನಿಯು ಮಾಡಿದ ಕರ್ಮಫಲದಲ್ಲಿ ಜ್ಞಾನವು ಅತಿಶಯವನ್ನುಂಟು ಮಾಡುವುದರಿಂದ ಸ್ವರ್ಗಹೇತುವಾದ ಕರ್ಮಕ್ಕೆ ಸಹಕಾರಿಯೇ ಹೊರತು ಕಾರಣವಲ್ಲ. ಈ ಶ್ರುತಿಯ ವಿರೋಧ ಬರುವುದರಿಂದಲೇ ಜ್ಞಾನ ಮತ್ತು ಕರ್ಮಗಳು ಸ್ವರ್ಗಾದಿಗಳಿಗೆ ಸಮಾನವಾಗಿ ಕಾರಣ ಎನ್ನುವುದೂ ಸರಿಯಲ್ಲ. ಮತ್ತು ಒಂದು ವೇಳೆ ಜ್ಞಾನವೇ ಸರ್ವಪುರುಷಾರ್ಥಗಳಿಗೂ ಕಾರಣವಾಗುವುದಾದರೆ ಜ್ಞಾನಿಗಳಾದ ದೇವತೆಗಳು 'ಯಜ್ಞೇನ ಯಜ್ಞಂ' ಎಂಬಲ್ಲಿ ಹೇಳಿದಂತೆ ಕರ್ಮಗಳನ್ನು ಏಕೆ ಮಾಡುತ್ತಾರೆ? ಇದರಿಂದ ಇತರ ಪುರುಷಾರ್ಥಗಳಿಗೆ ಕರ್ಮವೇ ಕಾರಣವೆಂದು ಸಿದ್ಧಿಸುತ್ತದೆ. ಜೈಮಿನಿ ಆಚಾರ್ಯರು ಹೀಗೆಯೇ ಅಂಗೀರಿಸಿದ್ದಾರೆ. ಮುಕ್ತರು ಲೀಲೆಯಿಂದ (ಸುಮ್ಮನೇ) ಕರ್ಮಗಳನ್ನಾಚರಿಸುತ್ತಾರೆ ಹೊರತು ಯಾವ ಪುರುಷಾರ್ಥಕ್ಕೂ ಅಲ್ಲ ಎಂದು ಶಂಕೆ ಮಾಡುವುದು ಸರಿಯಲ್ಲ. 'ಜ್ಞಾನೀ ಚ ಕರ್ಮಾಣಿ ಸದೋದಿತಾನಿ ಕುರ್ಯಾತ್' ಎಂಬ ಶ್ರುತಿಯಲ್ಲಿ ಜ್ಞಾನಿಗಳಿಗೂ ಕರ್ಮವು ವಿಹಿತವಾಗಿದೆ. ವಿಹಿತವಾದದ್ದು ಲೀಲೆಯಾಗಲು ಶಕ್ಯವಿಲ್ಲ. ಮತ್ತು 'ಕುರ್ವನ್ನೇವ' ಎಂಬ ಈಶಾವಾಸ್ಯ ಮಂತ್ರದಲ್ಲಿ ಕರ್ಮ ಮಾಡಿದರೆ ಪಾಪಲೇಪವಿಲ್ಲ. ಕರ್ಮ ಮಾಡದಿದ್ದರೆ ಜ್ಞಾನಿಯಾದವನಿಗೂ ಪಾಪಲೇಪ ಆಗೇ ಆಗುತ್ತದೆ ಎಂದು ಹೇಳಿದ್ದರೂ ಜ್ಞಾನಿಗಳ ಕರ್ಮವು ಲೀಲಾರೂಪವಾಗಲು ಶಕ್ಯವಿಲ್ಲ.

ಹೀಗೆ ಶ್ರುತಿ-ಜ್ಞಾನಿಗಳ ಆಚಾರ ಹಾಗೂ ಜೈಮಿನಿ ಮತ ವಿರುದ್ಧವಾದ ಪ್ರಯುಕ್ತ ಜ್ಞಾನವು ಸರ್ವಪುರುಷಾರ್ಥಸಾಧನ ಎಂಬ ಮಾತನ್ನು ಹಣವು ಕರ್ಮಕ್ಕೆ ಸಹಕಾರಿಯಾದರು ಹಣದಿಂದ ಸ್ವರ್ಗ ಎಂದು ಸಹಕಾರಿಗೆ ಪ್ರಾಧಾನ್ಯವನ್ನು ಕೊಟ್ಟು ಹೇಳುವಂತೆ ಕೂಡಿಸಬೇಕು.

ಜ್ಞಾನದಿಂದಲೇ ಸರ್ವ ಪುರುಷಾರ್ಥಗಳೂ ಸಿಗುತ್ತವೆ. ಕರ್ಮ ಸಹಕಾರಿ ಎಂದು ಕರ್ಮವಾಕ್ಯವನ್ನು ಕೂಡಿಸಬಹುದಲ್ಲಾ ಎಂದರೆ ಇದು ಸರಿಯಲ್ಲ. ಇದಕ್ಕೆ ನಿರವಕಾಶ ಪ್ರಮಾಣವಿಲ್ಲ ಮತ್ತು ಜ್ಞಾನಿಗಳು ಕರ್ಮಮಾಡಿದರೂ ಸರಿ ಮಾಡದಿದ್ದರೂ ಸರಿ ಮೋಕ್ಷವಂತೂ ಸಿಕ್ಕೇ ಸಿಗುತ್ತದೆ ಎಂದು ಸ್ತುತ್ಯಧಿ-ಕರಣದಲ್ಲಿ ಹೇಳುವುದರಿಂದ ಕರ್ಮದಿಂದ ಜ್ಞಾನಕ್ಕೆ ಏನೂ ಅತಿಶಯ-ಲಾಭವಿಲ್ಲವಾದ್ದರಿಂದ ಕರ್ಮವು ಸಹಕಾರಿಯಾಗಲಾರದು.

**ಸಿದ್ಧಾಂತ** :- ಕರ್ಮದಿಂದ ಜ್ಞಾನದಲ್ಲಿ ಏನೂ ಅತಿಶಯೋತ್ಪತ್ತಿ ಆಗ-ದಿದ್ದರೂ ಕರ್ಮಜನ್ಯ ಸ್ವರ್ಗಾದಿಫಲದಲ್ಲಿ ಅತಿಶಯ ಉಂಟಾಗುತ್ತದೆ ಎಂದು 'ಜ್ಞಾನಾದೇವ ಸ್ವರ್ಗಃ ಜ್ಞಾನಾದೇವ ಅಪವರ್ಗಃ... ಅಥಾಪಿ ಯಥಾ ಯಾಥಾ ಕರ್ಮ ಕುರುತೇ ತಥಾ ತಥಾ ಅಧಿಕೋ ಭವತಿ' ಎಂದು ಶ್ರುತಿ ಇರುವುದರಿಂದ ಕರ್ಮವೇ ಜ್ಞಾನಕ್ಕೆ ಸಹಕಾರಿಯಾಗಿದೆ ಮತ್ತು 'ರಾಜ-ಸೂಯಾರ್ಜಿತಾನ್ ಲೋಕಾನ್' ಎಂಬ ಭಾರತದ ವಚನದಂತೆ ಜ್ಞಾನಿ-ಗಳಾದ ಯುಧಿಷ್ಠಿರಾದಿಗಳು ರಾಜಸೂಯಾದಿಕರ್ಮದಿಂದ ಫಲಾಧಿಕ್ಯ-ವನ್ನು ಪಡೆದಿದ್ದಾರೆ ಎಂಬ ಲಿಂಗವೂ ಇರುವುದರಿಂದ ಜ್ಞಾನದಿಂದಲೇ ಸರ್ವಪುರುಷಾರ್ಥಗಳು ದೊರೆಯುತ್ತವೆ. ಕರ್ಮವು ಸಹಕಾರಿ ಇದು ಬಾದರಾಯಣಮತವಾದ್ದರಿಂದ ಕರ್ಮವಾಕ್ಯಗಳನ್ನೆಲ್ಲಾ ಮೋಕ್ಷಹೇತುವಾದ ಜ್ಞಾನಕ್ಕೆ ಕರ್ಮವು ಸಹಕಾರಿ ಎಂದು ಅರ್ಥೈಸಬೇಕು. ಹೀಗೆ 'ಯಂ ಯಂ ಲೋಕಂ' ಎಂಬ ವಾಕ್ಯಬಲದಿಂದ ಮತ್ತು ಬಾದರಾಯಣಸಮ್ಮತಿಯಿಂದ ಜ್ಞಾನವೇ ಸರ್ವಪುರುಷಾರ್ಥಹೇತು. ಹಾಗಾದರೆ ಜೈಮಿನಿ ಮತ್ತು ಬಾದರಾಯಣರ ಮತಗಳಿಗೆ ವಿರೋಧ ಬರುತ್ತದೆ ಎಂದು ಶಂಕಿಸಬಾರದು. ಜೈಮಿನಿಯ ಮತ ಮನುಷ್ಯರಿಗೆ ಸಂಬಂಧಿಸಿದ್ದು, ಬಾದರಾಯಣ ಮತ ದೇವತೆಗಳಿಗೆ ಸಂಬಂಧಪಟ್ಟಿದ್ದು. ಜ್ಞಾನದಲ್ಲಿ ಅತಿಶಯವಾಗಿ ಪ್ರವೃತ್ತಿ ಮಾಡಬೇಕು ಎಂದು ಸಮರ್ಥಿಸುವುದೇ ಈ ಅಧಿಕರಣದ ಫಲ.

## ।। ಓಂ ಅಸಾರ್ವತ್ರಿಕೀ ಓಂ ।। ೩-೪-೨

ಪೂರ್ವಾಧಿಕರಣದಲ್ಲಿ ಜ್ಞಾನದಿಂದ ಸಕಲಪುರುಷಾರ್ಥವನ್ನು ಪಡೆಯಲು ಎಲ್ಲಾ ಜ್ಞಾನಿಗಳಿಗೂ ಅಧಿಕಾರವಿಲ್ಲ. ಕಿಂತು ಉತ್ತಮ ಜ್ಞಾನಿಗಳಿಗೆ ಮಾತ್ರ.

ಅದರಲ್ಲಿಯೂ ಪ್ರತಿಬಂಧಕವಿಲ್ಲದವರಿಗೆ ಮಾತ್ರ ಎಂದು ನಿರ್ಣಯಿಸ-ಲಾಯಿತು. ಇಲ್ಲಿ ಜ್ಞಾನವನ್ನು ಪಡೆಯಲು ಎಲ್ಲರಿಗೆ ಅಧಿಕಾರ ಇಲ್ಲ ಎಂದು ಹೇಳುವುದರಿಂದ ಸಂಗತಿ. ಸರ್ವಪುರುಷಾರ್ಥಹೇತು ಎಂದು ಪೂರ್ವ-ಪ್ರಕೃತವಾದ ಜ್ಞಾನದಲ್ಲಿ ಎಲ್ಲರಿಗೂ ಅಧಿಕಾರ ಇದೆಯೋ, ಇಲ್ಲವೋ? ಕೆಲವರಿಗೆ ಮಾತ್ರ ಅಧಿಕಾರ ಎಂಬುದಾಗಿ ಪುರುಷವಿಭಾಗವನ್ನು ಒಪ್ಪಬಹುದೋ, ಕೂಡದೋ? ಜ್ಞಾನಬೇಕೆಂಬ ಇಚ್ಛೆಯೇ ಜ್ಞಾನಾಧಿಕಾರಕ್ಕೆ ಪ್ರಯೋಜಕವೋ ಅಥವಾ ಬೇರೊಂದಿದೆಯೋ? ಅಧಿಕಾರ ಪ್ರಯೋಜಕ-ವಾದ ಇಚ್ಛೆಯು ಎಲ್ಲರಿಗೂ ಇರುವುದಿಲ್ಲವೋ ಅಥವಾ ಇರುತ್ತದೋ? ಎಂಬ ವಿಚಾರಗಳು ಇಲ್ಲ ಚರ್ಚಿಸಲ್ಪಟ್ಟಿವೆ.

**ಪೂರ್ವಪಕ್ಷ** :- 'ಅರ್ಥೀ ಸಮರ್ಥೋ ವಿದ್ವಾನ್ ಅಧಿಕ್ರಿಯತೇ' ಎಂಬ ನ್ಯಾಯದ ಪ್ರಕಾರ ಅಧಿಕಾರಕ್ಕೆ ಪ್ರಯೋಜಕವಾದದ್ದು ಫಲಾಪೇಕ್ಷೆ, ಸಾಮರ್ಥ್ಯ ಮತ್ತು ವೈದುಷ್ಯ. ಮೋಕ್ಷವು ನಿರ್ದುಃಖ ಸುಖರೂಪವಾದ್ದರಿಂದ ಎಲ್ಲರಿಗೂ ಅದರ ಅಪೇಕ್ಷೆ ಇರುತ್ತದೆ. ಹಾಗೆಯೇ ಶ್ರವಣಾದಿ ಸಾಮರ್ಥ್ಯ ಮತ್ತು ಅದಕ್ಕೆ ಬೇಕಾದಷ್ಟು ವೈದುಷ್ಯವೂ ಕೂಡ ಸಂಭಾವಿತವೇ. ಹೀಗಿರುವಾಗ ಕೆಲವರಿಗೆ ಮಾತ್ರ ಜ್ಞಾನಾಧಿಕಾರ ಎಲ್ಲರಿಗೂ ಇಲ್ಲ ಎಂದು ಪುರುಷವಿಭಾಗಕ್ಕೆ ಕಾರಣ-ವಿಲ್ಲವಾದ್ದರಿಂದ ಅದು ಅನುಚಿತ. ಮತ್ತು ಕೆಲವರಿಗಿಲ್ಲವೆಂದಾಗ ಬೇರೆ-ಯವರಿಗೂ ಅಧಿಕಾರ ಬೇಡ ಎಂಬ ಪ್ರಸಂಗ ಬಂದು ಜ್ಞಾನಕ್ಕೆ ಅಧಿಕಾರಿಗಳೇ ಇಲ್ಲವೆಂದಾಗುವುದರಿಂದ ಎಲ್ಲರಿಗೂ ಅಧಿಕಾರವಿದೆ.

**ಸಿದ್ಧಾಂತ** :- ಜ್ಞಾನಾಧಿಕಾರಕ್ಕೆ ಯಥಾಶಕ್ತಿ ಷಡಂಗಸಹಿತ ಸಮಸ್ತ ವೇದಾಧ್ಯನವೂ ಪ್ರಯೋಜಕ ಎಂದು 'ಪಠೇದ್ವೇದಾನ್' ಎಂಬ ಶ್ರುತಿಯಿಂದ ಸಿದ್ಧವಾಗಿದೆ. ಕೇವಲ ಫಲಾಪೇಕ್ಷಾದಿಗಳು ಮಾತ್ರ ಪ್ರಯೋಜಕವಲ್ಲ. ಆದ್ದರಿಂದ ಒಂಭತ್ತು ಕೋಟಿ ದೇವತೆಗಳಿದ್ದರೂ ಪರಾಪರಬ್ರಹ್ಮರ ಜೊತೆಗೆ ನೂರು ದೇವತೆಗಳಿಗೆ ಮಾತ್ರ ಸೋಮರಸಪಾನ ಎಂದು ಪುರುಷವಿಭಾಗವಿರುವಂತೆ ಜ್ಞಾನಾಧಿಕಾರದ ವಿಷಯದಲ್ಲಿ ಪುರುಷವಿಭಾಗ ಮಾಡುವುದು ಅಯುಕ್ತವಲ್ಲ. ಮತ್ತು ಅವೈಷ್ಣವಸ್ಯ ವೇದೇಪಿ ಹ್ಯಧಿಕಾರೋ ನ ವಿದ್ಯತೇ ಎಂಬ ಪ್ರಮಾಣ-ದಿಂದಲೂ ಪುರುಷವಿಭಾಗವು ಯುಕ್ತವಾಗುತ್ತದೆ.

ಕರ್ಮಕ್ಕಿಂತ ಜ್ಞಾನದಲ್ಲಿ ಅತಿಶಯ ಸಮರ್ಥನೆಯೇ ಈ ಅಧಿಕರಣದ ಫಲ.

## ॥ ಓಂ ನಾವಿಶೇಷಾತ್ ಓಂ ॥ ೩-೪-೩

ಪೂರ್ವಾಧಿಕರಣದಲ್ಲಿ ಕೆಲವರಿಗೆ ಮಾತ್ರ ಜ್ಞಾನಾಧಿಕಾರ ಎಂದು ಹೇಳಲಾಯಿತು. ಇಲ್ಲಿ ಕೆಲವರಲ್ಲಿಯೂ ಕೂಡ ಸಂಪೂರ್ಣ ಅಧಿಕಾರ ಎಲ್ಲರಿಗೂ ಇಲ್ಲ ಎಂದು ಸಮರ್ಥಿಸುವುದರಿಂದ ಸಂಗತಿ ಇದೆ.

ಪ್ರಕೃತವಾದ ಜ್ಞಾನಾಧಿಕಾರವು ಎಲ್ಲರಿಗೂ ಒಂದೇ ವಿಧವಾಗಿರುತ್ತದೋ ಅಥವಾ ನಾನಾಪ್ರಕಾರವಾಗಿರುತ್ತದೋ? 'ಪ್ರಜ್ಞಾಂತರ ಪೃಥಕ್ತ್ವವದ್ ದೃಷ್ಟಿಶ್ಚ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ದರ್ಶನತಾರತಮ್ಯವು ಅಧಿಕಾರ (ಭಕ್ತ್ಯಾದಿ) ತಾರತಮ್ಯದಿಂದಲ್ಲದೇ ಅಧಿಕಾರಿಗಳ ಶಕ್ತಿ ತಾರತಮ್ಯದಿಂದಲೂ ಕೂಡುತ್ತದೋ ಇಲ್ಲವೋ ಎಂದು ಇಲ್ಲಿ ವಿಚಾರ ಮಾಡಲ್ಪಟ್ಟಿದೆ.

**ಪೂರ್ವಪಕ್ಷ** :- ಅಧಿಕಾರಿಗಳ ಶಕ್ತಿ ತಾರತಮ್ಯದಿಂದಲೇ ದರ್ಶನ ತಾರತಮ್ಯವನ್ನು ಕೂಡಿಸಲು ಬರುವಾಗ ಪ್ರಮಾಣವಿಲ್ಲದಿರುವುದರಿಂದ ಅಧಿಕಾರತಾರತಮ್ಯವನ್ನು ಅಂಗೀಕರಿಸುವುದು ಸರಿಯಲ್ಲ.

**ಸಿದ್ಧಾಂತ** :- ಅಧಿಕಾರಿಗಳ ಶಕ್ತಿ ತಾರತಮ್ಯವು ಅಧಿಕಾರ ತಾರತಮ್ಯ ನಿಮಿತ್ತಕವೇ ಆದ್ದರಿಂದ ಅಧಿಕಾರತಾರತಮ್ಯವೇ ಪ್ರಧಾನವಾಯಿತು. ಹೀಗಾಗಿ ಅದರಿಂದಲೇನೇ ದರ್ಶನ ತಾರತಮ್ಯವನ್ನು ನಿರ್ವಾಹ ಮಾಡಬಹುದಾದ್ದರಿಂದ ಮತ್ತು 'ಅಥ ಪುಮರ್ಥಸಾಧನಾನಿ' ಎಂಬ ಭಾಷ್ಯೋಕ್ತ ಶ್ರುತಿಯ-ಪ್ರಕಾರ ಅಧಿಕಾರವು ನಾನಾಪ್ರಕಾರ ಉಳ್ಳದ್ದಾದ್ದರಿಂದ ದೇವತೆಗಳಿಗೆ ಮಾತ್ರ ಸಂಪೂರ್ಣ ಅಧಿಕಾರ ಹೊರತು ಎಲ್ಲರಿಗೂ ಇಲ್ಲ. ಜ್ಞಾನಾತಿಶಯ ಸಮರ್ಥನೆಯೇ ಇದರ ಫಲ.

## ॥ ಓಂ ಸ್ತುತಯೇ ಅನುಮತಿರ್ವಾ ಓಂ ॥ ೩-೪-೪

ಪೂರ್ವಾಧಿಕರಣದಲ್ಲಿ ಅಧಿಕಾರಿ ವೈವಿಧ್ಯವು ಸಿದ್ಧವಾದ್ದರಿಂದ ಇಲ್ಲಿ ವಿರುದ್ಧಾರ್ಥಕವಾದ ತ್ರಿವಿಧವಾಕ್ಯಗಳಿಗೆ ಅಧಿಕಾರಿ ವಿವಕ್ಷಯಾ ವಿರೋಧವನ್ನು ಪರಿಹಾರ ಮಾಡುವುದರಿಂದ ಸಂಗತಿ. ಇಲ್ಲಿ, ಜ್ಞಾನಿಯಾದವನಿಗೆ ಸದಾಚಾರ-ದುರಾಚಾರಗಳಿಂದ ಶುಭ-ಅಶುಭರೂಪ ವಿಶೇಷವು ಇಲ್ಲವೋ,

ಇದೆಯೋ? 'ಸ ಬ್ರಾಹ್ಮಣಃ ಯೇನ ಸ್ಯಾತ್ ಕೇನ ಸ್ಯಾತ್ ತೇನ ಈದೃಶ ಏವ ಸ್ಯಾತ್' ಎಂಬ ವಾಕ್ಯವು ಜ್ಞಾನಿಗಳೆಲ್ಲರಿಗೂ ಯಥೇಷ್ಟ ಆಚಾರವನ್ನು ವಿಧಿಸುತ್ತದೋ ಅಥವಾ ಎಲ್ಲರೂ ಸದಾಚಾರವನ್ನೇ ಮಾಡಬೇಕು. ಅದನ್ನು ವಿಧಿ ಚಕಿತರಾಗದೇ ಸ್ವೇಚ್ಛೆಯಿಂದ ಮಾಡಬೇಕೆಂದು ಪ್ರತಿಪಾದಿಸುತ್ತದೋ, ಹಾಗೆಯೇ ಜ್ಞಾನಿಯಾದವನಿಗೆ ಸದಾಚಾರದಿಂದ ಫಲವಿದೆಯೆನ್ನುವುದಾದರೆ ಮೋಕ್ಷಕ್ಕಿಂತ ಬೇರೆ ಫಲ ಇಲ್ಲದಿರುವುದರಿಂದ ಮೋಕ್ಷವೇ ಎಂದು ಹೇಳಿದರೆ ಜ್ಞಾನದಿಂದ ಮೋಕ್ಷ ನಿಯತ ಎಂಬ ವಾದಕ್ಕೆ ಭಂಗರೂಪವಾದ ಬಾಧಕ ಮತ್ತು ಜ್ಞಾನ ಹಾಗೂ ಕರ್ಮಗಳ ಸಮುಚ್ಚಯದಿಂದ ಮೋಕ್ಷ ಎಂಬ ವಾದಾಂಗೀಕಾರ ಮಾಡಿದಂತಾಗುವುದು ಎಂಬ ಬಾಧಕವು ಇದೆಯೋ ಇಲ್ಲವೋ? ಜ್ಞಾನಿಗಳ ದುರಾಚಾರವು ಮೋಕ್ಷಕ್ಕೆ ಪ್ರತಿಬಂಧಕವೋ ಅಥವಾ ಮೋಕ್ಷದಲ್ಲಿ ಸುಖಾಧಿಕ್ಯಕ್ಕೆ ಪ್ರತಿಬಂಧಕವೋ? ಜ್ಞಾನಿಗಳ ದುರಾಚಾರವು ಮೋಕ್ಷದಲ್ಲಿ ಸುಖಾಧಿಕ್ಯಕ್ಕೆ ಪ್ರತಿಬಂಧಕವಾಗುವುದಾದರೆ 'ಯದಿ ಹ ವಾ ಅಪ್ಯೇವಂ ವಿತ್ ನಿಖಿಲಂ ಭಕ್ಷಯೀತ ಏವಮೇವ ಸ ಭವತಿ' ಎಂಬ ಶ್ರುತಿಯಲ್ಲಿ ಜ್ಞಾನಿಯು ಸರ್ವಾನ್ನ ಭಕ್ಷಣೆ ಮಾಡಿದರೂ ಅವನಿಗೆ ಏನೂ ಹಾನಿಯಿಲ್ಲ ಎಂದು ಹೇಳಿದ್ದು ಅಯುಕ್ತವೋ ಯುಕ್ತವೋ? ಎಂಬ ವಿಷಯಗಳು ಚರ್ಚಿಸಲ್ಪಟ್ಟಿವೆ.

**ಪೂರ್ವಪಕ್ಷ** :- ಜ್ಞಾನಿಗಳಿಗೆ ಸದಾಚಾರ-ದುರಾಚಾರಗಳಿಂದ ಯಾವ ಫಲವ್ಯತ್ಯಾಸವೂ ಇಲ್ಲ 'ಸ ಬ್ರಾಹ್ಮಣಃ' ಎಂಬ ಶ್ರುತಿಯಲ್ಲಿ 'ಸ್ಯಾತ್' (ವಿಧಿಬೋಧಕ ಲಕಾರ) ಎಂಬ ಪದದಿಂದ ಯಥೇಷ್ಟಾಚಾರವನ್ನು ವಿಧಿಸಿದ್ದಾರೆ. ಜ್ಞಾನಿಗಳಿಗೂ ಸದಾಚಾರ - ದುರಾಚಾರಗಳಿಂದ ಶುಭಾಶುಭ ಫಲವಿರುವುದಾದರೆ ವೇದದಲ್ಲಿ 'ಸದಾಚಾರವನ್ನೇ ಮಾಡಬೇಕು ದುರಾಚಾರ ಬಿಡಬೇಕು' ಎಂದು ಹೇಳಬೇಕಾಗಿತ್ತು. ಹಾಗೆ ಹೇಳಿಲ್ಲವಾದ್ದರಿಂದ ಸದಾಚಾರ-ದುರಾಚಾರಗಳಿಂದ ಏನೂ ವ್ಯತ್ಯಾಸವಿಲ್ಲ ಎಂದು ತಿಳಿಯುತ್ತದೆ. ಮತ್ತು ಯಥೇಷ್ಟಾಚಾರವಿಧಿಯೂ ಇಲ್ಲವೆಂದಾದರೆ ಜ್ಞಾನಿಗಳೂ ಕೂಡ ವಿಧಿ ರಹಿತರು ಎಂದಾಗಿ ವಿಧ್ಯತಿದೂರತ್ವ ಎಂಬ ಈಶ ಲಕ್ಷಣವು ಜ್ಞಾನಿಗಳಲ್ಲಿ ಅತಿ ವ್ಯಾಪ್ತವಾಗುತ್ತದೆ. ಈ ವಾಕ್ಯವು ಎಲ್ಲಾ ಜ್ಞಾನಿಗಳಿಗೆ ಸಂಬಂಧಿಸಿದ್ದಲ್ಲ. ಕಿಂತು ಕೆಲವು ವಿಶಿಷ್ಟ ಜ್ಞಾನಿಗಳಿಗೆ ಮಾತ್ರ ಎಂದು ಹೇಳುವುದು ಸರಿಯಲ್ಲ. ಏಕೆಂದರೆ

ಇದು ಸಾಮಾನ್ಯ ವಾಕ್ಯ. ಯಾವ ಆಧಾರವೂ ಇಲ್ಲದೆ ಜ್ಞಾನಿವಿಶೇಷಪರ ಎಂದು ಕಲ್ಪಿಸುವುದು ಸರಿಯಲ್ಲ.

ಹೀಗೆ ಯಥೇಷ್ಟಾಚಾರವನ್ನು ನಿರ್ವಾಹ ಮಾಡಲು ಸದಾಚಾರ - ದುರಾಚಾರಗಳಿಂದ ಏನೂ ವಿಶೇಷವಿಲ್ಲವೆಂದು ಕಲ್ಪಿಸಬೇಕು ಮತ್ತು ತೇನ ಈದೃಶ ಏವ ಎಂದು ಶ್ರುತಿಸಿದ್ಧವೂ ಆಗಿದೆ.

**ಪ್ರಶ್ನೆ :-** ಸ ಬ್ರಾಹ್ಮಣಃ ಎಂಬ ವಾಕ್ಯವು ಎಲ್ಲಾ ಜ್ಞಾನಿಗಳಿಗೆ ಯಥೇಷ್ಟಾ-ಚಾರವಿಧಿಪರ ಎನ್ನುವುದು ಸರಿಯಲ್ಲ. ಪ್ರಾತರುತ್ಥಾಯ ಸಂಧ್ಯಾಮುಪಾಸೀತ ಎಂಬ ಶ್ರುತಿಯ ಪ್ರಕಾರ ಸರ್ವ ಸದಾಚಾರಾನುಷ್ಠಾನ ಪರವೇ ಆಗಿದೆ. ನಿಷಿದ್ಧವನ್ನು ಮಾಡಿರಿ ಎಂಬ ವಿಧಿ ಎಲ್ಲೂ ಇಲ್ಲ. ಪ್ರತ್ಯುತ ಬ್ರಾಹ್ಮಣನನ್ನು ಕೊಲ್ಲಬೇಡಿ ಎಂಬುದಾಗಿ ನಿಷೇಧವೇ ಇದೆ. ಈ ಯುಕ್ತಿಯಿಂದ 'ಸದಾಚಾರ ವನ್ನು ವಿಧಿ ಬಂಧ ಚಕಿತರಾಗಿ ಮಾಡದೇ ಇಚ್ಛಾಪೂರ್ವಕವಾಗಿ ಮಾಡಿರಿ' ಎಂಬುದಾಗಿ ಅರ್ಥೈಸಬೇಕೆಂದು ಜೈಮಿನಿಮತ. ಹಾಗೆಯೇ ಸ ಬ್ರಾಹ್ಮಣಃ ಎಂಬ ವಾಕ್ಯಕ್ಕೆ ಆಚಾರಗಳ ಮಧ್ಯದಲ್ಲಿ ಕೆಲವು ಕರ್ಮಗಳ ಆಚರಣೆ ಕೆಲವು ಕರ್ಮಗಳ ಅನಾಚರಣೆ ಎಂಬ ಕಾಮಾಚಾರ ಪರತ್ವವನ್ನೇ ಹೇಳಬೇಕು. ಇದಕ್ಕೆ ಅನಾಚಾರದಿಂದ ಪ್ರಸಕ್ತವಾದ ಮೋಕ್ಷಾಭಾವವನ್ನು ನಿಷೇಧಿಸುವ 'ಈದೃಶ ಏವ' ಎಂಬ ವಾಕ್ಯಶೇಷವೇ ಆಧಾರ ಮತ್ತು 'ಯಸ್ತು ಆತ್ಮರತಿರೇವ' ಎಂಬಲ್ಲಿ ಕರ್ತವ್ಯ ಕರ್ಮಾಭಾವವನ್ನು ಹೇಳಿದ್ದೂ ಪ್ರಮಾಣವಾಗಿದೆ ಎಂಬುದು ಬಾದರಾಯಣ ಮತ. ಹೀಗೆ ಎರಡು ಪ್ರಕಾರವಾಗಿ ಅರ್ಥ ಹೇಳಲು ಬರುವಾಗ ಯಥೇಷ್ಟಾಚಾರ ವಿಧಿ ಪರತ್ವವನ್ನು ಏಕೆ ಹೇಳಬೇಕು? ಎಂದು ಪ್ರಶ್ನಿಸಿದರೆ ಇದು ಸರಿಯಲ್ಲ.

**ಉತ್ತರ :-** ಹೀಗೆ 'ಸ ಬ್ರಾಹ್ಮಣಃ' ಎಂಬ ವಾಕ್ಯಕ್ಕೆ ವಿರುದ್ಧವಾದ ಬೇರೆ ಬೇರೆ ಅರ್ಥಗಳನ್ನು ಹೇಳಿದರೆ ಅದಕ್ಕೆ ಪ್ರಾಮಾಣ್ಯವಿಲ್ಲದಂತಾಗುತ್ತದೆ. ಮತ್ತು ಜ್ಞಾನಿಗಳ ಸದಾಚಾರ-ದುರಾಚಾರಗಳಿಂದ ಫಲವ್ಯತ್ಯಾಸವಿದೆಯೆಂದಾದರೆ ದುರಾಚಾರದಿಂದ ಜ್ಞಾನದ ಶಕ್ತಿ ಕುಂಠಿತವಾಗಿ ಅದು ಮೋಕ್ಷಹೇತುವಾಗದೆ 'ಅನಿಯಮಃ ಸರ್ವೇಷಾಂ' ಎಂಬಲ್ಲಿ ಹೇಳಲ್ಪಟ್ಟ ಪ್ರಮೇಯಕ್ಕೆ (ಜ್ಞಾನದಿಂದ ಮೋಕ್ಷವು ಆಗೇ ಆಗುತ್ತದೆ) ಎಂಬುದಕ್ಕೆ ಭಂಗ ಬರುತ್ತದೆ. ಹಾಗೆಯೇ

ಸದಾಚಾರ ಸಹಿತವಾದ ಜ್ಞಾನವೇ ಮೋಕ್ಷಹೇತು ಎಂದು ಹೇಳಿದಂತಾಗಿ 'ಜ್ಞಾನವೇ ಮೋಕ್ಷಕಾರಣ ಎಂದು ಹೇಳುವ ವಿದ್ಯೈವತು ಎಂಬ ಸೂತ್ರದ ವಿರೋಧವೂ ಬರುತ್ತದೆ. ಹೀಗಾಗಿ ಸಾಧಕವಿಲ್ಲದಿದ್ದರೂ ಈ ಬಾಧಕ-ವಿರುವುದರಲ್ಲಿ ಜ್ಞಾನಿಗಳ ಸದಸತ್ ಪ್ರವೃತ್ತಿಯಲ್ಲಿ ವಿಶೇಷವನ್ನು ಹೇಳಬಾರದು. ಜ್ಞಾನಿಗಳಿಗೆ ದುರಾಚಾರದಿಂದ ಮೋಕ್ಷಪ್ರತಿಬಂಧವಿಲ್ಲ ಎಂದು ಹೇಳುವುದಾದರೆ ಜಿಜ್ಞಾಸುವಿಗೂ ದುರಾಚಾರದಿಂದ ಜ್ಞಾನಪ್ರತಿ-ಬಂಧವಿಲ್ಲ ಎಂದು ಹೇಳಬೇಕಾಗುತ್ತದೆ. ಆಗ ವೈರಾಗ್ಯಕ್ಕೆ ಮೋಕ್ಷ-ಸಾಧನತ್ವವನ್ನು ಹೇಳಿದ್ದು ವ್ಯರ್ಥವಾಗುತ್ತದೆ.

ಜ್ಞಾನಿಗಳ ಸದಾಚಾರ ದುರಾಚಾರಗಳಿಂದ ಮೋಕ್ಷ ದೊರೆಯುವುದರಲ್ಲಿ ಏನೂ ವ್ಯತ್ಯಾಸವಿಲ್ಲದಿದ್ದರೂ ಮೋಕ್ಷದಲ್ಲಿ ಆನಂದಾತಿಶಯದ ಅಭಿವ್ಯಕ್ತಿ ಮತ್ತು ಪ್ರತಿಬಂಧ ರೂಪ ವಿಶೇಷವಿದೆ ಎನ್ನುವುದೂ ಸರಿಯಲ್ಲ. ಏಕೆಂದರೆ ಇಂತಹ ವಿಶೇಷವಿರುತ್ತಿದ್ದರೆ ಜ್ಞಾನಿಗೆ ಸರ್ವಾನ್ನ ಭಕ್ಷಣದಿಂದಲೂ ಯಾವ ವಿಶೇಷವಿಲ್ಲ ಎಂದು ಹೇಳುವ ಶ್ರುತಿವಿರೋಧ ಬರುತ್ತದೆ. ಅದಕ್ಕೆ ಬೇರೆ ಅರ್ಥ ಹೇಳಲು ಯಾವ ಪ್ರಮಾಣವೂ ಇಲ್ಲ.

**ಸಿದ್ಧಾಂತ :-** 'ಸ ಬ್ರಾಹ್ಮಣಃ ಯೇನ ಸ್ಯಾತ್ ಕೇನ ಸ್ಯಾತ್' ಎಂಬ ವಾಕ್ಯವು ಎಲ್ಲಾ ಜ್ಞಾನಿಗಳಿಗೆ ಸಂಬಂಧಿಸಿದೆ ಎಂದು ತೋರಿದರೂ ಪ್ರಮಾಣಾಂತರದಿಂದ ಅದಕ್ಕೆ ಮೂರು ಅರ್ಥಗಳನ್ನು ಹೇಳಬೇಕು. ಆ ವಾಕ್ಯವು ಕೇವಲ ಜ್ಞಾನಿಸ್ತುತಿಪರವಾಗಿದೆ ವಿಧಿ ಪರ ಅಲ್ಲ ಎಂದರೆ ಸರ್ವವಿಧ್ಯತಿದೂರತ್ವ ಎಂಬ ಈಶ ಲಕ್ಷಣಕ್ಕೆ ಜ್ಞಾನಿಯಲ್ಲಿ ಅತಿವ್ಯಾಪ್ತಿ ಬರುವುದರಿಂದ ವಿಧಿಪರ ಎನ್ನಲೇ ಬೇಕು. ಆದರೆ 'ವಿಧಿನಿಯತಾ ಮುನಷ್ಯಾಃ' ಎಂಬ ಪ್ರಮಾಣಾನು-ಸಾರವಾಗಿ ಮನುಷ್ಯರಾದ ಜ್ಞಾನಿಗಳಿಗೆ ಸರ್ವ ಸದಾಚಾರ ವಿಧಿ ಪರ ಎಂದು ಜೈಮಿನಿಗಳು ಹೇಳಿದಂತೆ ಅರ್ಥೈಸಬೇಕು. ಬಾದರಾಯಣರು ಹೇಳುವಂತೆ ದೇವತೆಗಳ ವಿಷಯದಲ್ಲಿ ಕೆಲವು ಧರ್ಮಗಳ ಅನುಷ್ಠಾನ ಕೆಲವು ಧರ್ಮಗಳ ಅನನುಷ್ಠಾನಕ್ಕೆ ಅನುಮತಿ ಎಂದು ಅರ್ಥಮಾಡಬೇಕು.

'ಬ್ರಹ್ಮೈವ ಸ್ವೇಚ್ಛಾನಿಯತಃ' ಎಂಬ ಶ್ರುತಿ ಮತ್ತು 'ಸ್ವೇಚ್ಛಯೈವ ಪ್ರವೃತ್ತಿಸ್ತು ಬ್ರಹ್ಮಣೋ ವಿಧಿ ಚೋದಿತಾ' ಎಂಬ ಸ್ಮೃತಿಯ ಪ್ರಕಾರ

ಬ್ರಹ್ಮದೇವರ ವಿಷಯದಲ್ಲಿ ಯಥೇಷ್ಟಾಚಾರ ವಿಧಿಪರವಾಗಿದೆ ಎಂದು ಅಧಿಕಾರಿ ಭೇದೇನ ವ್ಯವಸ್ಥೆ ಮಾಡಿ ಅರ್ಥ ಹೇಳಬೇಕು.

ಜ್ಞಾನಿಗಳ ಸದಾಚಾರ ದುರಾಚಾರದಿಂದ ಪರಿಣಾಮವಾಗುವುದಾದರೂ ಮೋಕ್ಷಕ್ಕೇನೂ ಪ್ರತಿಬಂಧವಿಲ್ಲ ಎನ್ನುವುದು 'ಕಾಮಚಾರಾಃ ಕಾಮಭಕ್ಷಾಃ' ಎಂಬ ಶ್ರುತಿಯಿಂದ ಸಿದ್ಧವಾಗಿದೆ. ಮತ್ತು ಅವಶ್ಯ ಅನುಭೋಕ್ತವ್ಯವಾದ ಪ್ರಾರಬ್ಧ ಕರ್ಮಕ್ಕೂ ಕೂಡ 'ಆತ್ಮಾನಮಭಿಪಶ್ಯ ಎಂಬ ಶ್ರುತಿಯ ಪ್ರಕಾರ ಉಪಮರ್ದಸಿದ್ಧವಾದ್ದರಿಂದ ಜ್ಞಾನಿಗಳಿಗೆ ದುರಾಚಾರದಿಂದ ಮೋಕ್ಷಪ್ರತಿಬಂಧವಿಲ್ಲವೆನ್ನುವುದು ಕೈಮುತ್ಯನ್ಯಾಯಸಿದ್ಧವಾಗುತ್ತದೆ. ಹೀಗಾಗಿ ಹಿಂದೆ ಹೇಳಿದ ಜ್ಞಾನಕ್ಕೆ ಮೋಕ್ಷಹೇತುತ್ವನಿಯಮ ಭಂಗವೆಂಬ ಬಾಧಕವಿಲ್ಲ. ಹೀಗೆಯೇ ಜ್ಞಾನಿಗಳ ದುರಾಚಾರದಿಂದ ಮೋಕ್ಷಪ್ರತಿಬಂಧವಾಗದಿದ್ದರೂ ಜಿಜ್ಞಾಸುಗಳ ದುರಾಚಾರದಿಂದ ಜ್ಞಾನಪ್ರತಿಬಂಧವಾಗುತ್ತದೆ. ಇದು 'ಯ ಇಮಂ ಪರಮಂ ಗುಹ್ಯಂ' ಎಂಬ ಶ್ರುತಿಯಿಂದ ಪ್ರಮಿತವಾಗಿದೆ. ಆದ್ದರಿಂದ ವೈರಾಗ್ಯಾಪಾದನೆ ವ್ಯರ್ಥ ಎಂಬ ಬಾಧಕವೂ ಇಲ್ಲ.

ಮೋಕ್ಷಪ್ರಾಪ್ತಿಗೆ ಕೇವಲ ಜ್ಞಾನವೇ ಕಾರಣ. ಸದಾಚಾರವು 'ಪಶ್ಯನ್ನಪಿ' ಎಂಬ ಶ್ರುತಿಯ ಪ್ರಕಾರ ಮೋಕ್ಷದಲ್ಲಿ ಆನಂದಾತಿಶಯಕ್ಕೆ ಕಾರಣ ಎಂದು ಹೇಳುವುದರಿಂದ ಜ್ಞಾನಕರ್ಮ ಸಮುಚ್ಚಯವಾದಾಪತ್ತಿ ಎಂಬ ಬಾಧಕವೂ ಇಲ್ಲ.

ಜ್ಞಾನಿಗಳಿಗೆ ಸರ್ವಾನ್ನಾನುಮತಿ ಹೇಳುವ ಶ್ರುತಿಯ ವಿರೋಧವೂ ಇಲ್ಲ. ಏಕೆಂದರೆ ಆ ಶ್ರುತಿಯು ಪ್ರಾಣಾತ್ಯಯಕಾಲಕ್ಕೆ ಸಂಬಂಧಿಸಿದ್ದಾದ್ದರಿಂದ ಸಾವಕಾಶವಾಗಿದೆ.

ಮತ್ತು ಜ್ಞಾನಿಗಳು ನಿಷಿದ್ಧವನ್ನು ಮಾಡದಿದ್ದರೆ ಬಾಧಕವಿದೆ ಎಂಬ ಕಾರಣದಿಂದ ಕಾಮಚಾರ ಹೇಳುತ್ತೀರೋ ಅಥವಾ ನಿಷಿದ್ಧಾಚರಣೆಗೆ ಪ್ರಮಾಣವಿರುವುದರಿಂದ ಕಾಮಚಾರ ಹೇಳುತ್ತೀರೋ ಅಥವಾ ನಿಷೇಧಕ ಪ್ರಮಾಣವಿಲ್ಲದ್ದರಿಂದ ಕಾಮಚಾರ ಹೇಳುತ್ತೀರೋ ಅಥವಾ ನಿಷಿದ್ಧವನ್ನು ಮಾಡಿದರೂ ಬಾಧಕವಿಲ್ಲದ್ದರಿಂದ ಕಾಮಚಾರ ಹೇಳುತ್ತೀರೋ ಮೊದಲೆರಡು ಪಕ್ಷಗಳು ಸರಿಯಲ್ಲ. ಏಕೆಂದರೆ ನಿಷಿದ್ಧ ಕರ್ಮಮಾಡದೇ ಇದ್ದ ಪಕ್ಷದಲ್ಲಿ ಬಾಧಕವಿಲ್ಲ

ಮತ್ತು ನಿಷಿದ್ಧವನ್ನು ಮಾಡಬೇಕೆಂಬುದಕ್ಕೆ ಪ್ರಮಾಣವು ಇಲ್ಲ. ಮೂರನೇ ಪಕ್ಷವೂ ಸರಿಯಲ್ಲ. 'ನ ಕಾಮಚರಿತಂ ಚರೇತ್' ಎಂಬುದಾಗಿ ನಿಷೇಧಕ ಪ್ರಮಾಣವಿದೆ. ಹಾಗೆಯೇ 'ಅತೀತಾನಾಗತಜ್ಞಾನೀ..' ಎಂಬ ಸ್ಮೃತಿಯ ಪ್ರಕಾರ ಆನಂದಹ್ರಾಸರೂಪ ಬಾಧಕವಿರುವುದರಿಂದ ಕಾಮಚಾರವು ಸರಿಯಲ್ಲ. ಆದ್ದರಿಂದ ಜ್ಞಾನಿಗಳಿಗೂ ಕೂಡ ಸದಾಚಾರ-ದುರಾಚಾರಗಳಿಂದ ಆನಂದಹ್ರಾಸರೂಪ ಪರಿಣಾಮ ಇದ್ದೇ ಇದೆ. ಅಸದಾಚಾರವಿದ್ದರೂ ಜ್ಞಾನಿಗಳಿಗೆ ಮುಕ್ತಿ ಲೋಪವಿಲ್ಲವೆಂದು ಜ್ಞಾನಮಹಿಮೆಯ ಸಮರ್ಥನೆಯೇ ಅಧಿಕರಣದ ಫಲ.

## ॥ ಓಂ ಸರ್ವಥಾಪಿ ತು ತ ಏವೋಭಯಲಿಂಗಾತ್ ಓಂ ॥
## ೩-೪-೫

ಪೂರ್ವಾಧಿಕರಣದಲ್ಲಿ 'ವಿಶೇಷಿತತ್ವಾತ್' ಎಂಬಲ್ಲಿ ಪ್ರಕೃತರಾದ ಮಂದ - ಮಧ್ಯಮ - ಉತ್ತಮ ಎಂಬ ಅಧಿಕಾರಿಗಳಿಗೆ ಮಾತ್ರ ಜ್ಞಾನ ಇತರರಿಗೆ ಇಲ್ಲ ಎಂದು ಈ ಅಧಿಕರಣದಲ್ಲಿ ಹೇಳುವುದರಿಂದ ಸಂಗತಿ ಇದೆ.

ಜ್ಞಾನವು ಅಯೋಗ್ಯರಿಗೂ ಬರತ್ತುದೋ? ಅಥವಾ ಪ್ರಕೃತರಾದ ಯೋಗ್ಯರಿಗೆ ಮಾತ್ರವೋ? ಯೋಗ್ಯರಿಗೆ ಮಾತ್ರ ಜ್ಞಾನ ಎಂದು ಕಲ್ಪಿಸಲು ಪ್ರಮಾಣ ಇಲ್ಲವೋ ಅಥವಾ ಇದೆಯೋ? ಅಯೋಗ್ಯರಿಗೂ ಜ್ಞಾನ ಬರುತ್ತದೆ ಎಂಬ ಪಕ್ಷದಲ್ಲಿ ಮಹಾಪ್ರಯತ್ನದಿಂದ ಅಯೋಗ್ಯತೆಯು ಹೋಗಿ ಯೋಗ್ಯತಾ ಉತ್ಪತ್ತಿ ಆಗುತ್ತದೋ ಇಲ್ಲವೋ? ಅಯೋಗ್ಯತೆಯು ಆ ಜೀವರ ಅಸ್ವಭಾವವೋ ಅಥವಾ ಸ್ವಭಾವವೋ? ಅದು ಸ್ವಭಾವವಾದ್ದರಿಂದ ಹೋಗುವುದಿಲ್ಲ ಎಂಬುದಕ್ಕೆ ಜ್ಞಾಪಕವು ಇಲ್ಲವೋ ಇದೆಯೋ? ಎಂಬೀ ವಿಚಾರಗಳು ಇಲ್ಲಿ ವಿಮರ್ಶಿಸಲ್ಪಟ್ಟಿವೆ.

**ಪೂರ್ವಪಕ್ಷ** :- ಯೋಗ್ಯರಿಗೆ ಮಾತ್ರ ಜ್ಞಾನವೆಂಬುದಕ್ಕೆ ಪ್ರಮಾಣವಿಲ್ಲ-ವಾದ್ದರಿಂದ ವೇದಕ್ಕೆ ಅಯೋಗ್ಯರಾದವರಿಗೂ ಪ್ರಯತ್ನದಿಂದ ವೇದ ಬರುವಂತೆ ಪ್ರಯತ್ನದಿಂದ ಅಯೋಗ್ಯರಿಗೂ ಜ್ಞಾನ ಬರಬಹುದು. ಯೋಗ್ಯರಿಗೆ ಮಾತ್ರ ಜ್ಞಾನ ಎನ್ನುವ ಪಕ್ಷದಲ್ಲಿ ವಿಶ್ವಾಮಿತ್ರರಿಗೆ ಅವರ

ಪ್ರಯತ್ನದಿಂದ ಕ್ಷತ್ರಿಯತ್ವ ಹೋಗಿ ವಿಪ್ರತ್ವ ಬಂದಂತೆ ಅಯೋಗ್ಯರಿಗೂ ಅಯೋಗ್ಯತೆ ಹೋಗಿ ಯೋಗ್ಯತೆ ಬರಬಹುದು. ಕ್ಷತ್ರಿಯತ್ವವು ಅಸ್ವಾಭಾವಿಕವಾದ್ದರಿಂದ ನಿವೃತ್ತಿಯಾಯಿತು, ಅಯೋಗ್ಯತೆಯು ಸ್ವಾಭಾವಿಕವಾದ್ದರಿಂದ ಹೋಗುವುದಿಲ್ಲ ಎಂದು ಶಂಕಿಸಬಾರದು. ಅದು ಸ್ವಾಭಾವಿಕ ಎನ್ನಲು ಪ್ರಮಾಣವಿಲ್ಲ. ಮತ್ತು ಯೋಗ್ಯತೆಯು ಸ್ವಾಭಾವಿಕವೆಂದಾದರೆ ಯವ ಹಾಗೂ ಕಲಮ ಬೀಜದಿಂದ ಅದರ ಸ್ವಭಾವಕ್ಕನುಸಾರಿ ಫಲ ಬರುವಂತೆ ಜೀವರೂ ಕೂಡ ಯೋಗ್ಯತಾನುಗುಣವಾಗಿಯೇ ಫಲ ಪಡೆಯುವ ಪ್ರಸಂಗವೂ ಬರುವುದರಿಂದ ಯೋಗ್ಯತೆಯು ಸ್ವಭಾವವಲ್ಲ.

**ಸಿದ್ಧಾಂತ** :- ದೇಶಕಾಲಗುರೂಪಸತ್ತಿ ಮಹೋತ್ಸಾಹ ಎಲ್ಲ ಇದ್ದರೂ ಯೋಗ್ಯರಿಗೆ ಮಾತ್ರ ಜ್ಞಾನಪ್ರಾಪ್ತಿ. ಅಯೋಗ್ಯರಿಗಿಲ್ಲ. ಚತುರ್ಮುಖ ಬ್ರಹ್ಮದೇವರು ಇಂದ್ರ-ವಿರೋಚನರಿಗೆ ಸಮಾನವಾಗಿ ಉಪದೇಶ ಮಾಡಿದರೂ ಯೋಗ್ಯನಾದ ಇಂದ್ರನಿಗೆ ಮಾತ್ರ ಜ್ಞಾನಪ್ರಾಪ್ತಿ ಆಯಿತು. ಅಯೋಗ್ಯನಾದ ವಿರೋಚನನಿಗೆ ಆಗಲಿಲ್ಲ. ಎಂದು ಛಾಂದೋಗ್ಯ ಅಷ್ಟಮಾಧ್ಯಾಯದಲ್ಲಿ ಸ್ಪಷ್ಟವಾಗಿದೆ. ಈ ಲಿಂಗದಿಂದ ಮತ್ತು 'ಶೃಣ್ವೇ ವೀರಮುಗ್ರಮುಗ್ರಂ' ಎಂಬಲ್ಲಿ ಮುಕ್ತಿಯೋಗ್ಯರಿಗೆ ಮಾತ್ರ ಜ್ಞಾನ ಹೇತುಪ್ರಸಾದವಾಗುತ್ತದೆ ಎಂದು ಹೇಳಿದ ಮಾತಿನ ಬಲದಿಂದಲೂ ಯೋಗ್ಯರಿಗೆ ಮಾತ್ರ ಜ್ಞಾನವೆಂದು ತಿಳಿಯುತ್ತದೆ.

'ದೈವೀಮೇವ ಸಂಪತ್ತಿಂ ದೇವಾಃ' ಎಂಬ ಶ್ರುತಿ ಮತ್ತು 'ಅಸುರಾ ಆಸುರೇಣೈವ ಸ್ವಭಾವೇನ' ಎಂಬ ಸ್ಮೃತಿಯ ಪ್ರಮಾಣದಿಂದ ಅಯೋಗ್ಯತೆಯು ಸ್ವಾಭಾವಿಕ ಎಂದು, ಅದು ಬದಲಾಗುವುದಿಲ್ಲ ಎಂದೂ ಸಿದ್ಧವಾಗುವ ಪ್ರಯುಕ್ತ ಮಹಾಪ್ರಯತ್ನದಿಂದಲೂ ಅಯೋಗ್ಯತೆ ಹೋಗಿ ಯೋಗ್ಯತೆ ಬರುವುದಿಲ್ಲ.

ಹಾಗೆಯೇ 'ನ ಅಸುರಾಃ ದೈವೀಂ ನ ದೇವಾ ಆಸುರೀಂ (ಅಸುರರು ದೇಪಸ್ವಭಾವವನ್ನಾಗಲೀ, ದೇವತೆಗಳು ಅಸುರಸ್ವಭಾವವನ್ನಾಗಲೀ ಹೊಂದು-ವುದಿಲ್ಲ) ಎಂಬ ನಿಯಮ ಶ್ರುತಿ ಇದೆ.

'ನಾಸುರಾಣಾಂ ದೈವಂ ರೂಪಂ' (ಅಸುರರಿಗೆ ದೇವತೆಗಳಿಗಿರುವಂತಹ ಜ್ಞಾನ ಬರುವುದಿಲ್ಲ) ಎಂಬ ಶ್ರುತಿಯೂ ಇದೆ. 'ತಂ ದೇವಾ ಭೂತಿರಿತಿ

ಉಪಾಸಾಂ ಚಕ್ರಿರೇ' ಎಂಬುದಾಗಿ ಪರಸ್ಪರ ವಿಪರೀತವಾಗಿ (ಭಗವಂತ ಐಶ್ವರ್ಯರೂಪಿ-ಅನೈಶ್ವರ್ಯರೂಪಿ) ಎಂದು ಉಪಾಸನೆ ಮಾಡಿದ ದೇವಾಸುರರಿಗೆ ಸಮೀಚೀನ ಫಲ ಹಾಗೂ ವಿಪರೀತ ಫಲವನ್ನು ಹೇಳುವ ಶ್ರುತಿಯೂ ಇದೆ. ದೇವ – ಅಸುರ – ಮನುಷ್ಯರಿಗೆ ದೇವತ್ವ – ಅಸುರತ್ವ – ಮನುಷ್ಯತ್ವವು ಸ್ವಭಾವ ಎಂದು ಹೇಳುವ ಜೈಮಿನಿಗಳ ಮತವೂ ಇದೆ. ಇಷ್ಟೆಲ್ಲ ಜ್ಞಾಪಕಗಳಿರುವುದರಿಂದ ಅಯೋಗ್ಯತೆಯು ಸ್ವಭಾವ ಎಂದೂ, ಇದು ಬದಲಾಗುವುದಿಲ್ಲವೇಂದೂ ಸಿದ್ಧವಾಗುತ್ತದೆ.

ಹಾಗೆಯೇ 'ತಸ್ಮಾನ್ನ ಜನತಾಮಿಯಾತ್' ಎಂದು ಬೃಹದಾರಣ್ಯಕದಲ್ಲಿ ಜನರ ಗುಂಪಿನಲ್ಲಿ ಪ್ರವೇಶ ನಿಷೇಧ ಮಾಡಿದ್ದಾರೆ. ಇದರಿಂದ ಅರ್ಥಾತ್ ಅಸುರರು ಜಾಸ್ತಿ ಎಂದು ಸಿದ್ಧವಾಯಿತು. 'ಕನೀಯಸಾ ಏವ ದೇವಾಃ ಅಸುರಾ ಜ್ಯಾಯಸಃ' ದೇವತೆಗಳು ಕಡಿಮೆ ಅಸುರರು ಜಾಸ್ತಿ ಎಂಬ ಶ್ರುತಿಯೂ ಇದೆ. ಒಂದು ವೇಳೆ ಸ್ವಭಾವವು ಬದಲಾಗುವುದಾದರೆ ದೇವತೆಗಳೂ ಕೂಡ ಜಾಸ್ತಿ ಯಾಗಬಹುದು. ಆದರೆ ನಿಯಮದಿಂದ ಅಸುರರೇ ಜಾಸ್ತಿ ಎಂದು ಹೇಳಿದ್ದ ರಿಂದ ಸ್ವಭಾವ ಬದಲಾಗುವುದಿಲ್ಲ ಎಂದು ಸಿದ್ಧವಾಗುತ್ತದೆ. ಮತ್ತು ಸ್ವಭಾವಾನುಸಾರಿ ಫಲವೇ ಪ್ರಮಾಣದಿಂದ ಸಿದ್ಧವಾಗಿದೆ.

ಯೋಗ್ಯರಿಗೆ ಮಾತ್ರ ಮೋಕ್ಷ ಸಮರ್ಥನೆಯು ಈ ಅಧಿಕರಣದ ಫಲ.

## ।। ಓಂ ನ ಚಾಧಿಕಾರಿಕಮಪಿ ಪತನಾನುಮಾನಾತ್ ತದಯೋಗಾತ್ ಓಂ ।। ೩-೪-೬

ಹಿಂದಿನ ಅಧಿಕರಣದಲ್ಲಿ ಅಯೋಗ್ಯರಿಗೆ ಜ್ಞಾನಪ್ರಾಪ್ತಿ ಇಲ್ಲ ಎಂದು ಹೇಳಲಾಯಿತು. ಇಲ್ಲಿ ಯೋಗ್ಯರಾದವರಲ್ಲಿಯೂ ಸ್ವ-ಅಯೋಗ್ಯ ಪದವಿಯ ಅಪೇಕ್ಷೆ ಇಲ್ಲದವರಿಗೆ ಮಾತ್ರ ಜ್ಞಾನಪ್ರಾಪ್ತಿ. ಎಲ್ಲರಿಗೂ ಇಲ್ಲ ಎಂದು ಹೇಳು-ವುದರಿಂದ ಸಂಗತಿ. ಅಥವಾ ಪೂರ್ವಾಧಿಕರಣದಲ್ಲಿ ಪ್ರಕೃತವಾದ ದೇವತ್ವಾದಿಗಳು ಪ್ರಯತ್ನ ಸಾಧ್ಯವೆಂದು ಶ್ರುತಿ ಇರುವುದರಿಂದ ಸ್ವಾಭಾವಿಕತ್ವ ಹೇಳಿದ್ದು ಅಯುಕ್ತ ಎಂದು ಶಂಕಿಸಿದ್ದರಿಂದ ಸಂಗತಿ ಇದೆ. ಪೂರ್ವಾಧಿ-ಕಾರಣದಲ್ಲಿ ದೇವತೆಗಳು ಪ್ರಕೃತರಾದ್ದರಿಂದ ಅಂತಹ ದೇವತೆಗಳಿಗೆ

ಸಂಬಂಧಿಸಿದ ಅವರ ಪದವಿಯು ದೇವತೆಗಳಲ್ಲದ ಇತರರಿಗೂ ಹೊಂದಲು ಯೋಗ್ಯವೋ ಅಥವಾ ದೇವತೆಗಳಿಗೆ ಮಾತ್ರ ಪಡೆಯಲು ಯೋಗ್ಯವೋ? ಆ ಪದವಿಯನ್ನು ಪಡೆಯಲು ಇಚ್ಛಾ ಪ್ರಯತ್ನಗಳನ್ನು ಮಾಡಿದರೆ ಬಾಧಕ-ವಿಲ್ಲವೋ ಅಥವಾ ಇದೆಯೋ? ಎಂಬುದು ಇಲ್ಲಿಯ ವಿಚಾರವಾಗಿದೆ.

**ಪೂರ್ವಪಕ್ಷ** :- 'ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚತಾ ಮೇತಿ', 'ಮಯಾ ವಿಷ್ಣೋರೇಷಸ್ಯ' ಇತ್ಯಾದಿ ವಾಕ್ಯಬಲದಿಂದ ಬ್ರಹ್ಮ-ರುದ್ರಾದಿಪದವಿಗಳು ಪ್ರಯತ್ನಸಾಧ್ಯವೆಂದು ತಿಳಿದುಬರುವುದರಿಂದ ಚೇತನರಲ್ಲಿರುವ ಚೇತನತ್ವವು ಸ್ವಾಭಾವಿಕವಾದಂತೆ ದೇವತ್ವವು ಸ್ವಾಭಾವಿಕ-ವಲ್ಲವಾದ್ದರಿಂದ ಎಲ್ಲರೂ ಪ್ರಯತ್ನದಿಂದ ಅದನ್ನು ಪಡೆಯಬಹುದು. ಅದಕ್ಕಾಗಿ ಇಚ್ಛಾಪ್ರಯತ್ನಗಳನ್ನು ಮಾಡಿದರೆ ಬಾಧಕವೇನೂ ಇರುವುದಿಲ್ಲ. ದೇವಪದವಿಯ ಇಚ್ಛಾಪ್ರಯತ್ನಗಳು ಕೂಡದು ಎನ್ನುವುದಾದರೆ ಜ್ಞಾನ-ಭಕ್ತ್ಯಾದಿಗಳಿಗೂ ಇಚ್ಛಾಪ್ರಯತ್ನಗಳನ್ನು ಮಾಡಬಾರದೆಂದಾದೀತು. ಆದ್ದರಿಂದ ದೇವೇತರರೂ ದೇವಪದವಿಯನ್ನು ಹೊಂದಬಹುದು. ಹೆಚ್ಚು ಮಾತೇಕೇ? ಭಗವಂತನ ಅಣಿಮಾದಿ ಐಶ್ವರ್ಯಗಳನ್ನೂ ಪಡೆಯಬಹುದು.

**ಸಿದ್ಧಾಂತ** :- ದೇವತಾಪದವಿಯನ್ನಾಗಲಿ, ಭಗವಂತನ ಅಣಿಮಾದಿ ಐಶ್ವರ್ಯವನ್ನಾಗಲೀ ಯಾರೂ ಪಡೆಯಲು ಶಕ್ಯವಿಲ್ಲ. ಅದರ ಇಚ್ಛಾ-ಪ್ರಯತ್ನಗಳನ್ನು ಮಾಡುವುದೂ ಸರಿಯಲ್ಲ. ರಾಜಪದವಿಯನ್ನು ಇಚ್ಛೆ ಪಡುವವನು ಅದಕ್ಕೆ ಅಯೋಗ್ಯನಾಗಿದ್ದರೆ ಹೇಗೆ ಅನರ್ಥವನ್ನು ಪಡೆಯು ತ್ತಾನೋ ಅದರಂತೆ ಅಶಕ್ಯವಾದ ದೇವಪದವಿಯನ್ನು ಬಯಸುವವನು ಅನರ್ಥ ಭಾಗಿಯಾಗುತ್ತಾನೆ. ಅಯೋಗ್ಯವಾದ ವೃಕ್ಷಾರೋಹಪ್ರಯತ್ನವನ್ನು ಮಾಡುವವನು ಬೀಳುತ್ತಾನೋ ಅದರಂತೆ ದೇವಪದವಿಯ ಪ್ರಯತ್ನವುಳ್ಳ ವನು ಅನರ್ಥಭಾಗಿಯಾಗುತ್ತಾನೆ. ಜೀವರಿಗೆ ಚೇತನತ್ವವು ಸ್ವಾಭಾವಿಕ, ಆದರೆ, ಅದರಂತೆ ದೇವತ್ವವೇನೂ ಸ್ವಾಭಾವಿಕವಲ್ಲ. ಆದ್ದರಿಂದ ಜೀವರು ದೇವ-ಪದವಿಗೆ ಅಯೋಗ್ಯರು ಹೇಗೆ ಎಂದು ಪ್ರಶ್ನಿಸಿದರೆ ಇದಕ್ಕೆ ಉತ್ತರ 'ದೇವಾಸು ರನರತ್ವಾದ್ಯಾ ಜೀವಾನಾಂ ತು ನಿಸರ್ಗತಃ' ಎಂಬ ಪ್ರಮಾಣವಚನದಿಂದ ದೇವತ್ವವು ಸ್ವಾಭಾವಿಕವೆಂದು ತಿಳಿಯುತ್ತದೆ. ಮತ್ತು ಭಕ್ತಿಜ್ಞಾನಾದಿಗಳ ಇಚ್ಛಾಪ್ರಯತ್ನವು ತ್ಯಾಜ್ಯವೆಂದಾದೀತು ಎಂಬ ಅತಿಪ್ರಸಂಗವೂ ಇಲ್ಲ.

ಏಕೆಂದರೆ 'ಅನ್ಯತ್ರ ಶುಭಮಾಕಾಂಕ್ಷನ್ನ ಪತೇದವಿರೋಧತಃ' ಎಂಬ ವಚನದ ಪ್ರಕಾರ ಅನರ್ಥವಿಲ್ಲವೆಂದು ತಿಳಿಯುತ್ತದೆ. ದೇವತಾಪದವಿಯಂತೆ ಜ್ಞಾನವೂ ಕೂಡ ಯೋಗ್ಯರಿಗೆ ಮಾತ್ರ ಲಭ್ಯ ಎಂದು ಹಿಂದೆ ಹೇಳಿದ ಪ್ರಮೇಯದ ಸಮರ್ಥನೆಯೇ ಈ ಅಧಿಕರಣದ ಫಲ.

## ।। ಓಂ ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ ಓಂ ।। ೩-೪-೭

ಪೂರ್ವಾಧಿಕರಣದಲ್ಲಿ ಜ್ಞಾನದ ಪ್ರಕಾರವು ಹೇಳಲ್ಪಟ್ಟಿತು. ಇಲ್ಲಿ ಫಲ-ನಿಷ್ಪಾದನಪ್ರಕಾರವು ಹೇಳಲಾಗುವುದರಿಂದ ಸಂಗತಿ ಇದೆ. ಪ್ರಕೃತವಾದ ಜ್ಞಾನವು ತತ್ವಾಭಿಮಾನಿದೇವತೆಗಳಿಗೆ ಮಾತ್ರ ಫಲಪ್ರದವೋ ಅಥವಾ ಪ್ರಜೆ-ಗಳಿಗೂ ಫಲಪ್ರದವಾಗಿದೆಯೋ? ಕ್ರಿಯೆಯಿಂದ ಬರುವ ಫಲವನ್ನು ಪಡೆಯಲು ಪ್ರಯೋಜಕಕರ್ತೃತ್ವವೇ (ಪ್ರೇರಕಕರ್ತೃತ್ವವೇ) ಪ್ರಯೋಜಕವೋ ಅಥವಾ ಕೇವಲ ಕರ್ತೃತ್ವವೂ ಕೂಡ ಪ್ರಯೋಜಕವೋ? ಕೇವಲ ಕರ್ತೃತ್ವವೂ ಪ್ರಯೋಜಕವೆನ್ನಲು ಸಾಧಕವಿಲ್ಲದೇ ಬಾಧಕವಿದೆಯೋ ಅಥವಾ ಬಾಧಕ-ವಿಲ್ಲದೇ ಸಾಧಕವಿದೆಯೇ? ಕೇವಲ ಕರ್ತೃತ್ವವೂ ಕೂಡ ಫಲಕ್ಕೆ ಪ್ರಯೋಜಕ ಎಂಬ ಪಕ್ಷದಲ್ಲಿಯೂ ಕೂಡ ಪ್ರೇರಕಕರ್ತೃಸಮಾನ ಫಲವನ್ನೇ ಹೇಳಬೇಕೋ ಅಥವಾ ಬೇಡವೋ ಎಂಬುದು ಇಲ್ಲಿಯ ವಿಚಾರ.

**ಪೂರ್ವಪಕ್ಷ** :- ಕೇವಲ ಕರ್ತೃತ್ವವೂ ಫಲಪ್ರಯೋಜಕ ಎಂಬ ಪಕ್ಷದಲ್ಲಿ ಸಂಕೋಚಕ್ಕೆ ಪ್ರಮಾಣವಿಲ್ಲದ್ದರಿಂದ ಪ್ರೇರಕರು ಪಡೆಯುವಷ್ಟು ಫಲವನ್ನೇ ಕರ್ತೃಗಳೂ ಪಡೆಯುತ್ತಾರೆ ಎಂದು ಹೇಳಬೇಕಾಗುತ್ತದೆ. ಆದರೆ ಅದು 'ಸ್ವಾಮೀ ಹಿ ಫಲಮಶ್ನುತೇ' ಎಂಬ ಶ್ರುತಿಗೆ ಮತ್ತು ಆತ್ರೇಯಾಚಾರ್ಯರ ಮತಕ್ಕೆ ವಿರುದ್ಧವಾಗಿದೆ. ಮತ್ತು ಲೋಕದಲ್ಲಿ ಪ್ರೇರಕನ ಅಧೀನಕರ್ತೃವಾದ ಬಡಗಿಯವರಿಗೆ (Wood Worker) ಕ್ರಿಯಾಜನ್ಯಫಲ ಕಂಡಿಲ್ಲವಾದ್ದರಿಂದ ಶ್ರುತ್ಯಾದಿ ವಿರೋಧರೂಪ ಬಾಧಕವಿರುವುದರಿಂದ ಸಾಧಕವಿಲ್ಲ-ದಿರುವುದರಿಂದ ಕೇವಲ ಕರ್ತೃತ್ವವು ಕೂಡ ಫಲಪ್ರಯೋಜಕವೆನ್ನುವುದು ಸರಿಯಲ್ಲ. ಕಿಂತು ಪ್ರೇರಕತ್ವವೇ ಪ್ರಯೋಜಕ. ಆದ್ದರಿಂದ ಸರ್ವೇಂದ್ರಿಯ ಪ್ರೇರಕರಾದ ದೇವತೆಗಳಿಗೆ ಪ್ರಜೆಗಳು ಮಾಡಿದ ಶ್ರವಣಾದಿ ಜನ್ಯಜ್ಞಾನದ ಫಲವು ಹೊರತು ಪ್ರಜೆಗಳಿಗಿಲ್ಲ.

**ಸಿದ್ಧಾಂತ :-** 'ಸ್ವಾಮೀ ಹಿ' ಎಂಬ ಶ್ರುತಿಯ ಪ್ರಕಾರ ಮತ್ತು 'ತತೋ ಮಹತ್ತರಂ ಪ್ರೋಕ್ತಂ ದೇವಾದೀನಾಂ' ಎಂಬ ಸ್ಮೃತಿಯ ಪ್ರಕಾರ ಮತ್ತು ಆತ್ರೇಯರ ಮತದಂತೆ ಪ್ರಜೆಗಳು ಮಾಡುವ ಶ್ರವಣಾದಿಗಳಿಗೆ ಪ್ರೇರಕರಾದ ತತ್ತ್ವಾಭಿಮಾನಿದೇವತೆಗಳಿಗೆ ಸಂಪೂರ್ಣ ಫಲವೆನ್ನುವುದು ನಿಜ. ಆದರೂ, ಆ ದೇವತೆಗಳು ತಮಗೆ ಶ್ರುತಿಯಿಂದ ವಿಹಿತವಾದ ಜ್ಞಾನದಾನಕರ್ಮದಲ್ಲಿ ಪ್ರಜೆಗಳಿಗೆ ಜ್ಞಾನೋತ್ಪತ್ತಿಯಾಗಲಿ ಎಂಬ ಉದ್ದೇಶದಿಂದಲೇ (ಪ್ರಜೆ-ಗಳಿಗಾಗಿಯೇ) ಅವರನ್ನು ಸಹಕಾರಿಗಳನ್ನಾಗಿ ಮಾಡಿಕೊಳ್ಳುತ್ತಾರೆ. ಆದ್ದರಿಂದ ಸತ್ರಯಾಗದಲ್ಲಿ ಋತ್ವಿಜರಿಗೂ ಅಲ್ಪಫಲವಿರುವಂತೆ ಪ್ರಜೆಗಳಿಗೂ ಜ್ಞಾನ-ಜನ್ಯವಾದ ಅಲ್ಪಫಲವು ಇದ್ದೇ ಇದೆ. 'ಅನಿಯಮಃ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಮುಕ್ತಿನಿಯಮ ಎಂಬ ಫಲದ ಸಮರ್ಥನೆಯೇ ಈ ಅಧಿಕರಣದ ಫಲ.

## ॥ ಓಂ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ಓಂ ॥
## ೩-೪-೮

ಪೂರ್ವಾಧಿಕರಣದಲ್ಲಿ ದೇವತೆಗಳಿಗೆ ಸಂಪೂರ್ಣ ಫಲವನ್ನು ಹೇಳ-ಲಾಯಿತು. ಇಲ್ಲಿ ಅವರಿಗೆ ಸಂಪೂರ್ಣ ವರ್ಣಾಶ್ರಮಧರ್ಮವತ್ತ್ವವನ್ನು ಹೇಳುವುದರಿಂದ ಸಂಗತಿ ಇದೆ. ಬೇರೆ ಬೇರೆ ಬ್ರಹ್ಮಚರ್ಯಾದಿ ಆಶ್ರಮವುಳ್ಳ ಜ್ಞಾನಿಮುಷ್ಯರಲ್ಲಿ ಮುಕ್ತಿಯಲ್ಲಿ ಗೃಹಸ್ಥ ಉತ್ತಮನೋ? ಯತಿಯೋ? ಎಲ್ಲಾ ಕರ್ಮಾನುಷ್ಠಾನಮಾಡುವ ಯೋಗ್ಯತೆಯೇ ಉತ್ತಮತ್ವಕ್ಕೆ ಪ್ರಯೋಜಕವೋ ಅಥವಾ ಬಹುಕಾಲದ ಅನುಷ್ಠಾನವೋ? ಮುಕ್ತಿಯಲ್ಲಿ ಯತಿಗಳೇ ಉತ್ತಮರೆಂಬುವುದಕ್ಕೆ 'ಆಚಾರ್ಯಕುಲಾದ್ವೇದಮಧೀತ್ಯ... ಕುಟುಂಬೀ... ಬ್ರಹ್ಮಲೋಕಮಭಿಸಂಪದ್ಯತೇ ನ ಚ ಪುನರಾವರ್ತತೇ ನ ಚ ಪುನರಾವರ್ತತೇ' ಎಂಬುದಾಗಿ ಗೃಹಸ್ಥಾಶ್ರಮಿಗಳಿಗೆ ಮೋಕ್ಷವನ್ನು ಹೇಳಿ ಉಪನಿಷತ್ಸಮಾಪ್ತಿ-ಗೊಳಿಸಿದ ವಾಕ್ಯದ ವಿರೋಧವು ಇದೆಯೋ ಇಲ್ಲವೋ? ಅದು ಮನುಷ್ಯ-ವಿಷಯಕವೋ ದೇವವಿಷಯಕವೋ? ದೇವವಿಷಯಕವೆಂಬುದಕ್ಕೆ ಸಾಧಕ-ವಿಲ್ಲದೇ ಬಾಧಕವೇ ಇದೆಯೋ, ಅಥವಾ ಬಾಧಕವಿಲ್ಲದೇ ಸಾಧಕವಿದೆಯೋ? ಎಂಬ ವಿಚಾರಗಳು ಇಲ್ಲಿ ಚರ್ಚಿಸಲ್ಪಟ್ಟಿವೆ.

**ಪೂರ್ವಪಕ್ಷ** :- ಗೃಹಸ್ಥಾಶ್ರಮಕ್ಕಿಂತ ಇತರ ಆಶ್ರಮಗಳಲ್ಲಿರುವವರಿಗೆ ಎಲ್ಲಾ ಸತ್ಕರ್ಮಗಳಲ್ಲಿ ಯೋಗ್ಯತೆ ಇರುವುದಿಲ್ಲ. ಗೃಹಸ್ಥರಿಗೆ ಮಾತ್ರ ಇರುತ್ತದೆ. ಅದೇ ಉತ್ತಮತ್ವಕ್ಕೆ ಪ್ರಯೋಜಕವಾದ್ದರಿಂದ ಗೃಹಸ್ಥರೇ ಉತ್ತಮರು. ಯತಿಗಳಲ್ಲ. ಒಂದು ವೇಳೆ ಯತಿಗಳೇ ಉತ್ತಮರಾಗಿದ್ದರೆ ಛಾಂದೋಗ್ಯದಲ್ಲಿ ಗೃಹಸ್ಥಾಶ್ರಮಿಗಳಿಗೆ ಮೋಕ್ಷವನ್ನು ಹೇಳಿ ಉಪನಿಷತ್ಸ-ಮಾಪ್ತಿಗೊಳಿಸಿದ ವಾಕ್ಯದ ವಿರೋಧ ಬರುತ್ತದೆ. ಆ ವಾಕ್ಯವು ದೇವವಿಷಯಕ ಎಂದು ಹೇಳುತ್ತೇವೆ. ಎಂದರೆ ಅದಕ್ಕೆ ಪ್ರಮಾಣವಿಲ್ಲ. ದೇವತೆಗಳು ಕೃತ್ಸ್ನ ಗೃಹಸ್ಥರು (ಅಂದರೆ ಬ್ರಹ್ಮಚಾರಿಧರ್ಮ ಅಧ್ಯಯನ, ಗೃಹಸ್ಥಧರ್ಮ ಯಜ್ಞಾದಿ, ವಾನಪ್ರಸ್ಥಧರ್ಮ ತಪಸ್ಸು, ಯತಿಧರ್ಮ ವೈರಾಗ್ಯ ಈ ನಾಲ್ಕೂ ಉಳ್ಳವರು). ಆದ್ದರಿಂದ ಆ ಗೃಹಸ್ಥಪರವಾಕ್ಯವು ದೇವತಾ ಪರವಾಗಿದೆ. ಆದ್ದರಿಂದ ಈ ವಾಕ್ಯ ವಿರೋಧವಿಲ್ಲವಾದ್ದರಿಂದ ಮಾನುಷಯತಿಗಳೇ ಶ್ರೇಷ್ಠವೆಂದರೆ ಅದು ಸರಿಯಲ್ಲ. ಯತಿಗಳೇ ಶ್ರೇಷ್ಠವೆಂದರೆ ಬಹುಕಾಲದ ನಂತರ ಸಿದ್ಧಿ ಹೊಂದುವ ಯತಿಗಳಿಗಿಂತ ಅಲ್ಪಕಾಲದಲ್ಲಿಯೇ ಸಿದ್ಧಿಹೊಂದುವ ಗೃಹಸ್ಥರು ತಾರತಮ್ಯದಲ್ಲಿ ಕೆಳಗಿನವರು ಎಂದು ಹೇಳುವ ಸಿದ್ಧಾಂತಿಗಳ ಪ್ರಕಾರ ದೇವತೆಗಳಿಗೆ ಮುಕ್ತಿಯಲ್ಲಿ ಉತ್ತಮತ್ವವಿಲ್ಲದಂತಾದೀತು ಎಂಬ ಬಾಧಕವಿದೆ.

**ಸಿದ್ಧಾಂತ** :- ಗೃಹಸ್ಥರಿಗೆ ಸರ್ವಸತ್ಕರ್ಮಗಳ ಅಧಿಕಾರವಿದ್ದರೂ ಅವೆಲ್ಲ ವನ್ನೂ ಮಾಡುತ್ತಾರೆಂಬ ನಿಯಮವಿಲ್ಲದಿರುವುದರಿಂದ 'ತ್ವರಯೈವ ಗೃಹಿಣ ಸ್ಸಾಧಯಂತಿ ಮುಕ್ತಿಮತ್ವರಯೈವ ಯತಯಃ' (ಗೃಹಸ್ಥಾಶ್ರಮಿಗಳು ಅಲ್ಪಕಾಲದಲ್ಲಿಯೇ ಮುಕ್ತಿಯನ್ನು ಪಡೆಯುತ್ತಾರೆ. ಯತಿಗಳು ದೀರ್ಘಕಾಲ ದಲ್ಲಿ ಮುಕ್ತಿಯನ್ನು ಪಡೆಯುತ್ತಾರೆ) ಎಂಬ ಶ್ರುತಿಯ ಪ್ರಕಾರ ಗೃಹಸ್ಥರ ಮೋಕ್ಷವು ಅಲ್ಪಕಾಲೀನಸಾಧನಸಾಧ್ಯವಾದ ಪ್ರಯುಕ್ತ, ಯತಿಗಳ ಮೋಕ್ಷವು ಬಹುಕಾಲೀನಸಾಧನಸಾಧ್ಯವಾದ ಪ್ರಯುಕ್ತ ಗೃಹಸ್ಥರಿಗಿಂತ ಯತಿಗಳೇ ಉತ್ತಮರು. ಗೃಹಸ್ಥರೇ ಉತ್ತಮರೆಂದು ಹೇಳುವ ಛಾಂದೋಗ್ಯವಾಕ್ಯವೂ ದೇವತಾಪರವಾಗಿದೆ. 'ಕೃತ್ಸ್ನಾ ಹ್ಯೇತೇ ಗೃಹಿಣಃ' ಎಂಬ ಶ್ರುತಿಯ ಪ್ರಕಾರ ದೇವತೆಗಳೇ ಮುಖ್ಯ ಗೃಹಸ್ಥರು. ಮುಖ್ಯ ಮತ್ತು ಅಮುಖ್ಯಗಳಲ್ಲಿ ಮುಖ್ಯಾರ್ಥವನ್ನೇ ಗ್ರಹಿಸಬೇಕು ಎಂಬ ನ್ಯಾಯದ ಪ್ರಕಾರ ಛಾಂದೋಗ್ಯ

ವಾಕ್ಯವು ಮುಖ್ಯಗೃಹಸ್ಥರೆನಿಸಿದ ದೇವತಾಪರವಾಗಿದೆ. ಹಾಗಾದರೆ ಮನುಷ್ಯಯತಿಗಳಿಗಿಂತ ದೇವತೆಗಳಿಗೆ ಮುಕ್ತಿಯಲ್ಲಿ ಆಧಿಕ್ಯವಿಲ್ಲದಂತಾದೀತು ಎಂಬ ಬಾಧಕವಿದೆ. ಎಂದರೆ ಅದೂ ಸರಿಯಲ್ಲ. ದೇವತೆಗಳು 'ಕೃತ್ಸ್ನಾ ಹ್ಯೇತೇ ಯತಯಃ' ಎಂಬ ಶ್ರುತಿಯ ಪ್ರಕಾರ ಎಲ್ಲಾ ಯತಿಧರ್ಮವುಳ್ಳವರೂ ಆಗಿದ್ದಾರೆ. ಹಾಗೆಯೇ 'ದೇವಾ ಏವ ಬ್ರಹ್ಮಚಾರಿಣಃ' ಎಂಬ ಶ್ರುತಿಯಲ್ಲಿ ಸರ್ವಾಶ್ರಮಧರ್ಮವನ್ನೂ ಹೇಳಿರುವುದರಿಂದ ಯತಿಗಳಿಗಿಂತ ದೇವತೆಗಳೇ ಉತ್ತಮರು. ಜ್ಞಾನಾಧಿಕಾರಿಗಳಾದ ಯತಿಗಳಿಗೆ ಆಧಿಕ್ಯ ಹೇಳಿದ್ದರಿಂದ ಜ್ಞಾನದ ಮಹಿಮೆಯ ಸಮರ್ಥನೆ ಮಾಡಿರುವುದೇ ಈ ಅಧಿಕರಣದ ಫಲ. ತತ್ತ್ವಪ್ರಕಾಶಿಕೆಯಲ್ಲಿ ಗೃಹಸ್ಥನುತ್ತಮನೋ ಯತಿ ಉತ್ತಮನೋ ಎಂಬ ಸಂಶಯವನ್ನು ತೋರಿಸದೇ ಇದ್ದದ್ದು ಪೂರ್ವಪಕ್ಷ ಸಿದ್ಧಾಂತಗಳ ಆಧಾರದಿಂದ ಶಿಷ್ಯರೇ ಊಹಿಸಲಿ ಎಂಬ ಉದ್ದೇಶದಿಂದ ಎಂದು ಭಾವಿಸಬೇಕು. ಅಲ್ಲಿ ಸಂದೇಹಾಂತರವನ್ನು ತೋರಿಸಿದ್ದುದರ ಅಭಿಪ್ರಾಯವು ಭಾವದೀಪದಲ್ಲಿ ವ್ಯಕ್ತವಾಗಿದೆ.

## ॥ ಓಂ ಅನಾವಿಷ್ಕುರ್ವನ್ನನ್ವಯಾತ್ ಓಂ ॥ ೩-೪-೯

ಜ್ಞಾನಾಧಿಕಾರಿಗಳಿಗೆ ಉತ್ತಮತ್ವ ಇರುವುದಾದರೆ ಅನೇಕ ಜ್ಞಾನಾಧಿಕಾರಿಗಳಿಗೆ ಜ್ಞಾನದಾನ ಮಾಡಿದ್ದರಿಂದ ಉಪದೇಶಕರಿಗೆ ಹೆಚ್ಚು ಫಲ ಬರುವ ಪ್ರಯುಕ್ತ ಆವಿಷ್ಕಾರದಿಂದ (ಬಹಿರಂಗವಾಗಿ) ಉಪದೇಶ ಮಾಡಬೇಕು ಎಂದು ಶಂಕಿಸಿದ್ದರಿಂದ ಈ ಅಧಿಕರಣವು ಸಂಗತವಾಯಿತು. ಅಪರೋಕ್ಷಜ್ಞಾನಕ್ಕೆ ಸಂಗತವಾದ (ಹೇತುವಾದ) ಪರೋಕ್ಷಜ್ಞಾನಕ್ಕೆ ಕಾರಣವಾದ ಉಪದೇಶವನ್ನು ಮಾಡಬಹುದೋ ಕೂಡದೋ? ಬಹಿರಂಗವಾಗಿ ಮಾಡಲು ಸಾಧಕವಿದ್ದು ಬಾಧಕವಿಲ್ಲವೋ ಅಥವಾ ಸಾಧಕವಿಲ್ಲದೇ ಬಾಧಕವೇ ಇದೆಯೋ ಎಂದು ಇಲ್ಲಿ ವಿಚಾರ ಮಾಡಲ್ಪಟ್ಟಿವೆ.

**ಪೂರ್ವಪಕ್ಷ** :- ಸಭೆ ಅಂಗಳ ಮುಂತಾದ ಕಡೆ ಬಹಿರಂಗವಾಗಿ ನಿಂತು ಉಪದೇಶ ಮಾಡಿದರೆ ಬಹಳ ಜನರಿಗೆ ಜ್ಞಾನ ಬರುವ ಸಾಧ್ಯತೆ

ಇರುವುದರಿಂದ ಅದರಿಂದ ಫಲಾಧಿಕ್ಯವೂ ಬರುವುದರಿಂದ ಬಾಧವೇನೂ ಇಲ್ಲದೇ ಇರುವುದರಿಂದ ಬಹಿರಂಗವಾಗಿ ಉಪದೇಶ ಮಾಡಬೇಕು.

**ಸಿದ್ಧಾಂತ** :- ಬಹಿರಂಗ ಉಪದೇಶ ಮಾಡಿದರೆ ಯೋಗ್ಯರಂತೆ ಅಯೋಗ್ಯರೂ ಜ್ಞಾನ ಪಡೆಯುವುದರಿಂದ ಅಯೋಗ್ಯರಿಗೆ ಉಪದೇಶ-ವಾದರೂ 'ಮಾನಸ್ತೇನೇಭ್ಯೋ' ಎಂಬ ಶ್ರುತಿಯಿಂದ ನಿಷಿದ್ಧವಾದ ಪ್ರಯುಕ್ತ ಅನರ್ಥಹೇತುತ್ವ ಎಂಬ ಬಾಧಕವಿದೆ. ಫಲಾಧಿಕ್ಯವೆಂಬ ಸಾಧಕವೂ ಇಲ್ಲ. ಗೋಪ್ಯವಾಗಿ ಉಪದೇಶ ಮಾಡಿದಾಗ ಯೋಗ್ಯರಿಗೆ ಮಾತ್ರ ಜ್ಞಾನ ಬರುವುದರಿಂದ ಅನರ್ಥರೂಪ ಬಾಧಕವಿಲ್ಲದೇ ಇರುವುದರಿಂದ ಫಲಾಧಿಕ್ಯ-ವೆಂಬ ಸಾಧಕವೂ ಇರುವುದರಿಂದ ಗೋಪ್ಯವಾಗಿ ಉಪದೇಶ ಮಾಡಬೇಕು. ಜ್ಞಾನದ ಮಹತ್ವ ಸಮರ್ಥನೆಯೇ ಈ ಅಧಿಕರಣದ ಫಲ.

## ॥ ಓಂ ಐಹಿಕಮಪ್ರಸ್ತುತ ಪ್ರತಿಬಂಧೇ ತದ್ದರ್ಶನಾತ್ ಓಂ ॥
## ೩-೪-೧೦

ಪೂರ್ವಾಧಿಕರಣದಲ್ಲಿ ಶಾಸ್ತ್ರಜನ್ಯ ಪರೋಕ್ಷಜ್ಞಾನವು ಅತಿಗೋಪ್ಯ-ವಾಗಿರಬೇಕು ಎಂದು ಅದರ ಪ್ರಕಾರವನ್ನು ಹೇಳಲಾಯಿತು. ಆದರೆ ಅದರಿಂದ ದರ್ಶನರೂಪಫಲವೇ ಆಗದೇ ಇರುವುದರಿಂದ ದರ್ಶನ-ಹೇತುತ್ವವೇ ಇಲ್ಲದಿರುವುದರಿಂದ ಗೋಪ್ಯತ್ವ ಹೇಳಿದ್ದು ಅಯುಕ್ತ ಎಂದು ಶಂಕಿಸುವುದರಿಂದ ಸಂಗತಿ ಇದೆ. ಇಲ್ಲಿ ಪರೋಕ್ಷಜ್ಞಾನದಿಂದ ಸಾಧ್ಯವಾದ ಅಪರೋಕ್ಷಜ್ಞಾನವು ಸಾಧನಪೂರ್ತಿಯಾದ ಜನ್ಮದಲ್ಲೇ ಆಗುತ್ತದೆ ಎಂಬ ನಿಯಮವಿದೆಯೋ ಅಥವಾ ಜನ್ಮಾಂತರದಲ್ಲಿ ಎಂಬ ಅನಿಯಮವೋ? ಸಾಧನಪೂರ್ತಿಯಾದ ಜನ್ಮದಲ್ಲಿ ಆಗದೇ ಇದ್ದರೆ ಯಾವಾಗಲೂ ಆಗದಿರಲಿ ಎಂಬ ಆಪತ್ತಿಯು ಬರುತ್ತದೆಯೋ ಇಲ್ಲವೋ? ಅಪರೋಕ್ಷಜ್ಞಾನದ ಅನಿಯಮಕ್ಕೆ ಪ್ರಮಾಣವಿಲ್ಲವೋ ಇದೆಯೋ? ಎಂಬ ಪ್ರಮೇಯವು ಚರ್ಚಿಸಲ್ಪಟ್ಟಿದೆ. ಶ್ರವಣಾದಿ ಸಾಧನ ಸಂಪೂರ್ತಿ ಜನ್ಮದಲ್ಲಿಯೇ ಅಪರೋಕ್ಷ ಜ್ಞಾನವಾಗುತ್ತದೆ. ಆಗದೇ ಇದ್ದರೆ ಯಾವ ಜನ್ಮದಲ್ಲಿಯೂ ಆಗಲಾರದು. ಯಾಗದ ವಿಷಯದಲ್ಲಿ ಆದರೆ ಯಾಗ ಪೂರ್ತಿಯಾದ ಜನ್ಮದಲ್ಲಿ ಸ್ವರ್ಗ

ಸಿಗುವುದಿಲ್ಲ. ಏಕೆಂದರೆ ಆ ದೇಹಕ್ಕೆ ಸ್ವರ್ಗಸುಖಭೋಗಸಾಧನತ್ವ ಕೂಡುವುದಿಲ್ಲ ಎಂಬ ಪ್ರಬಲ ಕಾರಣವಿದೆ. ಆದರೆ ಇಲ್ಲಿ ಅಂತಹ ಪ್ರಬಲ ಕಾರಣವಿಲ್ಲ. ಆದ್ದರಿಂದ ಆ ಜನ್ಮದಲ್ಲೇ ಆಗಬೇಕು. ಜನ್ಮಾಂತರದಲ್ಲಿ ಅಪರೋಕ್ಷವಾಗುತ್ತದೆ ಎಂಬುದಕ್ಕೆ ಪ್ರಮಾಣವಿಲ್ಲ.

**ಸಿದ್ಧಾಂತ** :- ಯಾಗ ಸಾಧನವಾದ ದೇಹಕ್ಕೆ ಸ್ವರ್ಗಸುಖಭೋಗ ಯೋಗ್ಯತ್ವ ಇಲ್ಲ ಎಂಬಂತೆ ಪರೋಕ್ಷಜ್ಞಾನ ಉಂಟಾದ ಜನ್ಮದಲ್ಲಿಯೇ ಅಪರೋಕ್ಷಜ್ಞಾನವುಂಟಾಗಲು ಪ್ರಾರಬ್ಧಕರ್ಮಪ್ರತಿಬಂಧ ಎಂಬ ಪ್ರಬಲ-ಕಾರಣ ಇರುವುದರಿಂದ ಆ ಜನ್ಮದಲ್ಲಿ ಉಂಟಾಗದಿದ್ದರೆ ಮತ್ತೊಂದು ಜನ್ಮದಲ್ಲಿ ಅಪರೋಕ್ಷ ಉಂಟಾಗುತ್ತದೆ. ಪ್ರಾರಬ್ಧ ಇಲ್ಲದಿದ್ದರೆ ಅದೇ ಜನ್ಮದಲ್ಲಿ ಎಂದು ಅನಿಯಮವನ್ನೇ ಹೇಳಬೇಕು. ಇದಕ್ಕೆ 'ಶ್ರುತ್ವಾತ್ಮಾನಂ ಮತಿಪೂರ್ವಂ ಹ್ಯುಪಾಸ್ಯ ಇಹೈವ ದೃಷ್ಟಿಂ ಪರಮಸ್ಯ ವಿಂದೇತ್' ಎಂಬ ಶ್ರುತಿಯೇ ಪ್ರಮಾಣ. ಶ್ರವಣಾದಿಗಳು ಅಪರೋಕ್ಷಕ್ಕೆ ಕಾರಣವಾಗಿವೆ ಎಂಬುದನ್ನು ಸಮರ್ಥನೆ ಮಾಡುವುದೇ ಈ ಅಧಿಕರಣದ ಫಲ.

## ॥ ಓಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದವ-ಸ್ಥಾವಧೃತೇಃ ಓಂ ॥ ೩-೪-೧೧

ಹೇಗೆ ಅಪರೋಕ್ಷಜ್ಞಾನವು ಪರೋಕ್ಷಜ್ಞಾನಜನ್ಮದಲ್ಲಿಯೇ ಎಂಬ ನಿಯಮವೇನೂ ಇಲ್ಲ ಎಂದು ಸಮರ್ಥಿಸಲಾಯಿತೋ ಅದರಂತೆ ಮೋಕ್ಷವೆಂಬ ಫಲವೂ ಕೂಡ ಅಪರೋಕ್ಷಜ್ಞಾನ ಪಡೆದ ದೇಹಪತನಾನಂತರವೇ ಎಂಬ ನಿಯಮವಿಲ್ಲ. ಅಪರೋಕ್ಷಜ್ಞಾನಸಾಧ್ಯವಾದ ಮೋಕ್ಷವು ಅಪರೋಕ್ಷ-ಪಡೆದ ದೇಹಪತನಾನಂತರವೇ ಎಂಬ ನಿಯಮವಿದೆಯೋ ಅಥವಾ ಅನಿಯಮವೋ? ಇತ್ಯಾದಿಯಾಗಿ ಹಿಂದಿನಂತೆ ಚಿಂತಾಪರಂಪರೆ ಮತ್ತು ಸಿದ್ಧಾಂತಗಳನ್ನು ತಿಳಿಯಬೇಕು. ವಿಶೇಷವೇನೆಂದರೆ ಜ್ಞಾನಸಾಧನ-ಪೂರ್ತಿಯಾದ ಜನ್ಮದಲ್ಲಿ ಜ್ಞಾನೋದಯ ಅಥವಾ ಜನ್ಮಾಂತರದಲ್ಲಿ ಎಂಬ ಅನಿಯಮಕ್ಕೆ ಪ್ರಾರಬ್ಧಪ್ರತಿಬಂಧರೂಪ ಕಾರಣವಿರುವಂತೆ ಮೋಕ್ಷರೂಪ-

ಫಲವಿಷಯದಲ್ಲಿಯೂ ಅನಿಯಮವನ್ನು ಕಲ್ಪಿಸುವುದಕ್ಕೆ ಪ್ರಾರಬ್ಧ-ಪ್ರತಿಬಂಧರೂಪ ಕಾರಣವಿದೆ ಎಂದು ಕಲ್ಪಿಸಲು ಪ್ರಮಾಣವಿಲ್ಲ ಎಂದು ವಿಶೇಷ ಶಂಕೆಯು ಉಂಟಾದಾಗ 'ಬ್ರಹ್ಮಸಂಸ್ಥೋಽಮೃತಮೇತಿ' ಎಂಬುದಾಗಿ ಅಪರೋಕ್ಷಜ್ಞಾನಿಗಳಿಗೆ ಮೋಕ್ಷ ಆಗಿಯೇ ಆಗುತ್ತದೆ ಎಂದು ಹೇಳಿದ್ದಾರೆ. ಒಂದು ವೇಳೆ ಜ್ಞಾನಜನ್ಮದಲ್ಲಿ ಆಗದೇ ಇದ್ದರೆ ಇದನ್ನು ಕೂಡಿಸಲು ಪ್ರತಿ-ಬಂಧಕವನ್ನು ಕಲ್ಪನೆ ಮಾಡಬೇಕಾಗುತ್ತದೆ ಎಂಬ ಅನ್ಯಥಾನುಪಪತ್ತಿಯೂ ಮತ್ತು 'ವಿದ್ವಾನಮೃತಮಾಪ್ನೋತಿ.. ಅವಸನ್ನಂ ಯದಾರಬ್ಧಂ ಕರ್ಮ ತತ್ರೈವ ಗಚ್ಛತಿ. ನ ಚೇದ್ಬಹೂನಿ ಜನ್ಮಾನಿ ಪ್ರಾಪ್ಯೈವ ಅಂತೇ ನ ಸಂಶಯಃ' ಎಂಬ ಸ್ಮೃತಿಯೂ ಪ್ರಮಾಣವಾಗಿದೆ. ಆದ್ದರಿಂದ ಪ್ರತಿಬಂಧಕವಿಲ್ಲದಿದ್ದರೆ ಜ್ಞಾನ-ದೇಹಪಾತಾನಂತರವೇ ಮೋಕ್ಷ. ಇಲ್ಲದಿದ್ದರೆ ದೇಹಾಂತರದಲ್ಲಿ ಎಂಬುದಾಗಿ ತಿಳಿಯಬೇಕು. 'ಅನಿಯಮಃ' ಎಂಬ ಅಧಿಕರಣದಲ್ಲಿ ಹೇಳಲ್ಪಟ್ಟ ಅನಿಯಮದ ಸಮರ್ಥನೆಯೇ ಈ ಅಧಿಕರಣದ ಫಲ.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ಮೂರನೆಯ ಅಧ್ಯಾಯದ ನಾಲ್ಕನೆಯ ಪಾದವು ಸಮಾಪ್ತವಾಯಿತು.**

# ನಾಲ್ಕನೆಯ ಅಧ್ಯಾಯದ ಮೊದಲನೆಯ ಪಾದ

ಹಿಂದಿನ ಪಾದದ ಕೊನೆಯ ಸೂತ್ರವಾದ 'ಏವಂ ಮುಕ್ತಿಫಲಾನಿಯಮ...' ಎಂಬಲ್ಲಿ ಫಲಪದದಿಂದ, ಜ್ಞಾನದ ಪ್ರಧಾನ ಫಲ ಮುಕ್ತಿಯೇ. ಉಳಿದದ್ದು ಆನುಷಂಗಿಕವಾದ ಫಲ ಎಂದು ಸೂಚನೆ ಮಾಡಲಾಗಿದೆ. ಈ ಅಧ್ಯಾಯದಲ್ಲಿ ಪ್ರಧಾನ ಫಲವಾದ ಮೋಕ್ಷದ ವಿಚಾರವನ್ನೇ ವಿಸ್ತಾರವಾಗಿ ಮಾಡಲಾಗುತ್ತದೆ. ಮೋಕ್ಷವು ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ ಎಂಬುದಾಗಿ ನಾಲ್ಕು ವಿಧ. ಈ ನಾಲ್ಕೂ ಕ್ರಮವಾಗಿಯೇ ಆಗುವುದು. ಹಾಗಾಗಿ ಇದೇ ಕ್ರಮದಲ್ಲಿ ಈ ಅಧ್ಯಾಯದ ನಾಲ್ಕು ಪಾದಗಳಲ್ಲಿ ಒಂದೊಂದಾಗಿ ವಿಚಾರ ಮಾಡಲಿದ್ದಾರೆ. ಮೊದಲಿಗೆ ಈ ಪಾದದಲ್ಲಿ ಕರ್ಮಕ್ಷಯ ಎಂಬ ಫಲದ ವಿಚಾರ ಮಾಡ-ಲಾಗುತ್ತಿದೆ. ಮೊದಲ ಏಳು ಅಧಿಕರಣಗಳಲ್ಲಿ ಮೋಕ್ಷಕ್ಕೆ ಅತ್ಯಂತ ಆವಶ್ಯಕ ವಾದ ಸಾಧನೆಗಳ ವಿಚಾರ ಮಾಡಲಾಗುತ್ತದೆ.

## ॥ ಓಂ ಆವೃತ್ತಿರಸಕೃದುಪದೇಶಾತ್ ಓಂ ॥ ೪-೧-೧

'ಐಹಿಕಮಪ್ರಸ್ತುಪ್ರತಿಬಂಧೇ...' ಎಂಬಲ್ಲಿ ಬಂದಿರುವ ಶ್ರವಣಾದಿಗಳನ್ನು ಒಮ್ಮೆ ಅನುಷ್ಠಾನ ಮಾಡಬೇಕೋ ಅಥವಾ ಆವರ್ತನೆ ಮಾಡಬೇಕೋ? ಶ್ರವಣಾದಿವಿಧಿಗಳಿಗೆ ಅಗ್ನಿಷ್ಟೋಮಾದಿ ವಿಧಿಗಳಂತೆ ಒಮ್ಮೆ ಅನುಷ್ಠಾನ ಮಾಡಿದರೆ ಪರ್ಯವಸಾನವಿದೆಯೋ ಅಥವಾ ಅವಘಾತಾದಿ ವಿಧಿಗಳಂತೆ ಆವರ್ತನವು ಆವಶ್ಯಕವೋ? ಶ್ರವಣಾದಿಗಳ ಸಕೃದನುಷ್ಠಾನದಿಂದ ಜ್ಞಾನವು ಲಭಿಸುತ್ತದೋ ಅಥವಾ ಇಲ್ಲವೋ? ಜ್ಞಾನವು ಸುಶಕ (ಸುಖಸಾಧ್ಯ) ಎಂಬುದು ಅದರ ಗುಣವೋ ಅಥವಾ ದುಃಶಕತ್ವವೇ ಅದರ ಗುಣವೋ? ದುಃಶಕತ್ವಕ್ಕೆ ಗುಣತ್ವವನ್ನು ಹೇಳುವುದಕ್ಕೆ ಕಲ್ಪಕ ಇಲ್ಲವೋ ಅಥವಾ ಇದೆಯೋ? ಹೀಗೆ ಪರಪರ ಸಂಗತವಾದ ವಿಚಾರಗಳು ಬಂದಿವೆ.

ಶ್ರವಣಾದಿ ಸಾಧನಗಳನ್ನು ಅಗ್ನಿಷ್ಠೋಮಾದಿ ಯಾಗಗಳಂತೆ ಒಮ್ಮೆ ಅನುಷ್ಠಾನ ಮಾಡಿದರೆ ಸಾಕು ಎಂದೇ ಪೂರ್ವಪಕ್ಷ. ಏಕೆಂದರೆ, ಒಮ್ಮೆ ಅನುಷ್ಠಾನ ಮಾಡುವುದರಿಂದಲೇ ಜ್ಞಾನವು ಲಭಿಸುವುದರಿಂದ ಸಕೃದನು-ಷ್ಠಾನದಿಂದಲೇ ಶ್ರವಣಾದಿವಿಧಿಗಳಿಗೆ ಪರ್ಯವಸಾನ (ಸಾಫಲ್ಯ)ವಿದೆ.

**ಪ್ರಶ್ನೆ** :- 'ವ್ರೀಹೀನ್ ಅವಹಂತಿ' ಇತ್ಯಾದಿ ವಿಧಿಗಳಲ್ಲಿ ಸಕೃದನು-ಷ್ಠಾನದಿಂದಲೇ 'ತುಷವಿಮೋಕ' ಇತ್ಯಾದಿ ಫಲ ಸಿದ್ಧಿಸುವುದಿಲ್ಲ. ಹಾಗಾಗಿ ಅಪಘಾತದ ಆವರ್ತನೆ ಆವಶ್ಯಕ. ಅದರಂತೆ ಇಲ್ಲಿಯೂ ಕೂಡ ಶ್ರವಣಾದಿಗಳ ಆವರ್ತನೆಯನ್ನು ಏಕೆ ಹೇಳಬಾರದು?

**ಉತ್ತರ** :- ಆವರ್ತನೆಯನ್ನು ಒಪ್ಪಿದರೆ ಆಗ ಜ್ಞಾನಕ್ಕೆ ಸುಶಕತ್ವ ಎಂಬ ಗುಣ ಪ್ರಾಪ್ತವಾಗುವುದಿಲ್ಲ. ಸುಶಕತ್ವ ಎಂದರೆ ಸಕೃದನುಷ್ಠಾನದಿಂದಲೇ ಲಭ್ಯ ವಾಗುವುದು ಎಂದರ್ಥ. ಜ್ಞಾನಕ್ಕೆ ದುಃಶಕತ್ವವೇ ಗುಣ ಎನ್ನಬಾರದು. ಏಕೆಂದರೆ ಹಾಗೆ ಹೇಳಲು ಯಾವುದೇ ಕಲ್ಪಕ (ಪ್ರಮಾಣ)ವಿಲ್ಲ.

**ಸಿದ್ಧಾಂತ** :- ಶ್ರವಣಾದಿಗಳು ಅವಘಾತಾದಿಗಳಂತೆ ಆವರ್ತನೀಯವೇ ಆಗಿದೆ. ಹೇಗೆ ಅವಘಾತವನ್ನು ಒಮ್ಮೆ ಮಾಡಿದರೆ ತುಷವಿಮೋಕ (ಹೊಟ್ಟು ತೊಲಗುವುದು) ಎಂಬ ಫಲ ಸಿಗುವುದಿಲ್ಲವೋ ಹಾಗೆ ಶ್ರವಣಾದಿಗಳ ಸಕೃದನುಷ್ಠಾನದಿಂದ ಜ್ಞಾನವು ಲಭಿಸುವುದಿಲ್ಲ. ಹಾಗಾಗಿ ಅವಘಾತವಿಧಿ-ಯಂತೆ ಶ್ರವಣಾದಿವಿಧಿಗಳ ಪರ್ಯವಸಾನವು ಆವರ್ತನದಿಂದಲೇ ಆಗುತ್ತದೆ.

ಶ್ರವಣಾದಿಗಳ ಆವರ್ತನದಿಂದ ಜ್ಞಾನವು ಲಭಿಸುವುದಾದರೆ ಆಗ ಜ್ಞಾನಕ್ಕೆ ಸುಶಕತ್ವ ಎಂಬ ಗುಣ ಬರುವುದಿಲ್ಲವಲ್ಲಾ ಎಂದರೆ, ಜ್ಞಾನವು ಮಹಾಫಲಕ್ಕೆ ಕಾರಣವಾದ್ದರಿಂದ ದುಃಶಕತ್ವವೇ ಅದರ ಗುಣ. ಜ್ಞಾನಕ್ಕೆ ದುಃಶಕತ್ವವೇ ಗುಣ ಎಂದು ಒಪ್ಪಿ ಶ್ರವಣಾದಿಗಳಿಗೆ ಆವರ್ತನವನ್ನು ಸಾಧನೆ ಮಾಡುವುದಕ್ಕೆ ಕಲ್ಪಕವಿಲ್ಲ ಎನ್ನಬಾರದು. ಏಕೆಂದರೆ, ತತ್ತ್ವಜ್ಞಾನವು ಕಷ್ಟಸಾಧ್ಯವಾದ್ದರಿಂದಲೇ ಉದ್ದಾಲಕನು ಶ್ವೇತಕೇತುವಿಗೆ 'ಸ ಯ ಏಷೋಽಣಿಮಾ' ಇತ್ಯಾದಿ ತತ್ತ್ವಗಳನ್ನು ಒಂಬತ್ತು ಬಾರಿ ಉಪದೇಶ ಮಾಡಿದ್ದು ಛಾಂದೋಗ್ಯದ ಆರನೇ ಅಧ್ಯಾಯದಲ್ಲಿ ಕಂಡಿದೆ.ಜ್ಞಾನವು ದುಃಶಕ ಎಂದು ಒಪ್ಪದೇ ಅನೇಕ ಬಾರಿ ಉಪದೇಶ ಮಾಡಿದ್ದನ್ನು ಕೂಡಿಸಲಿಕ್ಕೇ ಬರುವುದಿಲ್ಲ. ಈ ಅನ್ಯಥಾನು-ಪಪತ್ತಿಯೇ ಶ್ರವಣಾವೃತ್ತಿಗೆ ಕಲ್ಪಕ. ಜ್ಞಾನವು ಸುಶಕವಾಗಿದ್ದರೆ ಒಂದೇ ಬಾರಿ ಉಪದೇಶಮಾಡುಬೇಕಾಗಿತ್ತು. ಇನ್ನು ತೈತ್ತಿರೀಯ ಭೃಗುವಲ್ಲಿಯಲ್ಲೂ ಕೂಡ ಇದೇ ವಿಷಯ ಬಂದಿದೆ. 'ತಸ್ಮಾ ಏತತ್ ಪ್ರೋವಾಚ ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋ ವಾಚಮಿತಿ' ಎಂಬಲ್ಲಿ ಅನ್ನಾದಿಗಳನ್ನು ಉಪದೇಶ

ಮಾಡಿದರೂ ಪುನಃ ಅನ್ನಾದಿ ರೂಪ ವಿಶೇಷಗಳಲ್ಲೇ ಭೃಗುವು 'ಅಧೀಹಿ ಭಗವೋ ಬ್ರಹ್ಮೇತಿ' ಎಂದು ಪ್ರಶ್ನೆ ಮಾಡುತ್ತಾನೆ. ಅದಕ್ಕೆ ವರುಣನು ಅನ್ನಾದಿಗಳನ್ನು ಬ್ರಹ್ಮ ಎಂದು ಉಪದೇಶ ಮಾಡಿ 'ತದ್ವಿಜಿಜ್ಞಾಸಸ್ವ' ಎಂಬುದಾಗಿ ಮನನಧ್ಯಾನಗಳನ್ನು ಮಾಡೆಂದು ಉಪದೇಶಿಸುತ್ತಾನೆ. ಹೀಗೆ ಶ್ರುತವಾದ ವಿಷಯದಲ್ಲೇ ಮನನಧ್ಯಾನಗಳಿಂದ ಅಪರೋಕ್ಷವನ್ನು ಹೊಂದಿರುವುದು ತಿಳಿಯುತ್ತಿದೆ. ಇದೂ ಕೂಡ ಶ್ರವಣಾದ್ಯಾವೃತ್ತಿಗೆ ಕಲ್ಪಕ-ವಾಗಿದೆ (ಉದ್ದಾಲಕ ಶ್ವೇತಕೇತುವಿನ ದೃಷ್ಟಾಂತ ಶ್ರವಣಾವೃತ್ತಿಗೆ ಕಲ್ಪಕವಾದರೆ, ಭೃಗುವರುಣ ದೃಷ್ಟಾಂತವು ಶ್ರವಣಾದಿತ್ರಯಾವೃತ್ತಿಗೆ ಕಲ್ಪಕವಾಗಿದೆ). ಇನ್ನು 'ನಿತ್ಯತಃ ಶ್ರವಣಂ ಚೈವ...' ಎಂಬ ಸ್ಮೃತಿಯೂ ಕೂಡ ಶ್ರವಣಾದಿಗಳ ಆವೃತ್ತಿ ಮಾಡಬೇಕು ಎಂಬುದಕ್ಕೆ ಪ್ರಮಾಣವಾಗಿದೆ.

ಅಧಿಕರಣ ಫಲ :- 'ಐಹಿಕಮಪ್ರಸ್ತುತಪ್ರತಿಬಂಧೇ ತದ್ದರ್ಶನಾತ್' ಎಂಬಲ್ಲಿ ಶ್ರವಣಾದಿಗಳು ಜ್ಞಾನಕ್ಕೆ ಕಾರಣ ಎಂಬುದು ಅಭಿಮತವಾಗಿದೆ. ಶ್ರವಣಾದಿಗಳ ಆವೃತ್ತಿಯನ್ನು ಹೇಳುವುದರ ಮೂಲಕ ಅದರ ಸಮರ್ಥ-ನೆಯನ್ನೇ ಇಲ್ಲಿ ಮಾಡಲಾಗಿದೆ. (ಸಕೃದನುಷ್ಠಾನದಿಂದ ಫಲ ಕಂಡಿಲ್ಲ. ಹಾಗಾಗಿ ಶ್ರವಣಾದಿಗಳು ಜ್ಞಾನಸಾಧನವೇ ಅಲ್ಲ ಎಂಬ ಶಂಕಾ ಬರುತ್ತದೆ. ಅದರ ನಿವಾರಣೆಯನ್ನು ಆವೃತ್ತಿ ಸಮರ್ಥನೆಯಿಂದ ಇಲ್ಲಿ ಮಾಡಲಾಗಿದೆ.)

## ॥ ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ ॥
## ೪-೧-೨

ಹಿಂದೆ, ಜ್ಞಾನಕ್ಕಾಗಿ ಶ್ರವಣಾದಿಗಳು ಆವಶ್ಯಕ ಎಂದು ಹೇಳಿದೆ. ಇಲ್ಲಿ ಅಂತಹ ಆವೃತ್ತಿಗೆ ವಿಷಯವಾದ ಸ್ವಾಮಿತ್ವ ಎಂಬ ಆತ್ಮತ್ವದ ಧ್ಯಾನವು ಆವಶ್ಯಕ ಎಂದು ಸಮರ್ಥನೆ ಮಾಡುತ್ತಿರುವುದರಿಂದ ಸಂಗತಿಯಿದೆ.

ಪ್ರಕೃತವಾದ ಆತ್ಮತ್ವದ ಉಪಾಸನಾ ಉಪದೇಶಗಳನ್ನು ನಿತ್ಯದಲ್ಲೂ ಮಾಡಬೇಕಿಲ್ಲವೋ ಅಥವಾ ಮಾಡಬೇಕೋ? ಆತ್ಮತ್ವ ಎಂದರೆ ಸ್ವಾಮಿತ್ವ. ಇದು ಅತಿಪ್ರಸಿದ್ಧವಾಗಿದೆ. ಈ ಅತಿಪ್ರಸಿದ್ಧಿಯೇ ಆತ್ಮತ್ವೋಪಾಸನಾದಿಗಳಿಗೆ

ಪ್ರತಿಬಂಧಕವಾಗಿದೆಯೋ ಅಥವಾ ಇಲ್ಲವೋ? ಅತಿಪ್ರಸಿದ್ಧತ್ವವು ಪ್ರತಿ-ಬಂಧಕವಲ್ಲ ಎನ್ನುವುದಕ್ಕೆ ಕಲ್ಪಕ ಇಲ್ಲವೋ ಅಥವಾ ಇದೆಯೋ? ಹೀಗೆ ಪರಸ್ಪರ ಕಾರ್ಯಕಾರಣಭಾವೋಪೇತವಾದ ವಿಚಾರಗಳು ಬಂದಿವೆ.

ಆತ್ಮತ್ವೋಪಾಸನಾ ಉಪದೇಶಗಳನ್ನು ನಿತ್ಯದಲ್ಲಿಯೂ ಮಾಡಬೇಕಿಲ್ಲ ಎಂದೇ ಪೂರ್ವಪಕ್ಷ. ಆತ್ಮತ್ವ ಎಂದರೆ ಸ್ವಾಮಿತ್ವ. ಇದು ಯಾವಾಗಲೂ ಪ್ರಸಿದ್ಧವೇ ಆಗಿದೆ. ಸುಪ್ರಸಿದ್ಧವಾದ ವಿಷಯವು ಯಾವಾಗಲೂ ಎಲ್ಲರ ಮನಸ್ಸಿನಲ್ಲೂ ಇರುವುದರಿಂದ ಅದರ ಧ್ಯಾನ ಉಪದೇಶ ವ್ಯರ್ಥವೇ ಆಗಿದೆ. ಯಾವುದು ಅಪ್ರಸಿದ್ಧವೋ ಅದನ್ನೇ ಉಪದೇಶ ಮಾಡಬೇಕು. ಅದನ್ನೇ ಉಪಾಸಿಸಬೇಕು. ಸುಪ್ರಸಿದ್ಧವಾದರೂ ಅಂತಹ ವಿಷಯದ ಧ್ಯಾನೋಪ-ದೇಶಗಳನ್ನುಅವಶ್ಯವಾಗಿ ಮಾಡಬೇಕು ಎನ್ನುವುದಕ್ಕೆ ಯಾವುದೇ ಕಲ್ಪಕವಿಲ್ಲ.

**ಸಿದ್ಧಾಂತ :-** ಆತ್ಮತ್ವೋಪಾಸನಾದಿಗಳನ್ನು ನಿತ್ಯದಲ್ಲಿಯೂ ಮಾಡಲೇ ಬೇಕು. ಏಕೆಂದರೆ, 'ಆತ್ಮೇತ್ಯುಪಾಸನಂ ಕಾರ್ಯಂ ಸರ್ವಥೈವ ಮುಮುಕ್ಷುಭಿಃ' ಎಂಬ ವಾಕ್ಯದಿಂದ ಅನ್ವಯ ವ್ಯತಿರೇಕ ಸಿದ್ಧವಾಗುತ್ತಿದೆ (ಆತ್ಮತ್ವೋಪಾಸನೆ ಮಾಡಿದರೆ ಮೋಕ್ಷ, ಇಲ್ಲದಿದ್ದರೆ ಇಲ್ಲ). ಈ ಅನ್ವಯ-ವ್ಯತಿರೇಕದಿಂದ ವಿಷ್ಣುಃ ಆತ್ಮಾ ಎಂಬ ಉಪಾಸನಾ ಉಪದೇಶಗಳಿಗೂ ಮೋಕ್ಷಕ್ಕೂ ಕಾರ್ಯಕಾರಣಭಾವ ಸಿದ್ಧವಾಗುತ್ತದೆ. ಮೋಕ್ಷಹೇತುವಾದ ಉಪಾಸನೆಯಲ್ಲಿ ಪ್ರಸಿದ್ಧಿ ಅಪ್ರಸಿದ್ಧಿಗಳು ಅಪ್ರಯೋಜಕ. ಅದರಿಂದ ಕರ್ತವ್ಯತ್ವ ಅಕರ್ತವ್ಯತ್ವವು ಸಿದ್ಧಿಸುವುದಿಲ್ಲ. ಆತ್ಮತ್ವೋಪಾಸನೆಯು ಮೋಕ್ಷ-ಹೇತುವಾದ್ದರಿಂದ ನಿತ್ಯದಲ್ಲಿಯೂ ಸರ್ವಥಾ (ಯಾವುದೇ ಕಷ್ಟ ಬಂದರೂ) ಆತ್ಮತ್ವದ ಉಪಾಸನಾ ಉಪದೇಶಗಳನ್ನು ಮಾಡಲೇಬೇಕು.

**ಅಧಿಕರಣ ಫಲ :-** ಭಗವಂತನ ಸ್ವಾಮಿತ್ವವನ್ನು ಹೇಳುವುದರಲ್ಲೇ ವೇದಗಳ ಮಹಾತಾತ್ಪರ್ಯ. ಅದು ಯುಕ್ತ ಎಂದು ಇಲ್ಲಿ ಸಮರ್ಥನೆ ಮಾಡಲಾಗಿದೆ.

## || ಓಂ ನ ಪ್ರತೀಕೇ ನ ಹಿ ಸಃ ಓಂ || ೪-೧-೩

ಹಿಂದೆ ಹೇಳಿದ ಸ್ವಾಮಿತ್ವೋಪಾಸನೆಯ ಮೇಲಿನ ಆಕ್ಷೇಪದಿಂದ ಇಲ್ಲಿ ಪೂರ್ವಪಕ್ಷ ಹುಟ್ಟುತ್ತಿರುವುದರಿಂದ ಸಂಗತಿಯಿದೆ.

ಛಾಂದೋಗ್ಯದ ಏಳನೇ ಅಧ್ಯಾಯದಲ್ಲಿ 'ನಾಮ ಬ್ರಹ್ಮೇತ್ಯುಪಾಸ್ತೇ', 'ವಾಚಂ ಬ್ರಹ್ಮೇತ್ಯುಪಾಸ್ತೇ' ಇತ್ಯಾದಿ ವಾಕ್ಯಗಳಲ್ಲಿ ಶ್ರುತರಾದ ನಾಮ, ವಾಕ್ ಇತ್ಯಾದಿ ಶಬ್ದವಾಚ್ಯರಾದ ಉಷಾ, ಸ್ವಾಹಾ ಮೊದಲಾದವರನ್ನು ಬ್ರಹ್ಮನಿಂದ ಅಭಿನ್ನರು ಎಂದು ಉಪಾಸನೆ ಮಾಡಬೇಕೋ ಅಥವಾ ನಾಮಾದಿಗಳಲ್ಲಿ ಬ್ರಹ್ಮ ಎಂಬ ತತ್ರಸ್ಥತ್ವ ರೂಪವಾಗಿ ಉಪಾಸನೆ ಮಾಡಬೇಕೋ? 'ನಾಮ ಬ್ರಹ್ಮೇತ್ಯುಪಾಸ್ತೇ' ಮೊದಲಾದ ಶ್ರುತಿಗಳಿಗೆ ಐಕ್ಯವು ಅಭಿಪ್ರೇತವಾಗಿದೆಯೋ ಅಥವಾ 'ನಾಮ್ನಿ ಬ್ರಹ್ಮ' ಎಂಬುದಾಗಿ ತತ್ರಸ್ಥತ್ವವು ಶ್ರುತಿಯ ಅಭಿಪ್ರಾಯವೋ? ಮಿಥ್ಯೋಪಾಸನೆಯು ಪುರುಷಾರ್ಥ ಹೇತುವಾಗುತ್ತದೋ ಅಥವಾ ಸತ್ಯೋಪಾಸನೆಯು ಮಾತ್ರ ಪುರುಷಾರ್ಥಹೇತುವೋ? ಎಂದು ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

ನಾಮಾದಿಗಳನ್ನು ಬ್ರಹ್ಮಾಭಿನ್ನರು ಎಂದೇ ಉಪಾಸನೆ ಮಾಡಬೇಕು. ಇದೇ ಪೂರ್ವಪಕ್ಷ. ಏಕೆಂದರೆ, 'ನಾಮ ಬ್ರಹ್ಮ....' ಎಂಬುದಾಗಿ ಶ್ರುತಿಯಲ್ಲಿ ಸಾಮಾನಾಧಿಕರಣ್ಯವು (ಸಮಾನ ವಿಭಕ್ತಿಕತ್ವ)ಶ್ರುತವಿದೆ. ಹಾಗಾಗಿ ಐಕ್ಯವೇ ಶ್ರುತಿಯ ಅಭಿಪ್ರಾಯವೆಂದು ತಿಳಿಯುತ್ತದೆ.

**ಪ್ರಶ್ನೆ** :- 'ಪೃಥಗುಪದೇಶಾತ್' ಎಂಬಲ್ಲಿ ಜೀವಬ್ರಹ್ಮರಿಗೆ ಭೇದವನ್ನು ಸಾಧನೆ ಮಾಡಲಾಗಿದೆ. ಹಾಗಾಗಿ ನಾಮಬ್ರಹ್ಮರಿಗೆ ಐಕ್ಯ ಎಂಬುದು ಮಿಥ್ಯಾ (ಅಂತಹ ಉಪಾಸನೆಯು ಮಿಥ್ಯೋಪಾಸನೆಯಾಗುವುದಿಲ್ಲವೇ)?

**ಪರಿಹಾರ** :- ಹಿಂದೆ ಆತ್ಮತ್ವೋಪಾಸನೆಯ ವಿಚಾರ ಮಾಡುವಾಗ ಪ್ರಸಿದ್ಧಿ ಅಪ್ರಸಿದ್ಧಿಗಳು ಅಪ್ರಯೋಜಕ. ಪುರುಷಾರ್ಥಹೇತುತ್ವವೇ ಪ್ರಯೋಜಕ. ಹಾಗಾಗಿ ಪ್ರಸಿದ್ಧವಾದರೂ ಆತ್ಮತ್ವೋಪಾಸನೆಯನ್ನು ಮಾಡಬೇಕು ಎಂದು ಹೇಳಿದಂತೆ ಇಲ್ಲಿಯೂ ಕೂಡ ಹಾಗೇ ಹೇಳಬಹುದು. ಉಪಾಸ್ಯವಾದ ವಸ್ತುವು ಸತ್ಯವೋ ಮಿಥ್ಯಾನೋ ಎಂಬುದು ಅಪ್ರಯೋಜಕ. ಪ್ರಯೋಜನವಿದ್ದರೆ

ಸಾಕು. ಅಂತಹ ಉಪಾಸನೆ ಮಾಡಬೇಕು. ಪ್ರಕೃತದಲ್ಲಿ 'ಯಾವನ್ನಾಮ್ನೋ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ' ಎಂಬುದಾಗಿ ವಾಕ್ಯಶೇಷದಲ್ಲಿ ಫಲವು ಶ್ರುತವಾಗಿದೆ.

**ಸಿದ್ಧಾಂತ :-** ತತ್ರಸ್ಥತ್ವದ ಉಪಾಸನೆಯನ್ನೇ ಮಾಡಬೇಕು. ಏಕೆಂದರೆ, 'ಅಚೇತನಾಸತ್ಯಾಯೋಗ್ಯಾನ್ಯನುಪಾಸ್ಯಾನ್ಯ ಫಲತ್ವವಿಪರ್ಯ-ಯಾಭ್ಯಾಮ್' ಎಂಬ ಸಾಂಕರ್ಷಣ ..... ಸೂತ್ರದಲ್ಲಿ ಹಾಗು ಅನು-ವ್ಯಾಖ್ಯಾನದಲ್ಲಿ ಹೇಳಿರುವ ಪ್ರಮಾಣಗಳಲ್ಲಿಯೂ ಮಿಥ್ಯೋಪಾಸನೆಯು ಫಲಪ್ರದವಲ್ಲ. ಅದರ ಬದಲಾಗಿ ವಿರುದ್ಧ ಫಲವನ್ನೇ ಕೊಡುತ್ತದೆ ಎಂದು ಹೇಳಿದೆ. ಹಾಗಾಗಿ ಮಿಥ್ಯೋಪಾಸನೆಯು ಪುರುಷಾರ್ಥಹೇತುವಲ್ಲವೆಂದು ಸಿದ್ಧವಾಗುತ್ತದೆ. ಆದ್ದರಿಂದಲೇ ಮಿಥ್ಯೋಪಾಸನೆಯನ್ನು ಮಾಡಬಾರದು.

ಇನ್ನು 'ನಾಮಾದಿಪ್ರಾಣಪರ್ಯಂತಂ' ಎಂಬ ಸ್ಮೃತಿಯೂ ಕೂಡ ಐಕ್ಯೋಪಾಸನೆಯನ್ನು ಮಿಥ್ಯಾ ಎಂದು ಹೇಳುತ್ತದೆ. ಹಾಗಾಗಿ 'ನಾಮ್ನಿ ಬ್ರಹ್ಮ' ಎಂಬುದಾಗಿ ತತ್ರಸ್ಥತ್ವದ ಉಪಾಸನೆಯನ್ನು ಮಾಡಬೇಕೇ ಹೊರತು ಐಕ್ಯೋಪಾಸನೆಯನ್ನು ಮಾಡಬಾರದು.

**ಅಧಿಕರಣ ಫಲ :-** ಹಿಂದೆ ಹೇಳಿದ ಆತ್ಮತ್ವೋಪಾಸನೆಯ ಸಮರ್ಥನೆ ಯನ್ನೇ ಇಲ್ಲಿ ಮಾಡಲಾಗಿದೆ (ಐಕ್ಯೋಪಾಸನೆಯನ್ನು ನಿರಾಕರಣೆ ಮಾಡಿದರೆ ಮಾತ್ರ ಸ್ವಾಮಿತ್ವೋಪಾಸನೆ ಕೂಡುತ್ತದೆ. ಅದನ್ನೇ ಇಲ್ಲಿ ಮಾಡಲಾಗಿದೆ).

## ॥ ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ ॥ ೪-೧-೪

ಹಿಂದೆ 'ನಾಮ ಬ್ರಹ್ಮೇತ್ಯುಪಾಸ್ತೇ' ಎಂದು ಪ್ರಕೃತವಾದ ಬ್ರಹ್ಮತ್ವದ ಉಪಾಸನೆಯು ಆವಶ್ಯಕ ಎಂದು ಇಲ್ಲ ಸಾಧನೆ ಮಾಡುತ್ತಿರುವುದರಿಂದ ಸಂಗತಿಯಿದೆ. ಪ್ರಕೃತವಾದ ಬ್ರಹ್ಮತ್ವದ ಉಪಾಸನೆಯನ್ನು ಸದಾ ಸರ್ವಥಾ ಮಾಡಬೇಕಿಲ್ಲವೋ ಅಥವಾ ಮಾಡಬೇಕೋ? ಬ್ರಹ್ಮತ್ವವನ್ನು ಸದಾ ಸರ್ವಥಾ ಉಪಾಸನೆ ಮಾಡಬೇಕು ಎಂಬುದಕ್ಕೆ ಕಾರಣವಿಲ್ಲವೋ ಅಥವಾ ಇದೆಯೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ. ಬ್ರಹ್ಮತ್ವವನ್ನು ಸದಾ ಸರ್ವಥಾ ಉಪಾಸಿಸಬೇಕಿಲ್ಲ ಎಂಬುದೇ ಪೂರ್ವಪಕ್ಷ. ಏಕೆಂದರೆ ಮೋಕ್ಷಕ್ಕೆ

ಕಾರಣವಾದುದು ಭಗವಂತನ ಪ್ರೀತಿ. ಈ ಪ್ರೀತಿಯು ಬೇರೆ ಬೇರೆ ಗುಣಗಳನ್ನು ಯಾವಾಗಲೂ ಉಪಾಸನೆ ಮಾಡುವುದರಿಂದಲೇ ಉಂಟಾಗುತ್ತದೆ. ಹಾಗಾಗಿ ಇತರ ಗುಣಗಳನ್ನು ಹೊರತುಪಡಿಸಿ ಬ್ರಹ್ಮತ್ವ ಒಂದರದ್ದೇ ವಿಶೇಷವಾಗಿ ಸದಾ ಸರ್ವಥಾ ಉಪಾಸನೆ ಮಾಡಬೇಕು ಎಂಬುದಕ್ಕೆ ವಿಶೇಷಹೇತುವಿಲ್ಲ.

**ಸಿದ್ಧಾಂತ** :- ಸದಾ ಸರ್ವಥಾ ಬ್ರಹ್ಮತ್ವದ ಉಪಾಸನೆ ಮಾಡಬೇಕು. ಏಕೆಂದರೆ, ಬ್ರಹ್ಮತ್ವದಲ್ಲೇ ಸರ್ವಗುಣಗಳ ಅಂತರ್ಭಾವವಾಗುತ್ತದೆ. ಮತ್ತು ಬ್ರಹ್ಮತ್ವ ಎಂಬುದು ಭಗವದುತ್ಕೃಷ್ಟತ್ವ ರೂಪವಾಗಿದೆ. ಈ ಕಾರಣದಿಂದ ಇತರ ಗುಣಗಳಿಗಿಂತ ಬ್ರಹ್ಮತ್ವವು ಶ್ರೇಷ್ಠವೆನಿಸುತ್ತದೆ. ಇಂತಹ ಬ್ರಹ್ಮತ್ವದ ಉಪಾಸನೆ-ಯಿಂದ ಭಗವಂತನ ವಿಶೇಷ ಪ್ರೀತಿ ಉಂಟಾಗುತ್ತದೆ. ಆತ್ಮತ್ವದ ಉಪಾಸನೆ ಮಾಡದೇ ಹೋದರೆ ಹೇಗೆ ಮೋಕ್ಷ ಸಿದ್ಧಿಸುವುದಿಲ್ಲವೋ ಹಾಗೆ ಬ್ರಹ್ಮತ್ವದ ಉಪಾಸನೆ ಮಾಡದೇ ಹೋದರೂ ಮೋಕ್ಷವಿಲ್ಲ. ಆದ್ದರಿಂದ ಮೋಕ್ಷಹೇತು-ವಾದ ಭಗವಂತನ ವಿಶೇಷ ಪ್ರೀತಿ ಹುಟ್ಟಿಸುವ ಬ್ರಹ್ಮತ್ವದ ಉಪಾಸನೆಯನ್ನು ಸದಾ ಸರ್ವಥಾ ಮಾಡಬೇಕು.

**ಪ್ರಶ್ನೆ** :- ಬ್ರಹ್ಮತ್ವವನ್ನು ಅವಶ್ಯವಾಗಿ ಉಪಾಸನೆ ಮಾಡಬೇಕೆಂದಾದರೆ ಆಗ ಚತುರ್ಗುಣೋಪಾಸನಾ ನಿಯಮಕ್ಕೆ ಭಂಗ ಬರುವುದಿಲ್ಲವೇ?

**ಉತ್ತರ** :- ಇಲ್ಲ. ಬ್ರಹ್ಮತ್ವದ ಉಪಾಸನೆಯನ್ನು ಆತ್ಮಾ ಬ್ರಹ್ಮ ಎಂಬುದಾಗಿ ಆತ್ಮತ್ವ ವಿಶೇಷಣವಾಗಿಯೇ ಮಾಡಬೇಕು. ಹಾಗಾಗಿ ಚತುರ್ಗುಣೋಪಾಸ್ತಿ ನಿಯಮಕ್ಕೆ ಭಂಗವಿಲ್ಲ.

**ಅಧಿಕರಣ ಫಲ** :- 'ಭೂಮ್ನಃ ಕ್ರತುವತ್ ಜ್ಯಾಯಸ್ತ್ವಂ...' ಎಂಬಲ್ಲಿ ಭೂಮಗುಣಕ್ಕೆ ಜ್ಯಾಯಸ್ತ್ವವನ್ನು ಹೇಳಿದ್ದಾರೆ. ಅದರ ಸಮರ್ಥನೆಯನ್ನೇ ಇಲ್ಲಿ ಮಾಡಲಾಗಿದೆ. (ಭೂಮ ಎಂದರೆ ಪೂರ್ಣ, ಬ್ರಹ್ಮ ಎಂದರೂ ಅದೇ ಅರ್ಥ. ಇಲ್ಲಿ ಬ್ರಹ್ಮತ್ವೋಪಾಸನೆಯು ಆವಶ್ಯಕ ಎಂದು ಹೇಳಿದ್ದರಿಂದ ಭೂಮ ಗುಣದ ಜ್ಯಾಯಸ್ತ್ವವನ್ನು ಸಮರ್ಥನೆ ಮಾಡಿದಂತಾಯಿತು).

## ॥ ಓಂ ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ ಓಂ ॥
### ೪-೧-೫

ಹಿಂದೆ ಯಾವ ಆತ್ಮತ್ವಕ್ಕೆ ವಿಶೇಷಣವಾಗಿ ಬ್ರಹ್ಮತ್ವವನ್ನು ಉಪಾಸನೆ ಮಾಡಬೇಕು ಎಂದು ಹೇಳಿದ್ದರೋ ಅಂತಹ ಆತ್ಮತ್ವವೇ ಅಂಗಾಶ್ರಿತತ್ವದಂತೆ ಧ್ಯೇಯವಲ್ಲ ಎಂದು ಶಂಕಾ ಮಾಡುತ್ತಿರುವುದರಿಂದ ಸಂಗತಿಯಿದೆ (ಅಂಗಾಶ್ರಿತತ್ವವು ಹೇಗೆ ಧ್ಯೇಯವಲ್ಲವೋ ಹಾಗೇ ಆತ್ಮತ್ವವೂ ಧ್ಯೇಯವಲ್ಲ ಎಂದು ಶಂಕಾಭಿಪ್ರಾಯ). ದೇವತೆಗಳು ತಮ್ಮ ತಮ್ಮ ಉತ್ಪತ್ತಿಗೆ ಕಾರಣವಾದ ಭಗವಂತನ ಅಂಗದಲ್ಲಿ ಆಶ್ರಿತರು ಎಂಬ ಉಪಾಸನೆಯನ್ನು ದೇವತೆಗಳು ಮಾಡಬೇಕು ಎಂದು ಹಿಂದೆ 'ಅಂಗೇಷು ಯಥಾಶ್ರಯಭಾವಃ' ಎಂಬಲ್ಲಿ ಹೇಳಲಾಗಿತ್ತು ಅಂತಹ ಉಪಾಸನೆಯನ್ನು ದೇವತೆಗಳು ಸದಾ ಸರ್ವಥಾ ಮಾಡಬಾರದೋ ಅಥವಾ ಮಾಡಬೇಕೋ? ದೇವತೆಗಳು ಭಗವಂತನ ಚಕ್ಷುರಾದಿ ಅಂಗಗಳಲ್ಲಿ ಸದಾ ಆಶ್ರಿತರಾಗಿರುವುದಿಲ್ಲವೋ ಅಥವಾ ಇರುತ್ತಾರೋ ? ಅಂಗಾಶ್ರಿತತ್ವೋಪಾಸನೆ ಮಾಡಬೇಕು ಎಂಬುದಕ್ಕೆ ವಿಶೇಷಕಾರಣ ಇಲ್ಲವೋ ಅಥವಾ ಇದೆಯೋ?

ಅಂಗಾಶ್ರಿತತ್ವೋಪಾಸನೆಯನ್ನು ಸದಾ ಸರ್ವಥಾ ಮಾಡಬಾರದು ಎಂದೇ ಪೂರ್ವಪಕ್ಷ. ಏಕೆಂದರೆ, ಇತರ ಗುಣಗಳಿರುವಾಗ ವಿಶೇಷವಾಗಿ ಭಗವಂತನು ತಮಗೆ ಆಶ್ರಯವಾದ ಅಂಗವುಳ್ಳವನು ಎಂದು ಸದಾ ಉಪಾಸನೆ ಮಾಡುವುದಕ್ಕೆ ಯಾವುದೇ ವಿಶೇಷಹೇತುವಿಲ್ಲ. ಬ್ರಹ್ಮತ್ವೋಪಾಸನೆಗೆ ವಿಶೇಷ ಹೇತುವಿದ್ದದ್ದರಿಂದ ನಿತ್ಯೋಪಾಸನೆ ಕೂಡುತ್ತದೆ. ಆದರೆ ಪ್ರಕೃತದಲ್ಲಿ ಹಾಗಿಲ್ಲ. ಇನ್ನು ಸೂರ್ಯಾದಿ ದೇವತೆಗಳು ಜಗತ್ಪ್ರಕಾಶನಾದಿ ಕಾರ್ಯಗಳಿಗೋಸ್ಕರ ವಿವಿಧ ಸ್ಥಾನಗಳಲ್ಲಿ ಸಂಚಾರ ಮಾಡುತ್ತಿರುವುದರಿಂದ ನಿತ್ಯದಲ್ಲೂ ಭಗವಂತನ ಅಂಗಗಳಲ್ಲಿ ಇರುತ್ತಾರೆಂದು ಹೇಳಲು ಸಾಧ್ಯವಿಲ್ಲ. ಹಾಗಾಗಿ ಅಂತಹ ಉಪಾಸನೆಯು ಮಿಥ್ಯೋಪಾಸನೆಯಾಗುತ್ತದೆ. ಆದ್ದರಿಂದಲೇ ಅನರ್ಥಕಾರಿ. ಹಾಗಾಗಿ ಅಂಗಾಶ್ರಿತತ್ವೋಪಾಸನೆ ಮಾಡಬಾರದು.

**ಸಿದ್ಧಾಂತ** :- ಅಂಗಾಶ್ರಿತತ್ವೋಪಾಸನೆಯನ್ನು ಸದಾ ಮಾಡಬೇಕು. ಏಕೆಂದರೆ, 'ಸ್ವೋತ್ಪತ್ತ್ಯಂಗಂ ಚ ದೇವಾನಾಂ ವಿಷ್ಣೋಶ್ಚಿಂತ್ಯಂ' ಎಂಬ

ಸ್ಮೃತಿಯಲ್ಲಿ ಹೇಳಿದಂತೆ, ದೇವತೆಗಳು ಮುಕ್ತಿಯಲ್ಲಿ ಭಗವಂತನ ಅಂಗಗಳಲ್ಲಿ ಪ್ರವೇಶಮಾಡಬೇಕು. ಅದಕ್ಕಾಗಿ ಅವರು ಸದಾ ಅಂಗಾಶ್ರಿತತ್ವೋಪಾಸನೆ ಮಾಡಬೇಕು. ಇಲ್ಲದೇ ಹೋದರೆ ಸಾಧ್ಯವಿಲ್ಲ. ಹೀಗೆ ಅಂಗಾಶ್ರಿತ-ತ್ವೋಪಾಸನೆಗೆ ಭಗವದಂಗಪ್ರವೇಶ ಎಂಬ ವಿಶೇಷಕಾರಣವಿದೆ. ಇನ್ನು ದೇವತೆಗಳು ಒಂದು ರೂಪದಿಂದ ಯಾವಾಗಲೂ ಭಗವಂತನ ಅಂಗಗಳಲ್ಲಿ ಇದ್ದೇ ಇರುತ್ತಾರೆ. ಹಾಗಾಗಿ ಇಂತಹ ಉಪಾಸನೆಯು ಮಿಥ್ಯಾ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಹಾಗಾಗಿ ತನಗೆ ಆಶ್ರಯವಾದ ಚಕ್ಷುಸ್ಸುಳ್ಳವನು ಎಂದು ಸೂರ್ಯ ಉಪಾಸನೆ ಮಾಡಬೇಕು. ಅದೇ ರೀತಿ ತನಗೆ ಆಶ್ರಯ-ವಾದ ಮನಸ್ಸುಳ್ಳವನು ಎಂದು ಚಂದ್ರನೂ, ತನಗೆ ಆಶ್ರಯವಾದ ಮೂರ್ಧಾ-ವುಳ್ಳವನು ಎಂದು ಬ್ರಹ್ಮನೂ ಇದೇ ರೀತಿ ಇತರ ದೇವತೆಗಳೂ ಸದಾ ಸರ್ವಥಾ ಉಪಾಸನೆ ಮಾಡಲೇಬೇಕು.

**ಅಧಿಕರಣ ಫಲ** :- ಅಂಗಾಶ್ರಿತತ್ವೋಪಾಸನೆಯು ಆವಶ್ಯಕ ಅಲ್ಲ ಎಂದಾದರೆ ಆತ್ಮತ್ವೋಪಾಸನೆಯೂ ಆವಶ್ಯಕ ಎಲ್ಲ ಎಂದಾಗುತ್ತದೆ. ಏಕೆಂದರೆ ಅಂಗಾಶ್ರಿತತ್ವೋಪಾಸನೆಯಲ್ಲಿರುವುದು ಆಶ್ರಯ ಆಶ್ರಯಿಭಾವ ಸಂಬಂಧ. ಆತ್ಮತ್ವೋಪಾಸನೆಯಲ್ಲಿರುವುದು ಸ್ವಸ್ವಾಮಿಭಾವ ಸಂಬಂಧ. ಆಶ್ರಯ, ಆಶ್ರಯಿಭಾವ ಸಂಬಂಧವು ಸ್ವಸ್ವಾಮಿಭಾವ ಸಂಬಂಧದ್ದೇ ಒಂದು ವಿಶೇಷ. ಹಾಗಾಗಿ ಆಶ್ರಯ, ಆಶ್ರಯಿಭಾವ ಸಂಬಂಧದಿಂದ ಕೂಡಿರುವ ಅಂಗಾಶ್ರಿತ-ತ್ವೋಪಾಸನೆ ಬೇಡ ಎಂದಾದರೆ ಸ್ವಸ್ವಾಮಿಭಾವದಿಂದ ಕೂಡಿರುವ ಆತ್ಮತ್ವೋ-ಪಾಸನೆಯೂ ಬೇಡ ಎಂದಾಗುತ್ತದೆ. ಹಾಗಾಗಿ ಅಂಗಾಶ್ರಿತತ್ವೋಪಾಸನೆಯನ್ನು ಅವಶ್ಯವಾಗಿ ಸಮರ್ಥನೆ ಮಾಡಬೇಕು. ಅದರಿಂದ ಆತ್ಮತ್ವೋಪಾಸನೆಯನ್ನು ಸಮರ್ಥನೆ ಮಾಡಿದಂತಾಗುತ್ತದೆ.

## ।। ಓಂ ಆಸೀನಃ ಸಂಭವಾತ್ ಓಂ ।। ೪-೧-೬

ಹಿಂದೆ ಸಂಮುಗ್ಧವಾಗಿ (ವಿಭಾಗಾದಿ ವಿಶೇಷಗಳನ್ನು ಹೇಳದೇ) ಹೇಳಿದ ಉಪಾಸನೆಯು ಧ್ಯಾನ, ಸ್ಮರಣ ಎಂದು ಎರಡು ವಿಧವಾಗಿದೆ ಎಂದು ಹೇಳುವುದರ ಮೂಲಕ ಇತಿಕರ್ತವ್ಯತಾವನ್ನು ಇಲ್ಲಿ ಹೇಳುತ್ತಿರುವುದರಿಂದ ಸಂಗತಿಯಿದೆ. 'ಉಪವಿಶ್ಯಾಸನೇ ಯುಂಜ್ಯಾತ್' ಎಂದು ಆರನೇ ಅಧ್ಯಾಯ

ಗೀತೆಯಲ್ಲಿ ಹೇಳಿದ ಧ್ಯಾನಾಂಗವಾದ ಆಸನಾದಿಗಳು ಆವಶ್ಯಕವಲ್ಲವೋ ಅಥವಾ ಆವಶ್ಯಕವೋ? ಉಪಾಸನೆಗೆ ಉಪಯುಕ್ತವಾದ ಭಗವಂತನಲ್ಲಿನ ಮನೋನಿವೇಶವು ಆಸನವಿಲ್ಲದೇ ಹೋದರೂ ಆಗುತ್ತದೋ ಅಥವಾ ಇಲ್ಲವೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ. ಉಪಾಸನೆಗೆ ಆಸನವು ಆವಶ್ಯಕವಲ್ಲ ಎಂದೇ ಪೂರ್ವಪಕ್ಷ. ಏಕೆಂದರೆ, ಭಗವಂತನ ದರ್ಶನಕ್ಕೆ ಕಾರಣವಾದ ಉಪಾಸನೆಯು ಭಗವಂತನಲ್ಲಿ ಮನಸ್ಸನ್ನು ನೆಲೆಗೊಳಿಸುವುದರಿಂದಲೇ ಸಾಧ್ಯವಾಗುತ್ತದೆ. ಅದಕ್ಕೆ ಆಸನದ ಅವಶ್ಯಕತೆಯಿಲ್ಲ. ಆಸನವಿಲ್ಲದೇ ಹರಿಯಲ್ಲಿ ಮನೋನಿವೇಶವೇ ಕೂಡುವುದಿಲ್ಲ ಎಂದೇನಿಲ್ಲ. ಏಕೆಂದರೆ ಮನೋನಿವೇಶವು ಪ್ರತ್ಯಾಹಾರದಿಂದಲೇ ಉಂಟಾಗುತ್ತದೆ. ಮನೋನಿವೇಶಕ್ಕೆ ಆಸನವು ಆವಶ್ಯಕ ಎನ್ನುವುದಾದರೆ 'ಸ್ಮರ್ತವ್ಯಃ ಸತತಂ ವಿಷ್ಣುವು' ಇತ್ಯಾದಿ ವಿಧಿಗಳು ಕೂಡದೇ ಹೋಗಬೇಕಾಗುತ್ತದೆ (ಸತತವಾಗಿ ಆಸನ ಹಾಕಲು ಸಾಧ್ಯವಿಲ್ಲ). ಆಸನವನ್ನು ಆವಶ್ಯಕ ಎಂದು ಒಪ್ಪದೇ ಹೋದರೆ, ಆಸನಾದಿ ವಿಧಿಗಳನ್ನು ಉಪದೇಶಮಾಡಿದ್ದು ವ್ಯರ್ಥ ಎಂದಾಗುತ್ತದೆ. ಹಾಗಾಗಿ ಈ ಅನ್ಯಥಾನುಪಪತ್ತಿಯಿಂದ ಆಸನವು ಆವಶ್ಯಕ ಎಂದು ಒಪ್ಪಬೇಕು. ಎಂದರೆ ಆಗ 'ಪರ್ವತಾಗ್ರೇ ನದೀತೀರೇ', ಬ್ರಾಹ್ಮೀ ಮಹೂರ್ತೇ ಚೋತ್ಥಾಯ' ಇತ್ಯಾದಿ ವಿಧಿಗಳೂ ಉಪದಿಷ್ಟವಾಗಿವೆ. ಇಂತಹ ದೇಶಕಾಲ ನಿಯಮವನ್ನು ಉಪದೇಶಿಸುವ ವಿಧಿಗಳೂ ಆವಶ್ಯಕ ಎಂದು ಒಪ್ಪದಿದ್ದರೆ ಅವು ವ್ಯರ್ಥ ಎಂದಾಗುತ್ತದೆ. ಆದ್ದರಿಂದ ಈ ಅನ್ಯಥಾನುಪ-ಪತ್ತಿ ಪ್ರಮಾಣದಿಂದ ದೇಶಕಾಲನಿಯಮವನ್ನೂ ಒಪ್ಪಬೇಕಾಗುತ್ತದೆ.

**ಸಿದ್ಧಾಂತ :-** ಆಸನವು ಆವಶ್ಯಕವೇ ಆಗಿದೆ. ಏಕೆಂದರೆ, ಮನಸ್ಸು ಚಂಚಲವಾಗದೆ ಭಗವಂತನಲ್ಲೇ ನೆಲೆಗೊಳ್ಳುವಿಕೆ ಎಂಬುದು ಪ್ರತ್ಯಾಹಾರದಿಂದ ಹೇಗೆ ಆಗುತ್ತದೋ ಅದೇ ರೀತಿ 'ಅಚಲಂ ಚೇತ್ ಶರೀರಂ ಸ್ಯಾತ್ ಮನಸಶ್ಚಾಪ್ಯಚಾಲನಮ್' ಎಂಬ ಸ್ಮೃತಿಯಲ್ಲಿ ಹೇಳಿದಂತೆ ಶರೀರವು ಅಚಲವಾಗಿರುವುದರಿಂದಲೂ ಮನಸ್ಸಿನ ವಿಕ್ಷೇಪವನ್ನು ತಡೆಯಬಹುದು. ಶರೀರವು ಅಚಲವಾಗಿರಬೇಕಾದರೆ ಆಸನವು ಬೇಕೇ ಬೇಕು. 'ಸಮಂ ಕಾಯ-ಶಿರೋಗ್ರೀವಂ' ಇತ್ಯಾದಿ ಸ್ಮೃತಿಗಳಿರುವುದರಿಂದಲೂ ಉಪಾಸನೆಗೆ

ಉಪಯುಕ್ತವಾದ, ಭಗವಂತನಲ್ಲಿ ಸಮ್ಯಕ್ ಮನೋನಿವೇಶಕ್ಕಾಗಿ ಆಸನವು ಆವಶ್ಯಕ ಎಂದು ಒಪ್ಪಲೇಬೇಕು.

**ಪ್ರಶ್ನೆ** :- ನಿತ್ಯೋಪಾಸನೆ ಹಾಗು ಆಸನಾವಶ್ಯಕೆ ಇವೆರಡೂ ಪರಸ್ಪರ ವಿರುದ್ಧ. ಆಸನವು ಆವಶ್ಯಕ ಎಂದರೆ 'ಸ್ಮರ್ತವ್ಯ ಸತತಂ' ಇತ್ಯಾದಿ ಸ್ಮೃತಿಯಲ್ಲಿ ಹೇಳಲ್ಪಟ್ಟ ನಿತ್ಯೋಪಾಸನೆಯ ವಿರೋಧ ಬರುತ್ತದೆ?

**ಉತ್ತರ** :- ಉಪಾಸನೆಯು ಸ್ಮರಣ, ಧ್ಯಾನ ಎಂಬುದಾಗಿ ಎರಡು ವಿಧ. ಸ್ಮರಣರೂಪ ಉಪಾಸನೆಯು ನಿತ್ಯಕಾರ್ಯ. ಹಾಗಾಗಿ ಅದಕ್ಕೆ ಆಸನ ನಿಯಮವಿಲ್ಲ. ಆದರೆ, ಕಾದಾಚಿತ್ಕವಾದ ಧ್ಯಾನರೂಪ ಉಪಾಸನೆಗೆ ಆಸನನಿಯಮವಿದೆ. ಈ ರೀತಿ ವ್ಯವಸ್ಥೆ ಇರುವುದರಿಂದ ಯಾವುದೇ ವಿರೋಧವಿಲ್ಲ. ಆಸನವು ಆವಶ್ಯಕ (ಧ್ಯಾನಕ್ಕೆ) ಎಂದು ಹೇಳಿದ್ದರಿಂದಲೇ ಆಸನಾದಿಗಳನ್ನು ಉಪದೇಶ ಮಾಡಿದ್ದು ವ್ಯರ್ಥವಲ್ಲ. ಆಸನನಿಯಮವನ್ನು ಒಪ್ಪಿದರೆ ದೇಶಕಾಲನಿಯಮವನ್ನೂ ಒಪ್ಪಬೇಕು ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ, ಆಸನಾದಿಗಳು ಧ್ಯಾನೋಪಯೋಗಿಗಳಾದಂತೆ ಶ್ರವಣಾದಿಗಳು ಜ್ಞಾನೋಪಾಯೋಗಿಗಳಾದಂತೆ ದೇಶಕಾಲಗಳು ಧ್ಯಾನೋಪಯೋಗಿ-ಗಳಾಗಲೀ ನೇರವಾಗಿ ಜ್ಞಾನೋಪಯೋಗಿಗಳಾಗಲೀ ಆಗಿಲ್ಲ. ಹಾಗಾಗಿ ನಿಯಮ ಮಾಡಬಾರದು. 'ತಮೇವ ದೇಶಂ ಸೇವೇತ' ಎಂಬ ಸ್ಮೃತಿ ಇರುವುದರಿಂದಲೂ ಯಾವ ಸ್ಥಳದಲ್ಲಿ ಮನಸ್ಸಿನ ಏಕಾಗ್ರತೆ ಉಂಟಾಗುತ್ತದೋ ಅದೇ ಸ್ಥಳವು ಧ್ಯಾನಕ್ಕೆ ಗ್ರಹ್ಯವಾಗಿದೆಯೇ ಹೊರತು ಪರ್ವತಾಗ್ರಾದಿಗಳಲ್ಲ.

**ಅಧಿಕರಣ ಫಲ** :- ಆಸನಾದಿಗಳ ಉಪದೇಶವು ಸಾರ್ಥಕ ಎಂದು ಸಮರ್ಥನೆ ಮಾಡಿದ್ದೇ ಈ ಅಧಿಕರಣದ ಪ್ರಯೋಜನ.

## ॥ ಓಂ ಆಪ್ರಾಯಣಾತ್ತತ್ರಾಪಿ ಹಿ ದೃಷ್ಟಮ್ ಓಂ ॥ ೪-೧-೭

ಹಿಂದೆ, ಆಸನದಲ್ಲಿ ವಿಶೇಷವಿದೆಯಾದ್ದರಿಂದ ಅದು ಆವಶ್ಯಕ ಆದರೆ, ದೇಶವಿಶೇಷಾದಿಗಳಲ್ಲಿ ಅಂತಹ ವಿಶೇಷವಿಲ್ಲವಾದ್ದರಿಂದ ಅದು ಆವಶ್ಯಕವಲ್ಲ ಎಂದು ಹೇಳಲಾಗಿದೆ. ಅದೇ ರೀತಿ 'ಧ್ಯಾನಾಚ್ಚ' ಎಂಬಲ್ಲಿ ಪ್ರಕೃತವಾದ ಧ್ಯಾನವು ಜ್ಞಾನ ಬರುವವರೆಗೆ ಮಾತ್ರ ಮಾಡಲ್ಪಡಬೇಕು. ಜ್ಞಾನ ಬಂದ-

ನಂತರವೂ ಮುಕ್ತಿ ಪರ್ಯಂತ ಮಾಡಬೇಕಿಲ್ಲ. ಏಕೆಂದರೆ ಮುಕ್ತಿಯಲ್ಲಿ ಅದರಿಂದಾಗುವ (ಜ್ಞಾನಾನಂತರ ಧ್ಯಾನದಿಂದ) ವಿಶೇವೇನೂ ಇಲ್ಲ ಎಂದು ಹೀಗೆ ಶಾಂಕಾ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಸಂಗತಿಯಿದೆ.

ಧ್ಯಾನಾಚ್ಚ ಎಂಬಲ್ಲಿ ಹೇಳಿದ ಧ್ಯಾನವು ಜ್ಞಾನಪರ್ಯಂತ ಮಾತ್ರ ಮಾಡಬೇಕೋ ಅಥವಾ ಮುಕ್ತಿಪರ್ಯಂತ ಮಾಡಬೇಕೋ? ಧ್ಯಾನವು ಜ್ಞಾನಕ್ಕಾಗಿ ವಿಹಿತವಾಗಿದೆ. ಅದನ್ನು ಮುಕ್ತಿಪರ್ಯಂತ ಮಾಡಬೇಕು ಎನ್ನುವುದಕ್ಕೆ ಹೇತು ಇಲ್ಲವೋ ಅಥವಾ ಇದೆಯೋ? ಮುಕ್ತಿಯಲ್ಲಿ ಆನಂದಾ-ತಿಶಯವು ಧ್ಯಾನವಲ್ಲದೇ ಬೇರೆಯದರಿಂದಲೂ ಆಗುತ್ತದೋ ಅಥವಾ ಧ್ಯಾನ-ದಿಂದಲೇ ಆಗುತ್ತದೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

ಮುಕ್ತಿಪರ್ಯಂತ ಧ್ಯಾನ ಮಾಡಬೇಕಿಲ್ಲ ಎಂದೇ ಪೂರ್ವಪಕ್ಷ. ಏಕೆಂದರೆ, ಮೋಕ್ಷದಲ್ಲಿ ಆಗುವ ಆನಂದವೃದ್ಧಿಯು ಧ್ಯಾನಕ್ಕಿಂತ ಬೇರೆಯಾದ ಶ್ರವಣಾದಿ ಸಾಧನಗಳಿಂದಲೂ ಆಗುತ್ತದೆ. ಮತ್ತು ಧ್ಯಾನವು ಜ್ಞಾನಕ್ಕಾಗಿ ವಿಹಿತವಾಗಿದೆ. ಅದನ್ನು ಮುಕ್ತಿಪರ್ಯಂತ ಅನುಷ್ಠಾನಮಾಡಬೇಕು ಎಂಬುದಕ್ಕೆ ಯಾವುದೇ ಕಾರಣವಿಲ್ಲ.

**ಸಿದ್ಧಾಂತ** :- ಮುಕ್ತಿ ಪರ್ಯಂತ ಧ್ಯಾನ ಮಾಡಬೇಕು. ಏಕೆಂದರೆ, 'ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ' ಎಂಬ ಗೀತಾವಾಕ್ಯದಲ್ಲಿ ಯೋಗಾರೂಢ ಎನಿಸಿಕೊಂಡ ಅಪರೋಕ್ಷಜ್ಞಾನಿಯು ಮಾಡುವ ಶಮಃ ಶಬ್ದ ವಾಚ್ಯವಾದ ಧ್ಯಾನವು ಪರಮಸುಖಕ್ಕೆ ಕಾರಣವಾಗುತ್ತದೆ ಎಂದು ಹೇಳಿದೆ. ಹಾಗಾಗಿ ಧ್ಯಾನವೇ ಪ್ರಧಾನವಾಗಿ ಆನಂದವೃದ್ಧಿಗೆ ಕಾರಣ ಎಂದು ತಿಳಿಯುತ್ತದೆ. ಇನ್ನು 'ಪ್ರಾಯಣಾಂತಮೋಂಕಾರಮಭಿಧ್ಯಾಯೀತ' ಎಂಬ ಶ್ರುತಿಯೂ ಕೂಡ ಮುಕ್ತಿಪರ್ಯಂತ ಧ್ಯಾನ ಮಾಡಬೇಕು ಎಂದು ತಿಳಿಸುತ್ತಿದೆ. 'ಮುಕ್ತಾ ಅಪಿ ಹ್ಯೇನಮುಪಾಸತೇ' ಎಂಬ ಶ್ರುತಿಯಲ್ಲಿ ಮುಕ್ತರೂ ಪರಮಾತ್ಮನ ಧ್ಯಾನವನ್ನು ಮಾಡುತ್ತಾರೆಂದು ಹೇಳಿದ್ದರಿಂದ ಮುಕ್ತಿ ಪರ್ಯಂತ ಧ್ಯಾನ ಮಾಡಬೇಕು ಎಂಬುದು ಕೈಮುತ್ಯನ್ಯಾಯ-ದಿಂದ ಸಿದ್ಧವಾಗುತ್ತದೆ.

**ಅಧಿಕರಣ ಫಲ** :- 'ಯಾವದಧಿಕಾರಮ್' ಇತ್ಯಾದಿ ಸೂತ್ರಗಳಲ್ಲಿ ಹೇಳಿದ ಮುಕ್ತತಾರತಮ್ಯವನ್ನು ಸಮರ್ಥನೆ ಮಾಡಿದ್ದೇ ಈ ಅಧಿಕರಣದ ಪ್ರಯೋಜನ. ಅಪರೋಕ್ಷಜ್ಞಾನವಾದ ಮೇಲೂ ಮೋಕ್ಷ ಪರ್ಯಂತ ಧ್ಯಾನ ಮಾಡಬೇಕು ಎಂದು ಸಮರ್ಥನೆ ಮಾಡದೇ ಹೋದರೇ ಆಗ ಜ್ಞಾನಿಗಳಿಗೆ ಸಿಗಬೇಕಾದ ಧ್ಯಾನದ ಫಲ ಸಿಗದೇ ಹೋಗಿ ಮುಕ್ತಿಯಲ್ಲಿ ತಾರತಮ್ಯ ಇಲ್ಲ ಎಂದಾಗಬೇಕಾಗುತ್ತದೆ.

## ।। ಓಂ ತದಧಿಗಮ ಉತ್ತರಪೂರ್ವಾಘಯೋರ-ಶ್ಲೇಷವಿನಾಶೌ ತದ್ವ್ಯಪದೇಶಾತ್ ಓಂ ।। ೪-೧-೮

ಹೀಗೆ ಇಲ್ಲಿಯವರೆಗೆ ಪ್ರಾಸಂಗಿಕ ವಿಚಾರವನ್ನು ಮುಗಿಸಿ ಈ ಅಧಿಕರಣ-ದಲ್ಲಿ ಕರ್ಮಕ್ಷಯ ಎಂಬ ಮೋಕ್ಷದ ಸ್ವರೂಪವನ್ನೇ ನಿರೂಪಣೆ ಮಾಡುತ್ತಿ-ದ್ದಾರಾದ್ದರಿಂದ ಅವಸರ ಸಂಗತಿಯಿದೆ.

'ಏವಂ ಮುಕ್ತಿಫಲಾನಿಯಮಃ' ಎಂದು ಹಿಂದೆ ಹೇಳಿದ, ಜ್ಞಾನದಿಂದ ಮೋಕ್ಷ ಎಂಬುದು ಯುಕ್ತವಲ್ಲವೋ ಅಥವಾ ಯುಕ್ತವೋ? ಮುಕ್ತಿಗೆ ಪ್ರತಿ ಬಂಧಕಗಳಾದ, ಜ್ಞಾನದ ಪೂರ್ವದಲ್ಲಿ ಹಾಗು ನಂತರ ಇರುವ ಕರ್ಮಗಳು ಜ್ಞಾನದಿಂದ ನಾಶವಾಗುತ್ತವೆ ಎಂಬುದು ಯುಕ್ತವಲ್ಲವೋ ಅಥವಾ ಯುಕ್ತವೋ ? ಪೂರ್ವಾಪರ ಕರ್ಮಗಳಿಗೆ ನಾಶವನ್ನು ಅಂಗೀಕಾರ ಮಾಡಿದರೆ ಬಾಧಕವಿದೆಯೋ ಅಥವಾ ಇಲ್ಲವೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

'ಏವಂ ಮುಕ್ತಿಫಲಾನಿಯಮಃ' ಎಂಬಲ್ಲಿ ಹೇಳಿದ ಕರ್ಮಕೃತವಾದ ಪ್ರತಿ ಬಂಧಕವಿಲ್ಲದೇ ಹೋದರೆ ಜ್ಞಾನದಿಂದ ಮೋಕ್ಷವಾಗೇ ಆಗುತ್ತದೆ ಎಂಬುದು ಯುಕ್ತವಲ್ಲ ಎಂದೇ ಪೂರ್ವಪಕ್ಷ. ಏಕೆಂದರೆ, ಅಪರೋಕ್ಷಜ್ಞಾನಕ್ಕಿಂತ ಮೊದಲು ಹಾಗು ನಂತರ ಮಾಡಿದ ಕರ್ಮಗಳು ಪ್ರತಿಬಂಧಕವಾಗಿರುತ್ತವೆ. ಅವುಗಳ ನಿವೃತ್ತಿಯಾಗಲು ಸಾಧ್ಯವಿಲ್ಲ. ಜ್ಞಾನಕ್ಕಿಂತ ಪೂರ್ವದಲ್ಲಿ ಮಾಡಿದ ಕರ್ಮಗಳ ನಾಶವು ಆಗುವುದಾದರೆ ಭೋಗದಿಂದಾಗುತ್ತದೋ ಅಥವಾ ಹತ್ತಿಯ ಉಂಡೆಯು ಬೆಂಕಿಯಿಂದ ಸುಟ್ಟುಹೋಗುವಂತೆ ಜ್ಞಾನದಿಂದ ಕರ್ಮನಾಶ-ವಾಗುತ್ತದೋ? ಅದೇ ರೀತಿ ಜ್ಞಾನಾನಂತರದ ಕರ್ಮಗಳ ಲೇಪವಾಗು-

ವುದಿಲ್ಲವೋ? (ಹೀಗೆ ವಿಕಲ್ಪ ಮಾಡಬೇಕು) ಮೊದಲನೇ ವಿಕಲ್ಪದಲ್ಲಿ (ಭೋಗದಿಂದ ನಾಶ ಎಂಬ) ಪುನಃ ಭೋಗವು ಜ್ಞಾನಹುಟ್ಟಿದ ದೇಹದಿಂದಲೇ ಆಗುತ್ತದೋ ಅಥವಾ ಬೇರೆ ದೇಹಗಳನ್ನು ಪಡೆದು ಆಗುತ್ತದೋ ಎಂದು ವಿಕಲ್ಪ ಮಾಡಬೇಕು. ಎರಡನೇ ವಿಕಲ್ಪದಲ್ಲಿಯೂ (ದೇಹಾಂತರದಲ್ಲಿ ಭೋಗ) ಕ್ರಮವಾಗಿ ದೇಹಗಳನ್ನು ಪಡೆದು ಭೋಗವೋ ಅಥವಾ ಒಂದೇ ಜನ್ಮದಲ್ಲಿ ಕಾಯವ್ಯೂಹದಿಂದ ಒಂದೇ ಸಾರಿ ಭೋಗವೋ ಎಂದು ಪುನಃ ವಿಕಲ್ಪ ಮಾಡಬೇಕು. ಮೊದಲನೇ ವಿಕಲ್ಪ (ಜ್ಞಾನೋತ್ಪತ್ತಿಯಾದ ಶರೀರದಿಂದಲೇ ಭೋಗ) ಕೂಡುವುದಿಲ್ಲ. ಏಕೆಂದರೆ, ಅನೇಕ ದೇಹಗಳನ್ನು ಪಡೆದೇ ಭೋಗಿಸಬೇಕಾದ ಕರ್ಮಗಳಿರುತ್ತವೆ. ಹಾಗಾಗಿ ಜ್ಞಾನ ಹುಟ್ಟಿದ ಶರೀರ-ದಿಂದಲೇ ಭೋಗ ಕೂಡುವುದಿಲ್ಲ.

ಎರಡನೇ ವಿಕಲ್ಪವೂ (ದೇಹಾಂತರದಲ್ಲಿ ಕ್ರಮೇಣ) ಕೂಡುವುದಿಲ್ಲ. ಏಕೆಂದರೆ ಜ್ಞಾನ ಹುಟ್ಟಿ ಅನೇಕ ದೇಹಗಳನ್ನು ಪಡೆದು ಕರ್ಮವನ್ನು ಭೋಗಿಸುತ್ತಾನೆ ಎಂದರೆ ಜ್ಞಾನಹುಟ್ಟಿದ ಕಾಲಕ್ಕೂ ಮೋಕ್ಷವಾಗುವ ಕಾಲಕ್ಕೂ ಬಹಳ ಅಂತರ ಏರ್ಪಡುವುದರಿಂದ, ಜೀರ್ಣಬೀಜದಂತೆ ಜ್ಞಾನವು ಮೋಕ್ಷಹೇತು-ವಾಗಲು ಸಮರ್ಥವಾಗುವುದಿಲ್ಲ. ಮೂರನೇ ವಿಕಲ್ಪ(ಕಾಯವ್ಯೂಹದಿಂದ ಭೋಗ)ವೂ ಸರಿಯಲ್ಲ. ಏಕೆಂದರೆ, ಭಿನ್ನ ಭಿನ್ನ ದೇಶಕಾಲಗಳಲ್ಲಿ ಉಪ-ಭೋಗಿಸಲ್ಪಡಬೇಕಾದ ಕರ್ಮಗಳನ್ನೂ ಕೂಡ ಯೋಗ ಪ್ರಭಾವದಿಂದ ಒಂದೇ ದೇಶಕಾಲದಲ್ಲಿ ಭೋಗ ಮಾಡುತ್ತಾನೆಂದು ಒಪ್ಪಿದರೆ, ಅದೇ ಯೋಗ-ಸಾಮರ್ಥ್ಯದಿಂದ ಭೋಗವನ್ನೇ ಮಾಡುವುದಿಲ್ಲ ಎಂದೂ ಹೇಳಬಹುದು. ಮತ್ತು ಜ್ಞಾನೋತ್ತರ ಕಾಲದಲ್ಲಿ ಕರ್ಮಗಳನ್ನು ಭೋಗಿಸುವಾಗ ಪುನಃ ಕರ್ಮಗಳನ್ನು ಮಾಡುವುದರಿಂದ ಕರ್ಮಗಳ ಭೋಗವು ಮುಗಿಯದೇ ಹೋಗುವ ಪ್ರಸಂಗವಿದೆ. ಜ್ಞಾನಿಯು ಕರ್ಮವನ್ನೇ ಮಾಡುವುದಿಲ್ಲ ಎನ್ನುವುದು ಸರಿಯಲ್ಲ. ಹಾಗೆ ಹೇಳಿದರೆ 'ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್' ಎಂಬ ಗೀತಾವಾಕ್ಯದ ವಿರೋಧ ಬರುತ್ತದೆ.

ನಾಲ್ಕನೇ ವಿಕಲ್ಪವೂ (ಹತ್ತಿಯ ಉಂಡೆಯು ಬೆಂಕಿಯಿಂದ ಸುಟ್ಟು ಹೋಗುವಂತೆ) ಕೂಡುವುದಿಲ್ಲ. ಏಕೆಂದರೆ 'ನಾ ಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ' ಎಂಬ ಸ್ಮೃತಿಯಲ್ಲಿ ಕರ್ಮಗಳು ಭೋಗದಿಂದಲೇ

ಕ್ಷೀಣಿಸುತ್ತವೆ ಎಂದು ಹೇಳಿದ್ದರಿಂದ ಇದರ ವಿರೋಧ ಬರುತ್ತದೆ. ಜ್ಞಾನದಿಂದಲೇ ಕರ್ಮಕ್ಷಯವಾಗುವುದಾದರೆ ಜ್ಞಾನಹುಟ್ಟಿದ ಉತ್ತರಕ್ಷಣದಲ್ಲೇ ಮೋಕ್ಷವಾಗಬೇಕು. ಇನ್ನು, ಜ್ಞಾನಿಯ ಪ್ರಾಚೀನಪುಣ್ಯಕರ್ಮಗಳೂ ಜ್ಞಾನದಿಂದ ನಾಶವಾಗುತ್ತವೆ ಎಂದರೆ 'ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇಃ' ಎಂಬಲ್ಲಿ ಹೇಳಿದ ಎಲ್ಲ ಪುಣ್ಯಕರ್ಮಗಳೂ ಜ್ಞಾನಕ್ಕೆ ಉಪಯೋಗಿಯಾಗಿದೆ ಎಂಬುದರ ವಿರೋಧ ಬರುತ್ತದೆ. (ಜ್ಞಾನವು ತನಗೆ ಉಪಯೋಗಿಯಾದ ಪುಣ್ಯಕರ್ಮಗಳನ್ನೇ ನಾಶಮಾಡುತ್ತದೆ ಎಂದರೆ ಉಪಜೀವ್ಯ ವಿರೋಧ ಬರುತ್ತದೆ). ಜ್ಞಾನೋತ್ತರಕಾಲದಲ್ಲಿ ಮಾಡಿದ ಪುಣ್ಯಕರ್ಮಗಳ ಅಲೇಪ, ಎಂದರೆ ಆಗ ಸ್ತುತ್ಯಧಿಕರಣದಲ್ಲಿ ಹೇಳಿದ, ಉತ್ತರ ಪುಣ್ಯಕರ್ಮಗಳು ಆನಂದಾತಿಶಯಕ್ಕೆ ಕಾರಣವಾಗುತ್ತವೆ ಎಂಬುದರ ವಿರೋಧ ಬರುತ್ತದೆ.

ಹೇಗೆ ಜ್ಞಾನದಿಂದ ಮೋಕ್ಷವಾಗಲು ಸಾಧ್ಯವಿಲ್ಲವೋ (ಕರ್ಮಕ್ಷಯವಾಗದ ಕಾರಣ) ಅದೇ ರೀತಿ 'ಅನಿಷ್ಟಾದಿಕಾರಿಣಾಂ' ಎಂದು ವೈರಾಗ್ಯಪಾದದ ಹನ್ನೊಂದನೇ ಅಧಿಕರಣದಲ್ಲಿ ಹೇಳಿದ ಹರಿದ್ವೇಷಿಗಳಿಗೆ ತಮಃ ಪ್ರಾಪ್ತಿಯಾಗುತ್ತದೆ ಎಂಬುದೂ ಕೂಡುವುದಿಲ್ಲ. ಏಕೆಂದರೆ ದ್ವೇಷಪೂರ್ತಿಯ ಮೊದಲು ಇರುವ ಕರ್ಮಗಳನ್ನು ಭೋಗದಿಂದಲಾಗಲೀ ದ್ವೇಷಪೂರ್ತಿಯಿಂದಲಾಗಲೀ ಕಳೆದುಕೊಳ್ಳಲು ಸಾಧ್ಯವಿಲ್ಲ. ಹಾಗೇ ದ್ವೇಷ ಪೂರ್ತಿಯ ನಂತರದ ಕರ್ಮಗಳ ಅಶ್ಲೇಷ ಎಂಬುದೂ ಕೂಡುವುದಿಲ್ಲ.

**ಸಿದ್ಧಾಂತ** :- ಕರ್ಮಗಳು ಭೋಗದಿಂದ ಕ್ಷಯವಾಗದೇ ಹೋದರೂ, ಜ್ಞಾನೋದಯಾನಂತರ ಕರ್ಮಾನುಷ್ಠಾನವಿದ್ದರೂ ಜ್ಞಾನದಿಂದ ಮೋಕ್ಷ ಎಂಬುದು ಕೂಡುತ್ತದೆ. ಏಕೆಂದರೆ ಅಪರೋಕ್ಷ ಜ್ಞಾನದಿಂದ ಪ್ರಾಚೀನವಾದ ಅಪ್ರಾರಬ್ಧವಾದ ಅಶೇಷ ಪಾಪಕರ್ಮಗಳು ನಾಶವಾಗುತ್ತವೆ. ಪುಣ್ಯದಲ್ಲಿಯೂ ಕೂಡ ಅಪ್ರಾರಬ್ಧವಾದ ಅನಭೀಷ್ಟವಾದ ಕಾಮ್ಯಪುಣ್ಯಗಳು ನಾಶ ಹೊಂದುತ್ತವೆ. ಇದನ್ನು ಬಿಟ್ಟು ಉಳಿದ ಪುಣ್ಯಪಾಪಗಳು ಇರುವುದರಿಂದ (ಪ್ರಾರಬ್ಧಪಾಪಪುಣ್ಯ ಹಾಗೂ ಅಪ್ರಾರಬ್ಧ ಅಕಾಮ್ಯ ಅಭೀಷ್ಟ ಪುಣ್ಯ). 'ನಾ ಭುಕ್ತಮ್..' ಎಂಬ ಶ್ರುತಿಯ ವಿರೋಧವಿಲ್ಲ. ಏಕೆಂದರೆ ಈ ಸ್ಮೃತಿಯು ಪ್ರಾರಬ್ಧ ಪುಣ್ಯಪಾಪಗಳ ಕುರಿತಾಗಿದೆ. ಅದರ ಭೋಗವನ್ನೇ ನಾವೂ ಒಪ್ಪಿದ್ದೇವೆ. ಇನ್ನು ಜ್ಞಾನೋತ್ತರ ಕ್ಷಣದಲ್ಲೇ ಮೋಕ್ಷವಾಗಬೇಕು ಎಂಬ

ಅಕ್ಷೇಪಕ್ಕೂ ಅವಕಾಶವಿಲ್ಲ. ಏಕೆಂದರೆ ಪ್ರಾರಬ್ಧಕರ್ಮ ಉಳಿದಿರುವುದರಿಂದ ಜ್ಞಾನೋತ್ಪತ್ತ್ಯುತ್ತರಕ್ಷಣದಲ್ಲೇ ಮೋಕ್ಷವಾಗುವುದಿಲ್ಲ. ಅದೇ ರೀತಿ ಪ್ರಾಚೀನ ಪುಣ್ಯವು ಜ್ಞಾನೋಪಯೋಗಿಯಾಗಿದೆ ಎಂಬ ಮಾತಿನ ವಿರೋಧವೂ ಇಲ್ಲ. ಏಕೆಂದರೆ ಅಂತಹ ಜ್ಞಾನೋಪಯೋಗಿಯಾದ ಪುಣ್ಯವು ನಾಶವಾಗುವುದಿಲ್ಲ.

ಇನ್ನು ಜ್ಞಾನೋತ್ತರ ಕಾಲದಲ್ಲಿ ಮಾಡುವ ಪಾಪವು ಅಶುಚಿತ್ವವನ್ನು ತಂದು ಕೊಡುವುದಿಲ್ಲ. ಇದೇ ಪಾಪದ ಅಶ್ಲೇಷ ಎಂಬುದರ ಅರ್ಥ. ಆದರೆ, ಅಕಾಮ್ಯಪುಣ್ಯವು ಮೋಕ್ಷದಲ್ಲಿನ ಆನಂದಾತಿಶಯಕ್ಕೆ ಕಾರಣವಾಗುತ್ತದೆ ಎಂದು ಒಪ್ಪಿದ್ದರಿಂದ ಸ್ತುತ್ಯಧಿಕರಣದಲ್ಲಿ ಹೇಳಿದ್ದರ ವಿರೋಧ ಬರುವುದಿಲ್ಲ. ಪ್ರಾರಬ್ಧ ಪುಣ್ಯಪಾಪಗಳು ಭೋಗದಿಂದ ನಾಶವಾಗುತ್ತವೆ. ಅಪ್ರಾರಬ್ಧವಾದ ಅಭೀಷ್ಟವಾದ ಪ್ರಾಚೀನ ಅಕಾಮ್ಯಪುಣ್ಯ ಹಾಗೂ ಜ್ಞಾನೋತ್ತರದಲ್ಲಿನ ಅಕಾಮ್ಯಪುಣ್ಯ ಇದಕ್ಕೆ ಮೋಕ್ಷದಲ್ಲಿ ಅನುಪ್ರವೇಶವನ್ನು ಒಪ್ಪಲಾಗಿದೆ. (ಜಿಜ್ಞಾಸುವಾದಾಗ ಮಾಡಿದ ಅಕಾಮ್ಯಪುಣ್ಯವು ಅಪರೋಕ್ಷಜ್ಞಾನದ್ವಾರಾ ಮೋಕ್ಷಕ್ಕೆ ಕಾರಣವಾದರೆ, ಜ್ಞಾನಿಯು ಮಾಡಿದ ಅಕಾಮ್ಯಪುಣ್ಯವು, ಮೋಕ್ಷದಲ್ಲಿ ಆನಂದಾತಿಶಯಕ್ಕೆ ಕಾರಣವಾಗುತ್ತದೆ.

ಇಷ್ಟೇ ವ್ಯತ್ಯಾಸ).

ಇದೇ ರೀತಿ ಹರಿದ್ವೇಷಿಗಳಿಗೂ ತಮಃಪ್ರಾಪ್ತಿ ಎಂಬುದು ಕೂಡುತ್ತದೆ. ಏಕೆಂದರೆ ದ್ವೇಷಪೂರ್ತಿಗಿಂತ ಮೊದಲು ಮಾಡಿದ ಅಶೇಷ ಅಪ್ರಾರಬ್ಧ ಪುಣ್ಯಗಳು ನಾಶವಾಗುತ್ತವೆ. ದ್ವೇಷಪೂರ್ತಿಯ ನಂತರ ಮಾಡಿದ ಅಶೇಷಪುಣ್ಯಗಳ ಲೇಪವಾಗುವುದಿಲ್ಲ. ಪ್ರಾರಬ್ಧವಾದ ಪುಣ್ಯ ಪಾಪಗಳು ಭೋಗದಿಂದ ನಾಶವಾಗುತ್ತವೆ.

**ಅಧಿಕರಣ ಫಲ :-** 'ಅನಿಯಮಃ ಸರ್ವೇಷಾಂ' ಎಂಬಲ್ಲಿ ಹೇಳಿದ ಜ್ಞಾನಿಗಳಿಗೆ ನಿಯಮೇನ ಮೋಕ್ಷವಾಗುತ್ತದೆ ಎಂಬ ಪ್ರಮೇಯದ ಸಮರ್ಥನೆಯನ್ನೇ ಇಲ್ಲಿ ಮಾಡಲಾಗಿದೆ.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ನಾಲ್ಕನೆಯ ಅಧ್ಯಾಯದ ಮೊದಲನೆಯ ಪಾದವು ಸಮಾಪ್ತವಾಯಿತು.**

# ನಾಲ್ಕನೆಯ ಅಧ್ಯಾಯದ ಎರಡನೆಯ ಪಾದ

ಹಿಂದಿನ ಪಾದದಲ್ಲಿ ಜ್ಞಾನಿಗೆ 'ಅತಃ' ಪದದಿಂದ ಹೇಳಲ್ಪಟ್ಟ ಮೋಕ್ಷರೂಪ ಫಲಕ್ಕೋಸ್ಕರ ಕರ್ಮಕ್ಷಯ ಜ್ಞಾನಭೋಗದಿಂದಾಗುತ್ತದೆ ಎಂದು ಹೇಳಲಾಗಿದೆ. ಈ ಪಾದದಲ್ಲಿ ಕರ್ಮಕ್ಷಯದಿಂದ ಉಂಟಾಗುವ ದೇಹಕ್ಷಯದ ಕ್ರಮವು ಹೇಳಲ್ಪಡುತ್ತದೆ. ಹೀಗೆ ಈ ಪಾದಕ್ಕೆ ಹಿಂದಿನ ಪಾದದಿಂದ ಆನಂತರ್ಯ ಎಂಬ ಸಂಗತಿಯಿದೆ.

## ॥ ಓಂ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ಓಂ ॥ ೪-೨-೧

ಜ್ಞಾನಿಗಳ ದೇಹಕ್ಷಯವು ಎರಡು ವಿಧ. ದೇವತೆಗಳಿಗೆ ಸ್ವೋತ್ತಮರಲ್ಲಿ ಲಯ. ಉಳಿದವರಿಗೆ ಬ್ರಹ್ಮನಾಡಿಯಿಂದ ಉತ್ಕ್ರಮಣ. ಅಧಿಕಾರಿಗಳಲ್ಲಿ ದೇವತೆಗಳು ಉತ್ತಮರಾದ್ದರಿಂದ ಮೊದಲಿಗೆ 'ಅವಿಭಾಗೋ ವಚನಾತ್' ಎಂಬಲ್ಲಿಯ ತನಕ ಏಳು ಅಧಿಕರಣಗಳಲ್ಲಿ ದೇವತೆಗಳ ದೇಹಲಯವು ಅಪವಾದ ಸಹಿತವಾಗಿ ಹೇಳಲ್ಪಡುತ್ತದೆ. ವಾಗ್ದೇವಿಗೆ ಭಗವತ್ಪ್ರಾಪ್ತಿ ಎಂಬ ಮೋಕ್ಷವಾಗಬೇಕಾದರೆ ಮನೋದೇವನಲ್ಲಿ ಲಯವಾಗುತ್ತದೆ ಎಂಬುದನ್ನು ನಿರ್ಣಯಿಸಲು ಸಾಧ್ಯವಿಲ್ಲವೋ ಅಥವಾ ಸಾಧ್ಯವಿದೆಯೋ? ಮನೋ-ದೇವನು ವಾಗ್ದೇವಿಗಿಂತ ಉತ್ತಮ ಎಂಬುದನ್ನು ನಿರ್ಣಯಿಸಲು ಶಕ್ಯವಿಲ್ಲವೋ ಅಥವಾ ಶಕ್ಯವಿದೆಯೋ? 'ವಾಕ್ಪೂರ್ವರೂಪಂ ಮನ ಉತ್ತರರೂಪಂ', 'ಮನಃ ಪೂರ್ವರೂಪಂ ವಾಗುತ್ತರರೂಪಂ' ಎಂಬುದಾಗಿ ವ್ಯಾಮಿಶ್ರೋಕ್ತಿ (ವಿರುದ್ಧೋಕ್ತಿ)ಗೆ ವಾಕ್ ಮನಸ್ಸುಗಳಿಗೆ ಅನ್ಯೋನ್ಯಜನ್ಮವನ್ನು ಹೇಳಿದ್ದರಿಂದ ಅವೆರಡೂ ಸಮಪ್ರಾಧನವಾಗಿದ್ದಾವೆ ಎಂಬ ಅಭಿಪ್ರಾಯವೋ ಅಥವಾ ಬೇರೆ ಅಭಿಪ್ರಾಯವೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ** :- ಶ್ರುತಿಯಲ್ಲಿ ವ್ಯಾಮಿಶ್ರೋಕ್ತಿಯಿರುವುದರಿಂದ ವಾಕ್ ಮನಸ್ಸುಗಳಿಗೆ ಸಮಪ್ರಧಾನಭಾವವನ್ನೇ ಒಪ್ಪಬೇಕು. ಮನಸ್ಸಿಗೆ ಉತ್ತಮತ್ವ ಸಿದ್ಧವಾಗುವುದಿಲ್ಲ. 'ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ ಚ' ಎಂಬಲ್ಲಿ ತನ್ನ ಸೃಷ್ಟಿಗೆ ಕಾರಣರಾದ ಆದ್ದರಿಂದಲೇ ತನಗಿಂತ ಉತ್ತಮರಾದ ದೇವತೆಗಳಲ್ಲಿ ಅಧಮ ದೇವತೆಗಳಿಗೆ ಲಯ ಎಂದು ಹೇಳಲಾಗಿದೆ. ಅದರಂತೆ

ಇಲ್ಲಿಯೂ ಹೇಳಬೇಕು. ಆದರೆ ಮನೋದೇವತೆಗೆ ಉತ್ತಮತ್ವ ನಿರ್ಣಯವಾಗುವುದಿಲ್ಲವಾದ್ದರಿಂದ ವಾಗ್ದೇವತೆಗೆ ಮನಸ್ಸಿನಲ್ಲಿ ಲಯ ಎಂದು ನಿರ್ಣಯ ಮಾಡಲು ಸಾಧ್ಯವಿಲ್ಲ.

**ಸಿದ್ಧಾಂತ :-** ಮಾತು ಮನಸ್ಸಿನ ಅಧೀನ ಎಂಬುದು ಎಲ್ಲರಿಗೂ ಪ್ರತ್ಯಕ್ಷದಿಂದ ಸಿದ್ಧವಾಗಿದೆ. ಇನ್ನು 'ಮನಸಾ ವಾಗ್ರೇ ಸಂಕಲ್ಪಯತ್ಯಥ ವಾಚೌ ವ್ಯಾಹರತಿ' ಎಂಬುದಾಗಿ ವಾಕ್‌ಪ್ರವೃತ್ತಿಯು ಮನಃಪ್ರವೃತ್ತಿಪೂರ್ವಕ ಎಂಬ ಯುಕ್ತಿಯಿಂದ ಸಹಿತವಾದ ವಿಶೇಷಶ್ರುತಿಯಿದೆ. ಈ ಕಾರಣದಿಂದಲೂ ಮನಸ್ಸು ಉತ್ತಮ ಎಂದು ನಿರ್ಣಯ ಮಾಡಬಹುದು. ಹಾಗಾಗಿ ವಾಗ್ದೇವಿಗೆ ಮನೋದೇವನಲ್ಲಿ ಲಯವಿದ್ದೇ ಇದೆ.

ವ್ಯಾಮಿಶ್ರೋಕ್ತಿಯ ವಿರೋಧವಿಲ್ಲ. ಏಕೆಂದರೆ ಅದರ ಅಭಿಪ್ರಾಯ ಬೇರೆಯೇ ಆಗಿದೆ. ಈ ವ್ಯಾಮಿಶ್ರೋಕ್ತಿಯು ಸಂಹಿತಾದಲ್ಲಿ (ಸಂಧಿಯಲ್ಲಿ) ಪೂರ್ವೋತ್ತರ ವರ್ಣದೇವತೆಗಳ ವಿಚಾರದಲ್ಲಿ ಹಾಗೂ ಅವರ ಗುಣಪ್ರಧಾನ ಭಾವದ ವಿಷಯದಲ್ಲಿ ಮಾಂಡೂಕೇಯ ಹಾಗೂ ಅವರ ಜ್ಯೇಷ್ಠಪುತ್ರ ಇವರಿಬ್ಬರ ಮತದಲ್ಲಿರುವ ವಿವಾದವನ್ನು ಕುರಿತಾದದ್ದಾಗಿದೆ. ಈ ವಿಷಯವು ಐತರೇಯಭಾಷ್ಯದಲ್ಲಿ ಸ್ಪಷ್ಟವಾಗಿದೆ.

**ಅಧಿಕರಣದ ಫಲ :-** ವಾಗ್ದೇವಿಗೆ ಮೋಕ್ಷವಿಲ್ಲವಾದ್ದರಿಂದ 'ಅನಿಯಮಃ ಸರ್ವೇಷಾಂ' ಎಂಬಲ್ಲಿ ಹೇಳಿದ್ದು ಸರಿಯಲ್ಲ ಎಂಬುದೇ ಪೂರ್ವಪಕ್ಷ ಫಲ. ವಾಗ್ದೇವಿಗೆ ಮನೋದೇವನಲ್ಲಿ ಲಯವಿದೆಯಾದ್ದರಿಂದ 'ಅನಿಯಮ...' ಎಂಬಲ್ಲಿ ಹೇಳಿದ್ದು ಯುಕ್ತವಾಗಿದೆ ಎಂದು ಹೇಳುವುದೇ ಸಿದ್ಧಾಂತ ಫಲ. ಪ್ರಕೃತಸೂತ್ರದಲ್ಲಿ ವಾಗ್ದೇವಿ ಎಂದರೆ ವಾರುಣೀ, ಸೌಪರ್ಣೀ ಎಂದೂ ಮನೋದೇವ ಎಂದರೆ ಶೇಷ, ಸುಪರ್ಣರೆಂದೂ ತಿಳಿಯಬೇಕು.

'ಅಗ್ನೌ ಸರ್ವೇ ದೇವಾ ವಿಲೀಯಂತೇ ಅಗ್ನಿರಿಂದ್ರೇ' ಇತ್ಯಾದಿ ಶ್ರುತಿಗಳಿಂದ ಸರ್ವದೇವತೆಗಳಿಗೂ ಸ್ವೋತ್ತಮದೇವತೆಗಳಲ್ಲಿ ಲಯ ಎಂದು ಸಿದ್ಧವಾಯಿತು. ಈ ವಿಷಯದಲ್ಲಿ ವ್ಯಾಮಿಶ್ರೋಕ್ತಿಯೇ ಮೊದಲಾದ ಯಾವ ಬಾಧಕವೂ ಇಲ್ಲ.

ಟೀಕಾದಲ್ಲಿರುವ 'ಮನಸಿ ಲೀಯತೇ ನ ವಾ' ಎಂಬ ಸಂದೇಹ ವಾಕ್ಯದಲ್ಲಿ 'ಇತ್ಯನಿರ್ಣಯಃ ಅಥ ಲೀಯತೇ ಏವೇತಿ ನಿರ್ಣಯಃ' ಎಂಬುದಾಗಿ ಶೇಷಪೂರಣ ಮಾಡಿಕೊಳ್ಳಬೇಕು. ಅಥವಾ 'ನೋಭಯಥಾಪಿ ಸಂಭವತಿ' ಎಂಬುದನ್ನು ಇಟ್ಟುಕೊಂಡು ಪೂರ್ವಪಕ್ಷ ಹೊರಟಿದೆ ಎಂಬ ಅಭಿಪ್ರಾಯ-ವನ್ನು ಗ್ರಹಿಸಬೇಕು (ನ ಉಭಯಥಾ ಸಂಭವತಿ ಎಂದರೆ ಅನಿರ್ಣಯದಲ್ಲೇ ಪರ್ಯವಸಾನವಾಯಿತು). ಆಗ ಪೂರ್ವಪಕ್ಷಕ್ಕೂ ಸಂದೇಹಕ್ಕೂ ಅನಾನುಗುಣ್ಯ ಎಂಬ ಶಂಕೆಗೆ ಅವಕಾಶವಿಲ್ಲ (ಇಲ್ಲದೇ ಹೋದರೆ ಮನಸಿ ಲೀಯತೇ ನ ವಾ' ಎಂಬ ಸಂದೇಹಕ್ಕೂ ಅಶಕ್ಯನಿರ್ಣಯ ಎಂಬ ಪೂರ್ವ-ಪಕ್ಷಕ್ಕೂ ಅನಾನುಗುಣ್ಯ ಬಂದೊದಗುತ್ತದೆ).

## ॥ ಓಂ ತನ್ಮನಃ ಪ್ರಾಣ ಉತ್ತರಾತ್ ಓಂ ॥ ೪-೨-೨

ಇಲ್ಲಿನ ಮೂರು ಅಧಿಕರಣಗಳಲ್ಲಿ 'ವಾಙ್ಮನಸಿ ಲೀಯತೇ' ಇತ್ಯಾದಿ ಶ್ರುತಿಯಲ್ಲಿರುವ ಕ್ರಮಕ್ಕನುಸಾರಿಯಾದ ಕ್ರಮವನ್ನು ತಿಳಿಯಬೇಕು. ಮನೋದೇವನಿಗೆ ಭಗವತ್ಪ್ರಾಪ್ತಿ ಎಂಬ ಮೋಕ್ಷ ಇಲ್ಲವೋ ಅಥವಾ ಇದೆಯೋ? ಮನೋದೇವನಿಗೆ ಪ್ರಾಣನಲ್ಲಿ ಲಯವಿಲ್ಲವೋ ಅಥವಾ ಇದೆಯೋ? ಮನೋದೇವನು ಪ್ರಾಣದೇವನಿಗಿಂತ ಅನ್ಯೂನಬಲನೋ ಅಥವಾ ನ್ಯೂನ-ಬಲನೋ? ಮನೋದೇವನ ಹಾಗೂ ಪ್ರಾಣದೇವನ ಚೇಷ್ಟಕತ್ವ ಎಂಬುದು ಸಮವಾಗಿದೆಯೋ ಅಥವಾ ನ್ಯೂನಾಧಿಕಭಾವದಿಂದ ಕೂಡಿದೆಯೋ? ಮನೋದೇವನಿಗೆ ಪ್ರಾಣದೇವನಿಂದ ಉತ್ಪತ್ತಿ ಇಲ್ಲವೋ ಅಥವಾ ಇದೆಯೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

ಮನೋದೇವನಿಗೆ ಪ್ರಾಣದೇವನಲ್ಲಿ ಲಯವಿಲ್ಲ ಎಂದೇ ಪೂರ್ವಪಕ್ಷ. ಏಕೆಂದರೆ ಪ್ರಾಣದೇವನಾದ ಚತುರ್ಮುಖನು ಹೇಗೆ ಸರ್ವತ್ರ ಪ್ರವೃತ್ತಿ-ಹೇತುವಾಗಿದ್ದಾನೋ ಅದೇ ರೀತಿ ಮನೋದೇವನಾದ ಶೇಷನೂ ಸರ್ವತ್ರ ಪ್ರವೃತ್ತಿ ಹೇತುವಾಗಿದ್ದಾನೆ. ಮನೋದೇವನ ಸರ್ವತ್ರಪ್ರವೃತ್ತಿಕಾರಣತ್ವವು ಎಲ್ಲರ ಅನುಭವಸಿದ್ಧವಾದ ಅನ್ವಯವ್ಯತಿರೇಕದಿಂದ (ಮನಸ್ಸಿದ್ದರೆ ಪ್ರವೃತ್ತಿ ಇಲ್ಲದಿದ್ದರೆ ಇಲ್ಲ ಎಂಬ) ಸಿದ್ಧವಾಗಿದೆ. ಹಾಗಾಗಿ ಇಬ್ಬರ ಚೇಷ್ಟಕತ್ವವೂ ಸಮಾನವಾಗಿದೆ. ಆದ್ದರಿಂದಲೇ ಮನೋದೇವನು ಪ್ರಾಣದೇವನಿಗಿಂತ

ಅನ್ಯೂನಬಲನಾಗಿದ್ದಾನೆ. ಹಾಗಾಗಿ ಮನೋದೇವನಿಗೆ ಪ್ರಾಣದೇವನಲ್ಲಿ ಲಯ ಹೇಳಬಾರದು. ಆದ್ದರಿಂದಲೇ ಮನೋದೇವನಿಗೆ ಮೋಕ್ಷವಿಲ್ಲ. ಏಕೆಂದರೆ 'ವಿಪರ್ಯಯೇಣ...' ಎಂಬಲ್ಲಿ ಅಧಿಕಬಲನಲ್ಲೇ ನ್ಯೂನಬಲನಿಗೆ ಲಯ ಎಂದು ಹೇಳಲಾಗಿದೆ. (ಪ್ರಕೃತದಲ್ಲಿ ಮನೋದೇವನಿಗಿಂತ ಪ್ರಾಣ-ದೇವನು ಅಧಿಕಬಲನಲ್ಲವಾದ್ದರಿಂದ ಅವನಲ್ಲಿ ಲಯ ಹೇಳಲು ಸಾಧ್ಯವಿಲ್ಲ. ದೇಹಲಯವೇ ದೇವತೆಗಳ ಮೋಕ್ಷವಾದ್ದರಿಂದ ಮೋಕ್ಷವೂ ಇಲ್ಲ). ಮನಸ್ಸು ಪ್ರಾಣನಿಂದ ಹುಟ್ಟವುದರಿಂದ ಪ್ರಾಣನಲ್ಲಿ ಲಯ ಹೇಳಬಹುದಲ್ಲಾ? ಎಂದರೆ ಇಲ್ಲ. 'ತತ್ಪ್ರಾಕ್ ಶ್ರುತೇಃ' ಎಂಬಲ್ಲಿ ಮನಸ್ಸು ಭಗವಂತನಿಂದ ಹುಟ್ಟಿದೆ ಎಂದು ಹೇಳಲಾಗಿದೆ. (ಹಾಗಾಗಿ ಪ್ರಾಣನಲ್ಲಿ ಲಯ ಸಾಧ್ಯವಿಲ್ಲ).

**ಸಿದ್ಧಾಂತ :-** ಮನೋದೇವನಿಗೆ ಪ್ರಾಣದೇವನಲ್ಲಿ ಲಯವಿದೆ. ಹೇಗೆಂದರೆ, 'ವಾಙ್ಮನಸಿ ಸಂಪದ್ಯತೇ' ಮನಃ ಪ್ರಾಣೇ ಎಂದು ಮನೋದೇವನಿಗೆ ಪ್ರಾಣ ದೇವನಲ್ಲಿ 'ಸಂಪತ್ತಿ' ಶಬ್ದವಾಚ್ಯವಾದ ಲಯವು ಶ್ರುತವಾಗಿದೆ. ಹಾಗಾಗಿ ಮನೋದೇವ ಎನಿಸಿಕೊಂಡ ಶೇಷಾದಿಗಳಿಗೆ ಪ್ರಾಣದೇವನಾದ ಚತುರ್ಮುಖ ನಲ್ಲಿ ಲಯವಿದ್ದೇ ಇದೆ. ಈ ಲಯವು ಇತರ ವಚನಗಳ ಆಧಾರದಿಂದ ವಾಣೀ ದ್ವಾರಾ ಎಂದು ತಿಳಿಯಬೇಕು. ''ಮನ ಉದಕ್ರಾಮತ್'' ಎಂಬ ಐತರೇಯ ಶ್ರುತಿಯಲ್ಲಿ ಬ್ರಹ್ಮನ ದೇಹದಿಂದ ಮನೋದೇವನು ಹೊರಗೆ ಹೋದಾಗ ಬ್ರಹ್ಮದೇಹ ಪತನವಾಗಲಿಲ್ಲ, ಒಳಗೆ ಪ್ರವೇಶ ಮಾಡಿದಾಗ ಬ್ರಹ್ಮದೇಹದ ಉತ್ಥಾನವಾಗಲಿಲ್ಲ. ಆದರೆ, ಪ್ರಾಣದೇವನು ಬ್ರಹ್ಮದೇಹದಿಂದ ಹೊರಗೆ ಹೋದಾಗ ಬ್ರಹ್ಮದೇಹದ ಪತನವಾಯಿತು. ಒಳಗೆ ಪ್ರವೇಶಮಾಡಿದಾಗ ಬ್ರಹ್ಮದೇಹದ ಉತ್ಥಾನವಾಯಿತು ಎಂದು ಶ್ರುತವಾಗಿದೆ. ಹಾಗಾಗಿ ಮನೋದೇವನಿಗಿಂತ ಪ್ರಾಣದೇವನು ಅಧಿಕ ಬಲಶಾಲಿ ಎಂದು ಸಿದ್ಧ-ವಾಯಿತು. ಆದ್ದರಿಂದಲೇ ಇಬ್ಬರಲ್ಲಿರುವ ಚೇಷ್ಟಕತ್ವವೂ ಒಂದೇ ರೀತಿ-ಯಾಗಿಲ್ಲ. ನ್ಯೂನಾಧಿಕರೂಪವಾಗೇ ಇದೆ ಎಂದು ಹೇಳಬೇಕು. ಮನೋ-ದೇವನು ಭಗವಂತನಿಂದ ಹುಟ್ಟಿದ ಎಂಬುದನ್ನೂ ವಿಯದಧಿಕರಣ-ನ್ಯಾಯದಿಂದ ಪ್ರಾಣದ್ವಾರಾ ಎಂದು ಇಟ್ಟುಕೊಳ್ಳಬೇಕು. ಇನ್ನು 'ವಾಯೋ-ರ್ವಾವ ರುದ್ರ ಉದೇತಿ' ಎಂಬ ಸ್ಪಷ್ಟಶ್ರುತಿಯೂ ಇದೆ. ಹಾಗಾಗಿ ಮನಸ್ಸು ಪ್ರಾಣನಿಂದ ಹುಟ್ಟುತ್ತದೆ ಎಂದು ಸಿದ್ಧವಾಯಿತು. ಮನೋದೇವನಿಗೆ

ಪ್ರಾಣನಲ್ಲಿ ಲಯ ಹೇಳಬಹುದಾದ್ದರಿಂದ ಮನೋದೇವನಿಗೆ ಮೋಕ್ಷವಿದೆ ಎಂದು ಸಿದ್ಧವಾಯಿತು.

**ಅಧಿಕರಣ ಫಲ** :- ಹಿಂದೆ ಹೇಳಿದಂತೆ 'ಅನಿಯಮಃ ಸರ್ವೇಷಾಂ' ಎಂಬ ಆಕ್ಷೇಪ ಹಾಗೂ ಸಮಾಧಾನವೇ ಈ ಅಧಿಕರಣದ ಪೂರ್ವಪಕ್ಷ ಹಾಗೂ ಸಿದ್ಧಾಂತ ಫಲ.

## ॥ ಓಂ ಸೋಽಧ್ಯಕ್ಷೇ ತದುಪಗಮಾದಿಭ್ಯಃ ಓಂ ॥ ೪-೨-೩

ಹಿಂದಿನಂತೆ ಇಲ್ಲಿಯೂ ಕೂಡ ಶ್ರೌತಕ್ರಮಕ್ಕನುಗುಣವಾದ ಸಂಗತಿಯಿದೆ ಎಂದು ತಿಳಿಯಬೇಕು. ಅಥವಾ ಹಿಂದಿನ ಎರಡು ಅಧಿಕರಣಗಳ ಫಲದ ಮೇಲೆ ಆಕ್ಷೇಪ ಮಾಡುತ್ತಿರುವುದರಿಂದ ಆಕ್ಷೇಪಿಕೀ ಎಂಬ ಸಂಗತಿಯಿದೆ ಎಂದು ತಿಳಿಯಬೇಕು. ಪ್ರಾಣಶಬ್ದವಾಚ್ಯನಾದ ವಿರಿಂಚನಿಗೆ ಭಗವತ್ ಪ್ರಾಪ್ತಿ ಎಂಬ ಮೋಕ್ಷದ ಸಲುವಾಗಿ ಹರಿಯಲ್ಲಿ ಲಯವಿಲ್ಲವೋ ಅಥವಾ ಇದೆಯೋ? ವಿರಿಂಚನು ಈಶಾಧೀನ ಎಂಬ ನಿಶ್ಚಯವಿಲ್ಲವೋ ಅಥವಾ ನಿಶ್ಚಯವಿದೆಯೋ? ಪ್ರಾಣನು ಸ್ವತಂತ್ರ ಎಂಬ ವಿಷಯದಲ್ಲಿ ಅನೇಕ ಶ್ರುತಿಗಳಿವೆ, ಅನದ್ಯಮಾನತ್ವೇ ಸತಿ (ಸಂಹರಿಸಲ್ಪಡದೇ ಇರುವವನಾಗಿ) ಅತ್ತೃತ್ವ (ಸಂಹರಿಸುವಿಕೆ) ಎಂಬ ಮಾಹಾತ್ಮ್ಯ ಪ್ರಾಣನಿಗಿದೆ, ಇವೆರಡೂ ನಿರವಕಾಶವೋ ಅಥವಾ ಸಾವಕಾಶವೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ. ವಿರಿಂಚನಿಗೆ ಹರಿಯಲ್ಲಿ ಲಯವಿಲ್ಲ ಎಂದೇ ಪೂರ್ವಪಕ್ಷ. ಏಕೆಂದರೆ 'ನ ಪ್ರಾಣಃ ಕಿಂಚಿದಾಶ್ರಿತಃ', ಯಸ್ಮಿನ್ನಿದಂ ಸರ್ವಮಧ್ಯಾಧ್ರೋರ್ತ್, 'ವಾಯು-ನಾ ವೈ ಗೌತಮ ಸೂತ್ರೇಣ' ಇತ್ಯಾದಿ ಅನೇಕ ಶ್ರುತಿಗಳಿರುವುದರಿಂದ ಪ್ರಾಣನು ಅನ್ಯಾಧೀನನಲ್ಲ ಎಂದು ತಿಳಿಯುತ್ತಿದೆ. ಹಾಗಾಗಿ ಈಶಾಧೀನ ಎಂಬ ನಿಶ್ಚಯ ಸಾಧ್ಯವಿಲ್ಲ.

**ಪ್ರಶ್ನೆ** :- ಉದಾಹರಿಸಿದ ಎಲ್ಲಾ ಶ್ರುತಿಗಳೂ ಸಾವಕಾಶವಾಗಿವೆ. ಹೇಗೆಂದರೆ, 'ಅನನ್ಯೇಶ್ವರತಾ ಪ್ರಾಣೇ ತದನ್ಯೇಶ್ವರ ವರ್ಜನಂ' ಎಂದು ಹೇಳಿದಂತೆ ಪ್ರಾಣನು ಅನನ್ಯೇಶ್ವರ ಎಂದರೆ ವಿಷ್ಣುವನ್ನು ಹೊರತುಪಡಿಸಿ ಬೇರೆ ಈಶ್ವರರಿಲ್ಲ ಎಂದರ್ಥ?

**ಪರಿಹಾರ :-** ಪ್ರಾಣನು ಅನನ್ಯಾಧೀನ ಎಂಬ ವಿಷಯದಲ್ಲಿ ಅನೇಕ ಶ್ರುತಿಗಳಿವೆ. ಆದ್ದರಿಂದಲೇ ಅವುಗಳಿಗೆ ಬಹುತ್ವ ಪ್ರಯುಕ್ತವಾದ ಪ್ರಾಬಲ್ಯ-ವಿದೆ. ಇಂತಹ ಶ್ರುತಿಗಳಿಗೆ 'ಅನನ್ಯೇಶ್ವರತಾ ಪ್ರಾಣೇ...' ಎಂಬ ಒಂದು ದುರ್ಬಲ ವಾಕ್ಯದಿಂದ ಬೇರೆ ಅರ್ಥವನ್ನು ಕಲ್ಪನೆ ಮಾಡುವುದು ಸರಿಯಲ್ಲ. ಜೊತೆಗೆ 'ಮಹಾಂತಮಸ್ಯ ಮಹಿಮಾನಮಾಹುಃ ಅನದ್ಯಮಾನೋ ಯದ-ನ್ನಮತ್ತಿ' ಎಂಬಲ್ಲಿ ಪ್ರಾಣನಿಗೆ ಲಯವಿಲ್ಲ ಎಂದು ಹೇಳಲಾಗಿದೆ.

**ಸಿದ್ಧಾಂತ :-** ಪ್ರಾಣಪದವಾಚ್ಯನಾದ ವಿರಿಂಚನಿಗೆ ಹರಿಯಲ್ಲಿ ಲಯ-ವಿದ್ದೇ ಇದೆ. ಏಕೆಂದರೆ, ಪ್ರಾಣನು ಸ್ವತಂತ್ರ ಎಂಬ ವಿಷಯದಲ್ಲಿ ಹೇಗೆ ಅನೇಕ ಶ್ರುತಿಗಳಿವೆಯೋ ಹಾಗೆ ಪ್ರಾಣನು ಈಶಾಧೀನ ಎಂಬ ವಿಷಯದಲ್ಲೂ 'ಪ್ರಾಣಃ ಪರಸ್ಯಾಂ ದೇವತಾಯಾಂ', 'ಪ್ರಾಣಃ ಪರಮುಪಗಚ್ಛತಿ', ಪ್ರಾಣಃ ಪರಮನುಪ್ರಾಣಿತಿ' ಇತ್ಯಾದಿ ಅನೇಕ ಶ್ರುತಿಗಳಿವೆ. ಹಾಗಾದರೆ ಎರಡೂ ವಿಷಯದಲ್ಲಿ ಶ್ರುತಿಬಾಹುಲ್ಯವಿರುವುದರಿಂದ ಪ್ರಾಣನು ಈಶಾಧೀನ ಎಂದು ನಿರ್ಧಾರ ಮಾಡಲು ಸಾಧ್ಯವಿಲ್ಲ ಎನ್ನಬಾರದು ಏಕೆಂದರೆ, ಸ್ವಾತಂತ್ರ್ಯ ಶ್ರುತಿಗಳು ಸಾವಕಾಶವಾಗಿವೆ. 'ಸರ್ವೇ ಪ್ರಾಣಮುಪಗಚ್ಛಂತಿ', 'ಪ್ರಾಣಂ ದೇವಾ ಅನುಪ್ರಾಣಂತಿ', 'ಅನನ್ಯೇಶ್ವರತಾ ಪ್ರಾಣೇ ತದನ್ಯೇಶ್ವರ ವರ್ಜನಂ' ಇತ್ಯಾದಿ ನಿರವಕಾಶ ಶ್ರುತಿಗಳಿರುವುದರಿಂದ ಪ್ರಾಣ ಸ್ವಾತಂತ್ರ್ಯ ಶ್ರುತಿಗಳಿಗೆ ರುದ್ರಾದಿ ಸರ್ವೋಪಜೀವ್ಯತ್ವವನ್ನು ಹಾಗು ಭಗವಂತನನ್ನು ಬಿಟ್ಟು ಬೇರೆ ಈಶ್ವರರಿಲ್ಲ ಎಂಬರ್ಥವನ್ನು ಹೇಳಬೇಕು. ಇನ್ನು ಅನದ್ಯಮಾನತ್ವ ಎಂದರೆ ಭಗವಂತನನ್ನು ಹೊರತುಪಡಿಸಿ ಉಳಿದವರಿಂದ ಸಂಹರಿಸಲ್ಪಡುವು ದಿಲ್ಲ ಎಂದರ್ಥ. (ಹಾಗಾಗಿ ಅನದ್ಯಮಾನತ್ವೇ ಸತಿ ಅತೃತ್ವ ಎಂಬ ಮಾಹಾತ್ಮ್ಯದ ವಿರೋಧವೂ ಇಲ್ಲ). 'ಪ್ರಾಣಸ್ತೇಜಸಿ' ಎಂಬ ಶ್ರುತಿಯಲ್ಲಿ ತೇಜಸ ಶಬ್ದವಾಚ್ಯವಾದ ಶ್ರೀತತ್ವದಲ್ಲಿ ಪ್ರಾಣನಿಗೆ ಲಯ ಶ್ರುತವಾಗಿದೆಯ ಲ್ಲಾ? ಎಂದರೆ 'ಪ್ರಾಣಸ್ಯ ತೇಜಸಿ ಲಯೋ ಮಾರ್ಗಮಾತ್ರಮ್' ಎಂದು ಸ್ಮೃತಿ ಇರುವುದರಿಂದ ಪ್ರಾಣನಿಗೆ (ವಿರಿಂಚನಿಗೆ) ಲಕ್ಷ್ಮಿಯ ಪ್ರಾಪ್ತಿಯಷ್ಟೇ ಹೊರತು ಲಕ್ಷ್ಮೀದೇವಿಯಲ್ಲಿ ಲಯವಿಲ್ಲ. ಆದರೆ ವಿರಿಂಚನು ಪ್ರಾಣನಾಗಿದ್ದಾಗ ಅವನಿಗೆ ಶ್ರೀತತ್ವದಲ್ಲೇ ಲಯ ಎಂದು ತಿಳಿಯಬೇಕು. (ಶ್ರೀತತ್ವದಲ್ಲಿ ಲಯವಾದ್ದರಿಂದಲೇ ಮತ್ತೆ ಸಂಸಾರಪ್ರಾಪ್ತಿ). 'ಚಕ್ಷುರಾದಿವತ್ತು

ತತ್ಸಹಶಿಷ್ಟ್ಯಾದಿಭ್ಯಃ' ಎಂಬಲ್ಲಿಯೇ ಪ್ರಾಣನು ಈಶ್ವರವಶ ಎಂದು ಹೇಳಿಯಾಗಿದೆ. ಹಾಗಾಗಿ ಈ ಅಧಿಕರಣ ವ್ಯರ್ಥ ಎಂದು ಶಂಕಾ ಮಾಡಬಾರದು. ಏಕೆಂದರೆ ಅಲ್ಲಿ ಈಶವಶತ್ವವನ್ನು ಹೇಳಿದ್ದರೂ ಇಲ್ಲಿ ಪ್ರಾಣನಿಗೆ ಸ್ವಾತಂತ್ರ್ಯವನ್ನು ಹೇಳುವ ಅನೇಕ ಶ್ರುತಿಗಳನ್ನು ಆಧರಿಸಿ ವಿಶೇಷಶಂಕಾ ಮಾಡುತ್ತಿರುವುದರಿಂದ ಗತಾರ್ಥತಾ ಎಂಬ ದೋಷ ಬರುವುದಿಲ್ಲ.

**ಅಧಿಕರಣ ಫಲ** :- ವಿರಿಂಚನಿಗೆ ಲಯವಿಲ್ಲದೇ ಹೋದರೆ ಅವನಿಗೆ ಮೋಕ್ಷವಿಲ್ಲ ಎಂದಾಗುತ್ತದೆ. ಆಗ ವಿರಿಂಚನಲ್ಲಿ ಪ್ರವಿಷ್ಟರಾದ ಅಶೇಷಜ್ಞಾನಿಗಳಿಗೂ ಮೋಕ್ಷವಿಲ್ಲ ಎಂದಾಗುತ್ತದೆ. ಆಗ ಹಿಂದಿನ ಎರಡು ಅಧಿಕರಣಗಳಲ್ಲಿ ಹೇಳಿದ್ದು ಮತ್ತು ಅದರ ಮೂಲಕ 'ಅನಿಯಮಃ ಸರ್ವೇಷಾಂ' ಎಂಬಲ್ಲಿ ಹೇಳಿದ್ದು ತಪ್ಪಾಗುತ್ತದೆ. ಇದು ಪೂರ್ವಪಕ್ಷ ಫಲ. ಈ ಆಕ್ಷೇಪದ ಸಮಾಧಾನವೇ ಸಿದ್ಧಾಂತ ಫಲ.

## ॥ ಓಂ ಭೂತೇಷು ತಚ್ಛ್ರುತೇಃ ಓಂ ॥ ೪-೨-೪

ಹಿಂದೆ ಹೇಳಿದ್ದರ ಮೇಲಿನ ಆಕ್ಷೇಪದಿಂದ ಈ ಅಧಿಕರಣ ಆರಂಭವಾಗುತ್ತಿದೆಯಾದ್ದರಿಂದ ಆಕ್ಷೇಪಿಕೀ ಎಂಬ ಸಂಗತಿಯಿದೆ. 'ವಾಙ್ಮನಸಿ' ಇತ್ಯಾದಿ ಶ್ರುತಿಗಳಲ್ಲಿ ವಿಶೇಷವಾಗಿ ಹೇಳಲ್ಪಟ್ಟ ದೇವತೆಗಳನ್ನು ಬಿಟ್ಟು ಉಳಿದ ದೇವತೆಗಳಿಗೆ ಭಗವತ್ಪ್ರಾಪ್ತಿರೂಪ ಮೋಕ್ಷಕ್ಕಾಗಿ ಒಬ್ಬನೇ ಭೂತಾಭಿಮಾನಿಯಲ್ಲಿ ಲಯವೋ ಅಥವಾ ಬೇರೆ ಭೂತಾಭಿಮಾನಿಗಳಲ್ಲೂ ಲಯವಿದೆಯೋ? 'ಅಗ್ನೌ ಸರ್ವೇ ದೇವಾ ವಿಲೀಯಂತೇ' ಎಂಬ ಶ್ರುತಿಯು ಪ್ರತೀತಾರ್ಥದಲ್ಲಿ ನಿರ್ಣಾಯಕವಾಗಿದೆಯೋ (ಅಸಂಕುಚಿತಾರ್ಥವಾಗಿದೆಯೋ ಎಂದರ್ಥ) ಅಥವಾ ಇಲ್ಲವೋ (ಅರ್ಥಸಂಕೋಚ ಮಾಡಬೇಕೋ)? ಇನ್ನಿತರ ಭೂತಮಾನಿಗಳಲ್ಲಿ ಲಯ ಎಂಬುದಕ್ಕೆ ಪ್ರಮಾಣವಿಲ್ಲವೋ ಹಾಗೇ ಹಿಂದೆ ಹೇಳಿದ ನ್ಯಾಯವು (ಅಧಮರಿಗೆ ಉತ್ತಮರಲ್ಲಿ ಲಯ) ನಿರ್ಣಾಯಕವಲ್ಲವೋ ಅಥವಾ ಪ್ರಮಾಣವಿದ್ದು ಹಿಂದೆ ಹೇಳಿದ ನ್ಯಾಯವು ನಿರ್ಣಾಯಕವೇ ಆಗಿದೆಯೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ** :- 'ಅಗ್ನೌ ಸರ್ವೇದೇವಾ ವಿಲೀಯಂತೇ' ಎಂಬ ಶ್ರುತಿಯಿರುವುದರಿಂದ ಅಗ್ನಿದೇವನಲ್ಲೇ ಎಲ್ಲಾ ದೇವತೆಗಳಿಗೂ ಲಯವಾಗುತ್ತದೆ ಎನ್ನಬೇಕು. ಇತರ ಭೂತಾಭಿಮಾನಿಗಳಲ್ಲಿ ಲಯವಾಗುತ್ತದೆ ಎನ್ನುವುದಕ್ಕೆ ಯಾವುದೇ ಪ್ರಮಾಣವಿಲ್ಲ. ಯಾರು ಯಾರಿಂದ ನಿಯಮಿಸಲಪಡುತ್ತಾರೋ ಅವರಿಗೆ ಅವರಲ್ಲಿ ಲಯ ಎಂಬ ಹಿಂದೆ ಹೇಳಲ್ಪಟ್ಟ ನ್ಯಾಯವು, ನಿಯಾಮಕರು ಅನೇಕ ಜನ ಇರುವುದರಿಂದ ನಿರ್ಣಾಯಕವಲ್ಲ. ಹಾಗಾಗಿ ಸ್ವಸ್ವನಿಯಮಾಕರಲ್ಲಿ ಲಯ ಎಂದು ಹಿಂದೆ ಹೇಳಿದ್ದು ಸರಿಯಲ್ಲ.

**ಸಿದ್ಧಾಂತ** :- 'ಭೂತೇಷು ದೇವಾ ವಿಲೀಯಂತೇ' ಎಂದು ಭಾಷ್ಯದಲ್ಲಿ ಹೇಳಿದ ಶ್ರುತಿಗೆ ಅನುಸಾರವಾಗಿ ಐದು ಜನ ಭೂತಾಭಿಮಾನಿಗಳಲ್ಲೂ ಅವರವರಿಗೆ ಯಾರ್ಯಾರು ನಿಯಾಮಕರೋ ಅದಕ್ಕನುಗುಣವಾಗಿ ದೇವತೆಗಳಿಗೆ ಲಯವಿದೆ ಎಂದು ಹೇಳಬೇಕು. ನಿಯಾಮಕರು ಅನೇಕಜನ ಇದ್ದರೂ ಕೂಡ 'ಅಗ್ನೌ ಸರ್ವೇ ದೇವಾ ವಿಲೀಯತೇ ಅಗ್ನಿರಿಂದ್ರೇ ಇಂದ್ರ ಉಮಾಯಾಂ ಉಮಾ ರುದ್ರೇ' ಇತ್ಯಾದಿ ಶ್ರುತಿಗಳಿಂದ ನಿರ್ಣಯ ಸಾಧ್ಯವಿದೆ. ಆದ್ದರಿಂದಲೇ ಹಿಂದೆ ಹೇಳಿದ ನ್ಯಾಯವು ಅನಿರ್ಣಾಯಕವಲ್ಲ.

**ಅಧಿಕರಣ ಫಲ** :- ಹಿಂದೆ ಯಾರು ಯಾರಿಗೆ ನಿಯಮಕರೋ ಅವರಲ್ಲಿ ನಿಯಮ್ಯರಾದವರಿಗೆ ಲಯ ಎಂದು ಹೇಳಲಾಗಿದೆ. ಅದರ ಮೇಲಿನ ಆಕ್ಷೇಪ ಹಾಗೂ ಸಮಾಧಾನವೇ ಈ ಅಧಿಕರಣದ ಫಲ(ಅಗ್ನಿಯಲ್ಲೇ ಸರ್ವದೇವತೆಗಳಿಗೂ ಲಯ ಎಂದಾದರೆ ಆಗ ಸ್ವಸ್ವನಿಯಮಾಕರಲ್ಲಿ ಲಯ ಎನ್ನುವುದು ಕೂಡುವುದಿಲ್ಲ).

## ॥ ಓಂ ನೈಕಸ್ಮಿನ್ದರ್ಶಯತೋ ಹಿ ಓಂ ॥ ೪-೨-೫

ಈ ಅಧಿಕರಣದಲ್ಲಿಯೂ ಹಿಂದಿನ ಅಧಿಕರಣದ ಮೇಲಿನ ಆಕ್ಷೇಪದಿಂದ ಶಂಕಾ ಮಾಡುತ್ತಿರುವುದರಿಂದ ಸಂಗತಿಯಿದೆ.

ಪೂರ್ವಪ್ರಕೃತರಾದ ದೇವತೆಗಳು, ಭಗವತ್ಪ್ರಾಪ್ತಿ ರೂಪಮೋಕ್ಷಕ್ಕಾಗಿ ಅಗ್ನಿಯಲ್ಲೇ ಲಯ ಹೊಂದುತ್ತಾರೋ ಅಥವಾ ಐದು

ಭೂತಾಭಿಮಾನಿಗಳಲ್ಲೂ ಲಯ ಹೊಂದುತ್ತಾರೋ? 'ಭೂತೇಷು ದೇವಾ ವಿಲೀಯಂತೇ' ಎಂಬ ಹಿಂದೆ ಹೇಳಿದ ಶ್ರುತಿಯು ಸಾವಕಾಶವೋ ಅಥವಾ ನಿರವಕಾಶವೋ? 'ಅಗ್ನೌ ಸರ್ವೇ ದೇವಾಃ' ಎಂಬ ಶ್ರುತಿಯ ಅನ್ಯಥಾನು-ಪಪತ್ತಿಯು (ಬೇರೆ ಅರ್ಥ ಮಾಡಲು ಸಾಧ್ಯವಿಲ್ಲ ಎಂಬುದು) ನಿರವ-ಕಾಶವೋ ಅಥವಾ ಸಾವಕಾಶವೋ? 'ಪಂಚಸ್ವಪಿ' (ಐದು ಜನರಲ್ಲೂ ಲಯ) ಎಂಬುದಕ್ಕೆ ವಿಶೇಷಪ್ರಮಾಣ ಇಲ್ಲವೋ ಅಥವಾ ಇದೆಯೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ** :- 'ಪಂಚಸ್ವಪಿ' ಎನ್ನುವುದಕ್ಕೆ ವಿಶೇಷಪ್ರಮಾಣವಿಲ್ಲ. ಹಾಗಾಗಿ 'ಅಗ್ನೌ' ಎಂಬ ಶ್ರುತಿಯ ಅನ್ಯಥಾನುಪಪತ್ತಿಯು ಬೇರೆ ರೀತಿ ಕೂಡಿಸಲು ಸಾಧ್ಯವಿಲ್ಲವಾಗಿ ನಿರವಕಾಶವಾಗಿದೆ. 'ಭೂತೇಷು...' ಎಂಬ ಶ್ರುತಿಯಲ್ಲಿರುವ ಬಹುವಚನವನ್ನು ಬೇರೆ ರೀತಿ ಕೂಡಿಸಲು ಸಾಧ್ಯವಿದೆ. ಹೇಗೆಂದರೆ, ಅಗ್ನಿಯಲ್ಲೇ ಸರ್ವದೇವತೆಗಳಿಗೂ ಲಯ ಎಂದಾದರೂ, ಅಗ್ನಿಯು ತನಗೆ ಜನಕವಾದ ವಾಯುವಿನಲ್ಲಿ ವಾಯುವು ಸ್ವಜನಕವಾದ ಆಕಾಶದಲ್ಲಿ ಲಯ ಹೊಂದುವುದದರಿಂದ ಪರಂಪರಾಸಂಬಂಧದಿಂದ ಐವರಲ್ಲೂ ಲಯ ಕೂಡುತ್ತದೆ. ಹಾಗಾಗಿ ಈ ಶ್ರುತಿಯು ಸಾವಕಾಶವಾಗಿದೆ. ಆದ್ದರಿಂದ ಅಗ್ನಿಯಲ್ಲೇ ಸರ್ವದೇವತೆಗಳಿಗೂ ಲಯ ಒಪ್ಪಬೇಕು. ಐದು ಜನರಲ್ಲಿ ಲಯ ಎಂದು ಹಿಂದೆ ಹೇಳಿದ್ದು ಸರಿಯಲ್ಲ.

**ಸಿದ್ಧಾಂತ** :- 'ಪೃಥಿವ್ಯಾಂ ಋಭವೋ ವಿಲೀಯಂತೇ', 'ಋಭವಃ ಪೃಥಿವ್ಯಾಮ್' ಎಂಬ ಭಾಷ್ಯೋಕ್ತ ಪ್ರಮಾಣಗಳಲ್ಲಿ ಪ್ರತ್ಯೇಕವಾಗಿ ಐದು ಜನ ಭೂತಾಭಿಮಾನಿಗಳಲ್ಲೂ ಋಭು ಮೊದಲಾದ ದೇವತೆಗಳಿಗೆ ಲಯ ಶ್ರುತ-ವಾಗಿದೆ. ಹಾಗಾಗಿ 'ಅಗ್ನೌ ಸರ್ವೇ ದೇವಾ' ಎಂಬ ಶ್ರುತಿಗೆ 'ಅಗ್ನೌವಗ್ನಯಃ ವಾಯಾವಿಂದ್ರಃ' ಎಂಬ ಶ್ರುತಿಯಲ್ಲಿ ಹೇಳಿದಂತೆ, ಅಗ್ನಿಯಲ್ಲಿ ಅಗ್ನಿಪುತ್ರರೂ ಹಾಗೇ ಇತರ ಭೂತಗಳಲ್ಲಿ ಪ್ರವೇಶವಿಲ್ಲದೇ ಇರುವ ಎಲ್ಲಾ ಅಧಮ-ದೇವತೆಗಳಿಗೆ ಲಯ ಎಂದು ಅರ್ಥ ಹೇಳಬೇಕು. ಹೀಗೆ ಈ ಶ್ರುತಿಯು ಸಾವಕಾಶವಾಗಿದೆ. 'ಅಗ್ನೌ ...' ಎಂಬ ಶ್ರುತಿಯು ಸಾವಕಾಶವಾದ್ದರಿಂದಲೇ ಭೂತೇಷು ಎಂಬ ಶ್ರುತಿಗೆ ಪರಂಪರಯಾ ಲಯವನ್ನು ಹೇಳುತ್ತಿದೆ ಎಂಬ

ಅಮುಖ್ಯಾರ್ಥವನ್ನು ಕಲ್ಪನೆ ಮಾಡುವುದಕ್ಕೆ ಯಾವುದೇ ಕಲ್ಪಕ ಇಲ್ಲ ಎಂದಾಗುತ್ತದೆ (ಅಗ್ನೌ ಎಂಬ ಶ್ರುತಿಯು ನಿರವಕಾಶವಾಗಿದ್ದರೆ ಅದೇ ಕಲ್ಪಕ-ವಾಗುತ್ತಿತ್ತು. ಆದರೆ ಹಾಗಿಲ್ಲ). ಹಾಗಾಗಿ 'ಭೂತೇಷು...' ಎಂಬ ನಿರವಕಾಶ ವಾದ ಹಿಂದೆ ಹೇಳಿದ ಶ್ರುತಿಯಿಂದ ಐದು ಜನ ಭೂತಾಭಿಮಾನಿಗಳಲ್ಲೂ ದೇವತೆಗಳಿಗೆ ಲಯ ಸಿದ್ಧವಾಗುವುದರಿಂದ ಹಿಂದೆ ಹೇಳಿದ ಐದು ಜನರಲ್ಲೂ ಲಯ ಎಂಬುದು ಯುಕ್ತವೇ ಆಗಿದೆ.

**ಅಧಿಕರಣ ಫಲ** :- ಅಧಮರಿಗೆ ಉತ್ತಮರಲ್ಲಿ ಲಯ ಎಂದು ಹಿಂದೆ ಹೇಳಿದ್ದರ ಸಮರ್ಥನೆಯೇ ಈ ಅಧಿಕರಣದ ಫಲ.

## ॥ ಓಂ ಸಮನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ಓಂ ॥ ೪-೪-೬

ತದಧೀನತ್ವ ಯುಕ್ತಿ ಹಾಗೂ ವಿಶೇಷ ಶ್ರುತಿ ಇವುಗಳಿಂದ ಹಿಂದೆ ಹೇಳಿದ ಸಿದ್ಧಾಂತ ನ್ಯಾಯವನ್ನು ಇಟ್ಟುಕೊಂಡೇ ಶಂಕಾ ಮಾಡುತ್ತಿರುವುದರಿಂದ ಈ ಅಧಿಕರಣದಲ್ಲಿ ಆಪವಾದಿಕೀ ಎಂಬ ಸಂಗತಿಯಿದೆ. ಪ್ರಾಣನ ವಿಚಾರವಾದ ಮೇಲೆ ಪ್ರಾಣನಿಗಿಂತ ಉತ್ತಮಳಾದ್ದರಿಂದ ಬುದ್ಧಿಯಲ್ಲಿ ಉಪಸ್ಥಿತಳಾದ, ಹೀಗೆ ಪ್ರಕೃತಳಾದ ಚಿತ್‌ಪ್ರಕೃತಿಯು ಅಥವಾ ಶ್ರೌತಕ್ರಮದಿಂದ ಪ್ರಕೃತಳಾದ ಚಿತ್‌ಪ್ರಕೃತಿಯು ಭಗವಂತನಲ್ಲಿ ಲಯ ಹೊಂದುತ್ತಾಳೋ ಅಥವಾ ಇಲ್ಲವೋ? ಹಿಂದೆ ಹೇಳಿದ ತದಧೀನತ್ವ ಎಂಬ ಯುಕ್ತಿ ಹಾಗೂ 'ತೇಜಃ ಪರಸ್ಯಾಂ ದೇವತಾ ಯಾಂ' ಎಂಬ ವಿಶೇಷಶ್ರುತಿ ಇವೆರಡೂ ನಿರವಕಾಶವಾಗಿದೆಯೋ ಅಥವಾ ಸಾವಕಾಶವೋ? 'ಕಾಮಾದಿತರತ್ರ...' ಎಂಬಲ್ಲಿ ಹೇಳಿದ, ಚಿತ್‌ಪ್ರಕೃತಿಯಾದ ಲಕ್ಷ್ಮೀದೇವಿಗೆ ಸಂಸಾರವಿಲ್ಲ ಎಂಬುದು ಯುಕ್ತವಲ್ಲವೋ ಅಥವಾ ಯುಕ್ತವೋ? ಮುಕ್ತತ್ವವು ಲಕ್ಷ್ಮೀದೇವಿಗೆ ಆಗಂತುಕವೋ ಅಥವಾ ಸ್ವಾಭಾವಿಕವೋ? ಮುಕ್ತತ್ವವು ಸ್ವಾಭಾವಿಕವಾದರೆ ಅವಳಿಗೆ ಭಗವಂತನಿಂದ ಸರ್ವಸಾಮ್ಯ ಬರುತ್ತದೋ ಅಥವಾ ಇಲ್ಲವೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ** :- ಭಗವದಧೀನತ್ವ ಎಂಬ ಯುಕ್ತಿ ಹಾಗೂ 'ತೇಜಃ ಪರಸ್ಯಾಂ...' ಎಂಬ ಶ್ರುತಿ ಇರುವುದರಿಂದ ಲಕ್ಷ್ಮೀದೇವಿಗೂ ಭಗವಂತನಲ್ಲಿ ಲಯವಿದೆ ಎಂದು ಒಪ್ಪಬೇಕು. ಲಯ ಒಪ್ಪದೇ ಹೋದರೆ ಆಗ, ಇದೇ ತದಧೀನತ್ವ ಯುಕ್ತಿ ಹಾಗೂ ವಿಶೇಷ ಶ್ರುತಿಗಳಿಂದ ವಾಗಾದಿಗಳಿಗೆ ಮನಸ್ಸೇ ಮೊದಲಾದವುಗಳಲ್ಲಿ ಹೇಳಿದ ಲಯವೂ ಸರಿಯಲ್ಲ ಎಂದಾಗುತ್ತದೆ.

ಲಕ್ಷ್ಮೀದೇವಿಗೆ ಸಂಸಾರವಿಲ್ಲವಾದ್ದರಿಂದ ಲಯವಿಲ್ಲ ಎಂದು ಹೇಳಬಾರದು. ಏಕೆಂದರೆ ಸಂಸಾರವಿಲ್ಲ ಎಂಬುದೇ ಕೂಡುವುದಿಲ್ಲ. ಲಕ್ಷ್ಮೀದೇವಿಯು ಮುಕ್ತಳಾದ್ದರಿಂದ ಅವಳಿಗೆ ಸಂಸಾರವಿಲ್ಲ ಎಂದರೆ ಅವಳ ಮುಕ್ತತ್ವವು ಆಗಂತುಕ. ಹಾಗಾಗಿ ಸಂಸಾರವಿಲ್ಲ ಎಂದಾಗುವುದಿಲ್ಲ. ಅವಳ ಮುಕ್ತತ್ವವು ಸ್ವಾಭಾವಿಕ ಎಂದರೆ ಆಗ ಲಕ್ಷ್ಮೀದೇವಿಗೆ ಭಗವಂತನಿಂದ ಸಾಮ್ಯ ಬರಬೇಕಾಗುತ್ತದೆ. ಲಕ್ಷ್ಮೀದೇವಿಯಲ್ಲಿ ನಿತ್ಯಸಂಸಾರರಾಹಿತ್ಯವಿದ್ದರೂ ಬೇರೆ ಗುಣಗಳಿಂದ ವೈಶಿಷ್ಟ್ಯ ಹೇಳಬಹುದು ಎಂದರೆ ಇಲ್ಲ, ನಿತ್ಯಸಂಸಾರರಾಹಿತ್ಯ ಒಂದನ್ನು ಒಪ್ಪಿದರೆ ಇತರ ಎಲ್ಲಾ ಗುಣಗಳನ್ನೂ ಒಪ್ಪಬಹುದಾದದ್ದರಿಂದ ಭಗವಂತನಿಂದ ಸರ್ವಸಾಮ್ಯವೇ ಬಂದೊದಗುತ್ತದೆ.

**ಸಿದ್ಧಾಂತ** :- ಲಕ್ಷ್ಮೀದೇವಿಗೆ ಲಯವಿಲ್ಲ. ಏಕೆಂದರೆ 'ದ್ವೌ ವಾವ ಸೃತ್ಯನುಪಕ್ರಮೌ ಪ್ರಕೃತಿಶ್ಚ ಪರಮಶ್ಚ' ಎಂಬ ಭಾಷ್ಯೋಕ್ತಶ್ರುತಿಯಲ್ಲಿ ಹೇಳಿದಂತೆ ಲಕ್ಷ್ಮೀದೇವಿಯೂ ಭಗವಂತನಂತೆ ಸರ್ವಗತಳು ಹಾಗೂ ನಿತ್ಯಳು. ಆದ್ದರಿಂದಲೇ ಅವಳಿಗೆ ಸಂಸಾರ ಎಂಬುದು ಯಾವ ಕಾಲದಲ್ಲೂ ಇಲ್ಲ. ಆದ್ದರಿಂದಲೇ ನಿತ್ಯಮುಕ್ತಳು. ಅವಳ ಮುಕ್ತತ್ವವು ಭಗವಂತನ ಉಪಾಸನೆಯೇ ಮೊದಲಾದ ಸಾಧನಗಳಿಂದ ಉಂಟಾದದ್ದಲ್ಲ. ಹಾಗಾಗೇ ಅದು ಸ್ವಾಭಾವಿಕ. ಇಂತಹ ನಿತ್ಯಮುಕ್ತಳಾದ ಲಕ್ಷ್ಮೀದೇವಿಗೆ ದೇಹತ್ಯಾಗ ಎಂಬ ಲಯ ಕೂಡುವುದಿಲ್ಲ. ಪರಮಾತ್ಮನಿಗೆ ಹೇಗೆ ಲಯ ಕೂಡುವುದಿಲ್ಲವೋ ಹಾಗೇ. ತದಧೀನತ್ವಯುಕ್ತಿಯಿಂದ ವಾಗಾದಿಗಳಂತೆ ಲಕ್ಷ್ಮಿಯೂ ಕೂಡ ಸ್ವೋತ್ತಮನಾದ ಹರಿಯಲ್ಲಿ ಲಯ ಹೊಂದುತ್ತಾಳೆ ಎಂದೇ ಹಿಂದೆ ಹೇಳಿದೆಯಲ್ಲಾ? ಎಂದರೆ ಹಿಂದೆ ಹೇಳಿದ ಅನುಮಾನ ಸರಿಯಲ್ಲ. ಏಕೆಂದರೆ ಅನುಮಾನವು

ಸಾಂಸಾರಿತ್ವ ಎಂಬ ಉಪಾಧಿಯಿಂದ ಕೂಡಿದೆ. (ತದಧೀನತ್ವ ಎಂಬುದು ಲಯಕ್ಕೆ ಸಾಧಕವಲ್ಲ. ಸಂಸಾರಿತ್ವವೇ ಸಾಧಕ. ಆದರೆ, ಲಕ್ಷ್ಮೀದೇವಿಯಲ್ಲಿ ಸಂಸಾರಿತ್ವ ಇಲ್ಲ ಹಾಗಾಗಿ ಲಯವೂ ಇಲ್ಲ). ಇನ್ನು 'ತೇಜಃ....' ಎಂಬ ವಿಶೇಷಶ್ರುತಿಗೂ ಕೂಡ 'ಹರೇರತ್ಯಂತಸಾಮೀಪ್ಯಂ ಲಯೋ ಲಕ್ಷ್ಮ್ಯಾಃ ಪ್ರಕೀರ್ತಿತಃ' ಎಂಬ ಪ್ರಮಾಣಾನುಸಾರವಾಗಿ ಹರಿಯ ಅತ್ಯಂತ ಸಾಮೀಪ್ಯ-ವನ್ನು ಹೊಂದುತ್ತಾಳೆ ಎಂದು ಅರ್ಥ ಮಾಡಬೇಕು (ಹಾಗಾಗಿ ಈ ಶ್ರುತಿಯು ಸಾವಕಾಶವಾಯಿತು). ಇನ್ನು ಲಕ್ಷ್ಮೀದೇವಿಗೆ ಪರಮಾತ್ಮನಲ್ಲಿ ಸರ್ವಸಾಮ್ಯ ಬರಬೇಕಾಗುತ್ತದೆ ಎಂಬ ಆಕ್ಷೇಪವೂ ಸರಿಯಲ್ಲ. ಏಕೆಂದರೆ 'ತದಪೀತೇ', 'ಸೂಕ್ಷ್ಮಂ', 'ಅಸ್ಯೈವ ವಾ' ಈ ಮೂರು ಸೂತ್ರಗಳಲ್ಲಿ ಹೇಳಿದಂತೆ ಭಗವಂತ-ನಲ್ಲಿ ಮೋಚಕತ್ವ, ಪರಮಸೂಕ್ಷ್ಮತ್ವ, ಜ್ಞಾನಾನಂದಾದಿಗುಣಪರಿಮಾಣ (ಅನಂತ್ಯ) ಆಧಿಕ್ಯ, ಊಷ್ಮಾವತ್ವ (ಇಂದ್ರಿಯ ಅಗೋಚರತ್ವ) ಇದೆ. ಇದಕ್ಕೆ ವಿರುದ್ಧವಾಗಿ ಲಕ್ಷ್ಮೀದೇವಿಯಲ್ಲಿ ಅಮೋಚಕತ್ವ, ಅಸೂಕ್ಷ್ಮತ್ವ, ಜ್ಞಾನಾ-ನಂದಾದಿ ಪರಿಮಾಣನ್ಯೂನತ್ವ, ಅನೂಷ್ಮಾವತ್ವವೇ ಇದೆ. ಹಾಗಾಗಿ ಇಬ್ಬರಿಗೂ ವೈಷಮ್ಯವೇ ಸಿದ್ಧವಾಗುತ್ತದೆ.

**ಪ್ರಶ್ನೆ :-** ಲಕ್ಷ್ಮೀದೇವಿಗೆ ಸರ್ವಸಾಮ್ಯ ಇಲ್ಲ ಎಂದಾದರೆ ಬ್ರಹ್ಮಾದಿಗಳಂತೆ (ಇವರಿಗೆ ಹೇಗೆ ಇಲ್ಲವೋ ಹಾಗೇ) ನಿತ್ಯಮುಕ್ತತ್ವದಿಂದಲೂ ಭಗವತ್‌ಸಾಮ್ಯ ಇರುವುದು ಬೇಡ?

**ಉತ್ತರ :-** 'ನೋಪಮರ್ದೇನ' ಎಂಬ ಸೂತ್ರದಲ್ಲಿ ಭಗವಂತನ ವಿಶೇಷ ಗುಣಗಳನ್ನು ಹೊರತುಪಡಿಸಿ ದೇಶಕಾಲವ್ಯಾಪ್ತಿಯೇ ಮೊದಲಾದ ಕೆಲವು ಗುಣಗಳಿಂದ ಸಾಮ್ಯವನ್ನು ಪ್ರಮಾಣಗಳ ಆಧಾರದಿಂದ ಪ್ರತಿಪಾದಿಸಲಾಗಿದೆ. ಹಾಗಾಗಿ ಮೇಲಿನ ಆಕ್ಷೇಪಕ್ಕೆ ಅವಕಾಶವಿಲ್ಲ.

**ಪ್ರಶ್ನೆ :-** 'ಅಸಮೋ ವಾ ಏಷ ಪರಃ' ಎಂಬ ಶ್ರುತಿಯಲ್ಲಿ ಭಗವಂತನ ಕಿಂಚಿತ್‌ಸಾಮ್ಯವನ್ನೂ ನಿಷೇಧಮಾಡಲಾಗಿದೆ. ಹಾಗಾಗಿ ಕಿಂಚಿತ್‌ಸಾಮ್ಯ-ವಾದರೂ ಹೇಗೆ ಹೇಳಲು ಸಾಧ್ಯ?

**ಉತ್ತರ :-** 'ಪ್ರತಿಷೇಧಾತ್' ಇತ್ಯಾದಿ ಮೂರು ಸೂತ್ರಗಳಲ್ಲಿ ಹೇಳಿದಂತೆ ಈ ಶ್ರುತಿಯು ಜೀವ ವಿಷಯಕವಾಗಿದೆ.

**ಅಧಿಕರಣ ಫಲ :-** ಲಕ್ಷ್ಮೀದೇವಿಗೂ ಸಂಸಾರವಿರುವುದರಿಂದ ಅವಳಿಗೂ ಭಗವಂತನಲ್ಲಿ ಲಯವಿದೆ ಎಂದಾಯಿತು. ಹಾಗಾಗಿ ಲಕ್ಷ್ಮೀದೇವಿಯೂ ಅಧಿಕಾರಿ ಎಂದಾದಳು. ಆಗ 'ಇಯದಾಮನನಾತ್' ಎಂಬಲ್ಲಿ ಹೇಳಿದ ಪ್ರಾಣನೇ ಅಧಿಕಾರಿಗಳಲ್ಲಿ ಕೊನೆಯವನು ಎಂಬುದು ಸರಿಯಲ್ಲ ಎಂದಾಗುತ್ತದೆ. ಇದು ಪೂರ್ವಪಕ್ಷ ಫಲ. ಈ ಆಕ್ಷೇಪದ ಸಮಾಧಾನವೇ ಸಿದ್ಧಾಂತ ಫಲ.

## ।। ಓಂ ತಾನಿ ಪರೇ ತಥಾಹ್ಯಾಹ ಓಂ ।। ೪-೨-೭

ಹಿಂದೆ ''ವಿಲೀನಃ ಪರಮೇ ಹ್ಯಮೃತತ್ವಮೇತಿ'' ಎಂದು ಹೇಳಿದ್ದರಿಂದ ''ಸೋಧ್ಯಕ್ಷೇ'' ಎಂಬಲ್ಲಿ ಹೇಲ್ಪಟ್ಟ ಪ್ರಾಣನಿಗೆ ಅಮೃತತ್ವ ಇರಲಿ. ಆದರೆ ''ಭೂತೇಷು ದೇವಾ ವಿಲೀಯಂತೇ'' ಎಂದು ಹೇಳಿದ್ದರಿಂದ ದೇವತೆಗಳಿಗೆ ಅಮೃತತ್ವವಿಲ್ಲ ಎಂದು ಶಂಕಾ ಮಾಡುತ್ತಿರುವುದರಿಂದ ಸಂಗತಿಯಿದೆ. ''ಭೂತೇಷು ದೇವಾ ವಿಲೀಯಂತೇ'' ಎಂಬಲ್ಲಿ ಹೇಳಲ್ಪಟ್ಟ ದೇವತೆಗಳು ಭಗವಂತನಲ್ಲಿ ಲಯ ಹೊಂದುವುದಿಲ್ಲವೋ ಅಥವಾ ಹೊಂದುತ್ತಾರೋ? ಈ ದೇವತೆಗಳು ಪ್ರಾಣಪದವಾಚ್ಯನಾದ ಚತುರ್ಮುಖನ ಪ್ರತಿಬಿಂಬರೋ ಅಥವಾ ಭಗವಂತನ ಪ್ರತಿಬಿಂಬರೋ? ಹೀಗೆ ಪರಸ್ಪರ ಸಂಗತವಾದ ವಿಚಾರ ಬಂದಿದೆ.

**ಪೂರ್ವಪಕ್ಷ :-** ತದಧೀನತ್ವೇ ಸತಿ ತತ್ಸದೃಶತ್ವ (ಬಿಂಬಕ್ಕೆ ಅಧೀನವಾಗಿದ್ದು ಅದಕ್ಕೆ ಸದೃಶವಾಗಿರುವುದು) ಎಂಬ ಪ್ರತಿಬಿಂಬತ್ವವುಳ್ಳರು ತಮಗೆ ನಿಯಾಮಕರಾದ ಬಿಂಬದಲ್ಲಿ ಲಯ ಹೊಂದುತ್ತಾರೆ. ದೇವತೆಗಳಾದರೋ ''ಪ್ರತಿಬಿಂಬೋ ಹರೇಃ ಪ್ರಾಣಃ ಪ್ರಾಣಸ್ಯಾನ್ಯೇ ಕಲಾಃ ಕ್ರಮಾತ್ ।। ಎಂಬಲ್ಲಿ ಹೇಳಿದಂತೆ ಕ್ರಮವಾಗಿ ಪ್ರಾಣ ಪ್ರತಿಬಿಂಬರು. ಪ್ರಾಣನೊಬ್ಬನೇ ಹರಿಯ ಪ್ರತಿಬಿಂಬ. ಹಾಗಾಗಿ ಅವನೊಬ್ಬನಿಗೆ ಪರಮಾತ್ಮನಲ್ಲಿ ಲಯ ಎಂಬ ಮೋಕ್ಷವಿದೆ ಉಳಿದ ಜ್ಞಾನಿಗಳಿಗಿಲ್ಲ.

ಆದ್ದರಿಂದ ''ಅನಿಯಮಃ ಸರ್ವೇಷಾಂ'' ಎಂಬಲ್ಲಿ ಹೇಳಿದ್ದು ಅಯುಕ್ತ.

**ಸಿದ್ಧಾಂತ :-** ದೇವತೆಗಳು ಕ್ರಮವಾಗಿ ಪ್ರಾಣನ ಪ್ರತಿಬಿಂಬರಾದರೂ ''ಸರ್ವೇ ದೇವಾಃ ಪ್ರಾಣಮಾವಿಶ್ಯ ದೇವೇ ಮುಕ್ತಾ ಲಯಂ ಪರಮೇ ಯಾಂತಿ'' ಎಂಬ ಶ್ರುತಿಯಲ್ಲಿ ಹೇಳಿದಂತೆ ಪ್ರಾಣದ್ವಾರಾ ಪರಮಾತ್ಮನಲ್ಲಿ ಲಯ ಹೊಂದುತ್ತಾರೆ.

ಭಗವಂತನ ಪ್ರತಿಬಿಂಬನಾದ ವಿರಿಂಚನು ಪರಮಾತ್ಮನಲ್ಲಿ ಪ್ರವೇಶ ಮಾಡಿದಾಗ ವಿರಿಂಚನಲ್ಲಿ ಪ್ರವಿಷ್ಟರಾದವರಿಗೂ ಪರಮಾತ್ಮನಲ್ಲಿ ಪ್ರವೇಶವಾಗೇ ಆಗುತ್ತದೆ.

ಇನ್ನು ''ಆಭಾಸ ಏವ ಚ'' ಎಂಬಲ್ಲಿ ಹೇಳಿದಂತೆ ಎಲ್ಲಾ ಜೀವರೂ ಸಾಮಾನ್ಯವಾಗಿ ಭಗವಂತನಿಗೆ ತದಧೀನತ್ವೇ ಸತಿ ತತ್ಸದೃಶತ್ವ ಎಂಬ ಪ್ರತಿಬಿಂಬತ್ವವುಳ್ಳವರೇ ಆಗಿದ್ದಾರೆ. ಹಾಗಾಗಿ ಎಲ್ಲಾ ದೇವತೆಗಳಿಗೂ ಭಗವಂತನಲ್ಲಿ ಪ್ರವೇಶ ಎಂಬ ಮೋಕ್ಷವಿದೆ.

**ಅಧಿಕರಣ ಫಲ :-** ''ಅನಿಯಮಃ ಸರ್ವೇಷಾಂ'' ಎಂಬುದರ ಆಕ್ಷೇಪ ಹಾಗೂ ಸಮಾಧಾನವೇ ಈ ಅಧಿಕರಣದ ಪೂರ್ವಪಕ್ಷ ಹಾಗೂ ಸಿದ್ಧಾಂತ ಫಲ.

## ।। ಓಂ ಅವಿಭಾಗೋ ವಚನಾತ್ ಓಂ ।। ೪-೨-೮

ಹಿಂದೆ ದೇವತೆಗಳಿಗೆ ತದಧೀನತ್ವ ಎಂಬ ಭಗವತ್ಪ್ರತಿಬಿಂಬತ್ವ ಹೇಳಲಾಗಿದೆ. ಅದರ ಮೇಲಿನ ಆಕ್ಷೇಪದಿಂದ ಶಂಕಾ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಸಂಗತಿಯಿದೆ. ಹಿಂದಿನ ಅಧಿಕರಣದಲ್ಲಿ ಮೋಕ್ಷವುಳ್ಳವರು ಎಂದು ಹೇಳಲ್ಪಟ್ಟ ದೇವತೆಗಳು ಮೋಕ್ಷದಲ್ಲಿ ಸ್ವತಂತ್ರರೋ ಅಥವಾ ಈಶ್ವರನ ಅಧೀನರೋ? ಈಶ್ವರಾಧೀನರು ಎಂದಾದರೆ, ಸಂಸಾರ ದುಃಖಾದಿಗಳು ಇರಬೇಕು. ಹಾಗೂ ಶ್ರುತಿಸಿದ್ಧವಾದ ಸತ್ಯಕಾಮತ್ವಾದಿಗಳು ಇರಬಾರದು ಎಂಬುದು ಸರಿಯೋ ಅಲ್ಲವೋ ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ :-** ಮುಕ್ತರು ಪರಾಧೀನರಾದರೆ ಅವರಿಗೂ ಸಂಸಾರ-ದುಃಖಾದಿಗಳು ಇರಬೇಕಾದ್ದರಿಂದ ಹಾಗು ''ಏತೇ ದೇವಾ

ಏತಮಾತ್ಮಾನಮನುವಿಶ್ಯ ಸತ್ಯಾಃ ಸತ್ಯಕಾಮಾಃ'' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟ ಸತ್ಯಕಾಮತ್ವಾದಿಗಳು ಕೂಡುವುದಿಲ್ಲವಾದ್ದರಿಂದ ಮುಕ್ತರು ಪರಾಧೀನರಲ್ಲ. ಹಾಗಾಗಿ ಹಿಂದೆ ಹೇಳಿದ ಈಶಾಧೀನತ್ವ ಎಂಬ ಪ್ರತಿಬಿಂಬತ್ವ ಅವರಿಗೆ ಕೂಡುವುದಿಲ್ಲ.

**ಸಿದ್ಧಾಂತ :-** ಮುಕ್ತರೂ ಈಶಾಧೀನರೇ. ಹೇಗೆಂದರೆ ''ಕಾಮೇನ ಮೇ ಕಾಮ ಆಗಾತ್'' ''ಮುಕ್ತಾನಾಂ ಸತ್ಯಕಾಮತ್ವಮ್'' ಇತ್ಯಾದಿ ಶ್ರುತಿಸ್ಮೃತಿ-ಗಳಿಂದ, ಶ್ರುತಿಸಿದ್ಧವಾದ ಮುಕ್ತರ ಸತ್ಯಕಾಮತ್ವ ಎಂಬುದು ಈಶಾಧೀನವಾಗಿದೆ ಎಂದು ತಿಳಿಯುತ್ತಿದೆ. ಅವರ ಸತ್ಯಕಾಮತ್ವಾದಿಗಳು ಸ್ವತಂತ್ರವಾಗಿ ಇಲ್ಲ. ಸತ್ಯಕಾಮತ್ವಾದಿಗಳು ಈಶ್ವರೇಚ್ಛಾನುಸಾರಿಯಾಗಿದೆಯಾದ್ದರಿಂದಲೇ ದುಃಖಾದಿಪ್ರಸಕ್ತಿಯೂ ಇಲ್ಲ. ಏಕೆಂದರೆ, ಬಯಸಿದ್ದು ಸಿಗದೇ ಹೋದರೆ ದುಃಖವಾಗುತ್ತದೆ. ಮುಕ್ತರು ಸದಾ ಭಗವದಿಚ್ಛೆಗೆ ಅನುಸಾರವಾಗಿಯೇ ಬಯಸುವುದರಿಂದ ಅವರ ಕಾಮನೆಗಳು ಈಡೇರುವುದಿಲ್ಲ ಎಂದಿಲ್ಲ. ಹಾಗಾಗಿ ಜ್ಞಾನಿಗಳು ಮೋಕ್ಷದಲ್ಲೂ ಭಗವದಧೀನರೇ ಆಗಿರುತ್ತಾರೆ. ಆದ್ದರಿಂದ ಹಿಂದೆ ತದಧೀನತ್ವ ಎಂಬ ಪ್ರತಿಬಿಂಬತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ.

**ಅಧಿಕರಣ ಫಲ :-** ''ಓಂ ವ್ಯತಿಹಾರೋ ...'' ಎಂಬಲ್ಲಿ ಹೇಳಿದ ವಿಷ್ಣುವಿನ ಸರ್ವೋತ್ತಮತ್ವದ ಆಕ್ಷೇಪ ಹಾಗು ಸಮಾಧಾನವೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ.

## ॥ ಓಂ ತದೋಕೋಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ಓಂ ॥ ೪-೨-೯

ಹಿಂದಿನ ಏಳು ಅಧಿಕರಣಗಳಲ್ಲಿ, ಅಧಿಕಾರಿಗಳಲ್ಲಿ ಉತ್ತಮರಾದ್ದರಿಂದ ಮೊದಲು ದೇವತೆಗಳಿಗೆ ಸ್ವಸ್ವಉತ್ತಮರಲ್ಲಿ ದೇಹಲಯ ಎಂಬ ಮೋಕ್ಷವಿದೆ ಎಂದು ಅಪವಾದ ಸಹಿತನಾಗಿ (''ಸಮನಾ...'' ಎಂಬಲ್ಲಿ ಹೇಳಿದಂತೆ ಲಕ್ಷ್ಮೀ-ದೇವಿಯನ್ನು ಬಿಟ್ಟು) ಪ್ರತಿಪಾದನೆ ಮಾಡಲಾಗಿದೆ. ಈ ಅಧಿಕರಣದಲ್ಲಿ

ಜ್ಞಾನಿಗಳಾದ ಮನುಷ್ಯರಿಗೆ ಉತ್ಕ್ರಮಣದಿಂದ ಭಗವತ್ಪ್ರಾಪ್ತಿರೂಪ ಮೋಕ್ಷವಿದೆ ಎಂದು ಹೇಳುತ್ತಿರುವುದರಿಂದ ಹಿಂದಿನ ಅಧಿಕರಣ ಪೇಟಿಕೆಯಿಂದ ಇದಕ್ಕೆ ಸಂಗತಿಯಿದೆ. (ಹಿಂದಿನ ಏಳು ಅಧಿಕರಣಗಳು ಸೇರಿ ಒಂದು ಪೆಟ್ಟಿಗೆ) ಜ್ಞಾನಿಗಳ ಮರಣ (ದೇಹದಿಂದ ಉತ್ಕ್ರಮಣ) ಅಜ್ಞಾನಿಗಳ ಮರಣದಂತೆಯೇ ಇರುತ್ತದೋ ಅಥವಾ ಜ್ಞಾನಶಕ್ತಿಯಿಂದ ಅಜ್ಞಾನಿ ಮರಣಕ್ಕಿಂತ ವಿಲಕ್ಷಣ-ವಾಗಿರುತ್ತದೋ? ಜ್ಞಾನಕ್ಕೆ ಆ ಮರಣದಲ್ಲಿ ವೈಲಕ್ಷಣ್ಯವನ್ನು ತಂದುಕೊಡಲು ಸಾಮರ್ಥ್ಯವಿಲ್ಲವೋ ಅಥವಾ ಇದೆಯೋ? ಪ್ರಾರಬ್ಧಕರ್ಮಶೇಷವು ಜ್ಞಾನಶಕ್ತಿಗೆ ಪ್ರಬಂಧಕವಾಗುತ್ತದೋ ಅಥವಾ ಇಲ್ಲವೋ ? ಜ್ಞಾನವು ತಾನು ಹುಟ್ಟಿದಾಗಿನಿಂದ ಫಲಕೊಡಲು ಸಮರ್ಥವಾಗುತ್ತದೋ ಅಥವಾ ಕರ್ಮ ಕಳೆದ ಮೇಲೋ? ತಾನು ಹುಟ್ಟಿದಾಗಿನಿಂದ ಫಲಪ್ರದವಾಗುತ್ತದೆ ಎಂದರೆ ಅತಿಪ್ರಸಂಗ ಇದೆಯೋ ಅಥವಾ ಇಲ್ಲವೋ? ಹೀಗೆ ಒಂದಕ್ಕೊಂದು ಪೂರಕವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ** :- ಜ್ಞಾನವು ತಾನು ಹುಟ್ಟಿದಾಗಿನಿಂದ, ಅಜ್ಞ ಮೃತಿಗಿಂತ ವೈಲಕ್ಷಣ್ಯವೆಂಬ, ಫಲವನ್ನು ಕೊಡಲು ಸಮರ್ಥ ಎಂದು ಒಪ್ಪಿದರೆ, ಆಗ ಜ್ಞಾನಿಯ ಪ್ರಥಮ ಮರಣವೇ ಅಜ್ಞಮರಣಕ್ಕಿಂತ ವಿಲಕ್ಷಣವಾಗಬೇಕಾಗುತ್ತದೆ. ಹಾಗಾಗಿ ಪ್ರಾರಬ್ಧಕರ್ಮ ಕಳೆದ ನಂತರವೇ ಫಲದಾನ ಸಮರ್ಥವಾಗುತ್ತದೆ. ಪ್ರಾರಬ್ಧವಿದ್ದಾಗ ಅಲ್ಲ ಎಂದು ಜ್ಞಾನದ ಸ್ವಭಾವಕ್ಕೆ ಅಭಿಭವವನ್ನು (ಕುಂಠಿತತ್ವ) ಹೇಳಬೇಕು.

ಪ್ರಾರಬ್ಧಕರ್ಮವಾದರೋ ''ಆದೇಹಂ ಕರ್ಮ'' ಎಂಬಲ್ಲಿ ಹೇಳಿದಂತೆ ದೇಹಪಾತವಾಗುವವರೆಗೂ ಇರುತ್ತದೆ. ಅಂತಹ ಪ್ರಾರಬ್ಧದಿಂದ ಪ್ರತಿಬದ್ಧ-ವಾದ ಶಕ್ತಿಯುಳ್ಳ ಜ್ಞಾನವು ಅಜ್ಞಮೃತಿಗಿಂತ ಜ್ಞಾನಿಮೃತಿಯಲ್ಲಿ ವೈಲಕ್ಷಣ್ಯ-ವನ್ನು ತಂದುಕೊಡಲು ಸಮರ್ಥವಾಗುವುದಿಲ್ಲ.

ಮರಣಕಾಲದಲ್ಲಿ ಪ್ರಾರಬ್ಧವಿರುವುದಿಲ್ಲ ಎನ್ನಬಾರದು. ಏಕೆಂದರೆ, ಅಜ್ಞ ಮರಣವು ಹೇಗೆ ಪ್ರಾರಬ್ಧದಿಂದ ಆಗುತ್ತದೋ ಹಾಗೇ ಜ್ಞಾನಿ ಮರಣವೂ ಪ್ರಾರಬ್ಧದಿಂದಲೇ ಆಗುವುದು.

ಹಾಗಾದರೆ ''ಸ್ವೋದಯಾತ್ ಫಲದಂ ಕರ್ಮ'' ಎಂಬ ಶ್ರುತಿಗೆ ಏನು ಅರ್ಥ ಎಂದರೆ, ಈಶ್ರುತಿಯು ಮರಣವೈಲಕ್ಷಣ್ಯವನ್ನು ಬಿಟ್ಟು ಬೇರೆ ಫಲ-ಗಳನ್ನು ಜ್ಞಾನವು ತಾನು ಹುಟ್ಟಿದಾಗಿನಿಂದ ಕೊಡುತ್ತದೆ ಎಂದು ಹೇಳುತ್ತಿದೆ ಎನ್ನಬೇಕು.

**ಸಿದ್ಧಾಂತ** :- ಜ್ಞಾನವೊಂದೇ ಜ್ಞಾನಿಮರಣಕ್ಕೆ ವೈಲಕ್ಷಣ್ಯವನ್ನು ತಂದು-ಕೊಡುತ್ತದೆ ಎಂದು ನಾವು ಒಪ್ಪಿದರೆ ಆಗ ನೀವು ಹೇಳುವ ಅತಿಪ್ರಸಂಗ ಕೂಡುತ್ತಿತ್ತು.

ಆದರೆ ಹಾಗಿಲ್ಲ. ಮತ್ತೇನೆಂದರೆ, ತನ್ನ ಹೃದಯದಿಂದ ಆರಂಭ ಮಾಡಿ-ಕೊಂಡು ಭಗವತ್ಪ್ರಾಪ್ತಿತನಕ ಇರುವ ಮಾರ್ಗದ ಅನುಸ್ಮೃತಿ ಹಾಗೂ ವಿದ್ಯೆ-ಯಿಂದ ಪ್ರಸನ್ನನಾದ ಹೃದ್ಗತನಾದ ಭಗವಂತನ ಅನುಗ್ರಹದಿಂದ ಸಹಿತವಾದ ಜ್ಞಾನವೇ ವೈಲಕ್ಷಣ್ಯ ಸಂಪಾದಕ ಎಂದು ಹೇಳುತ್ತೇವೆ.

ಮಾರ್ಗಾನುಸ್ಮೃತಿ ಹಾಗೂ ಭಗವತ್ಪ್ರಸಾದ ಇವೆರಡೂ ಪ್ರಾರಬ್ಧಕರ್ಮ ಕಳೆದ ಮೇಲೆ ಉಂಟಾಗುತ್ತದೆ. ಹಾಗಾಗಿ ಪ್ರಥಮ ಮರಣವೇ ವಿಲಕ್ಷಣ-ವಾಗಬೇಕು ಎಂಬ ಅತಿಪ್ರಸಂಗಕ್ಕೆ ಅವಕಾಶವಿಲ್ಲ. ಹಾಗಾಗಿ ಜ್ಞಾನವು ಮಾರ್ಗಾನುಸ್ಮೃತಿ ಹಾಗು ಭಗವದನುಗ್ರಹದಿಂದ ಸಹಿತವಾಗಿ ಜ್ಞಾನಿಮರಣಕ್ಕೆ ಅಜ್ಞಾನಿಮರಣಕ್ಕಿಂತ ವೈಲಕ್ಷಣ್ಯವನ್ನು ತಂದು ಕೊಡುತ್ತದೆ ಎಂಬುದು ಯುಕ್ತವೇ ಆಗಿದೆ.

**ಅಧಿಕರಣ ಫಲ** :- ಜ್ಞಾನಪಾದದಲ್ಲಿ ಹೇಳಿದ ಜ್ಞಾನಸಾಮರ್ಥ್ಯದ ಸಮರ್ಥನೆಯೇ ಈ ಅಧಿಕರಣದ ಫಲ.

ಜ್ಞಾನಿಮರಣವು ಅಜ್ಞಾನಿಮರಣಕ್ಕಿಂತ ವಿಲಕ್ಷಣ ಹೇಗೆ ಎಂದರೆ, ಜ್ಞಾನಿಯು ಮರಣ ಹೊಂದುವಾಗ, ಹೃದಯದಲ್ಲಿರುವ ಭಗವಂತನ ಪ್ರಕಾಶದಿಂದ ಬ್ರಹ್ಮನಾಡಿಯ ದ್ವಾರವು ಪ್ರಕಾಶಿತವಾಗುತ್ತದೆ. ಬ್ರಹ್ಮನಾಡಿಯು ಒಳಗೆ ಯಾವದ್ದೇಹಭಾವಿಯಾದ ಸೂರ್ಯರಶ್ಮಿಗಳಿಂದ ವ್ಯಾಪ್ತವಾಗಿರುತ್ತದೆ. ಇಂತಹ ಬ್ರಹ್ಮನಾಡಿಯಿಂದ ಜ್ಞಾನಿಯು ನಿರ್ಗಮಿಸುತ್ತಾನೆ. ಆದರೆ ಅಜ್ಞಾನಿಗೆ

ಈ ರೀತಿ ಇಲ್ಲ. ಈ ವಿಷಯವನ್ನು ''ತತ್ಪ್ರಕಾಶಿತದ್ವಾರ'' ಇತ್ಯಾದಿ ಸೂತ್ರ-ಭಾಷ್ಯದಲ್ಲಿ ಹೇಳಿದಂತೆ ತಿಳಿಯಬೇಕು.

**ಪ್ರಶ್ನೆ :-** ಜ್ಞಾನಿಗೆ ಉತ್ಕ್ರಮಣವಿದೆ ಎಂದು ಸಾಮಾನ್ಯವಾಗಿ ಸಿದ್ಧವಾದರೆ ಆಗ ಆ ಉತ್ಕ್ರಮಣವು ಅಜ್ಞಾನಿಮರಣಕ್ಕಿಂತ ವಿಲಕ್ಷಣವೋ ಅಲ್ಲವೋ ಎಂಬ ವಿಶೇಷ ವಿಚಾರ ಯುಕ್ತವಾಗುತ್ತದೆ. ಆದರೆ ಜ್ಞಾನಿಗೆ ಉತ್ಕ್ರಮಣವಿದೆ ಎಂಬ ಸಾಮಾನ್ಯ ವಿಚಾರವೇ ಸಿದ್ಧವಾಗಿಲ್ಲ. ಹೀಗಿರುವಾಗ ವಿಶೇಷ ವಿಚಾರ ಹೇಗೆ ಕೂಡುತ್ತದೆ?

**ಉತ್ತರ :-** ವಿಯತ್‌ಪಾದದಲ್ಲಿ ವಿಯದಾದಿಗಳಿಗೆ ಜನ್ಮವಿದೆ ಎಂದಷ್ಟೇ ಹೇಳಲಾಗಿದೆ. ಆದರೂ ಜನ್ಮವಿದ್ದಮೇಲೆ ಲಯವಿರಲೇಬೇಕಾದ್ದರಿಂದ ಲಯವು ಸಿದ್ಧ ಎಂದಿಟ್ಟುಕೊಂಡು ಆ ಲಯವು ಸೃಷ್ಟಿಕ್ರಮದಿಂದಲೋ ವಿಪರೀತ ಕ್ರಮದಿಂದಲೋ ಎಂಬ ವಿಶೇಷ ವಿಚಾರ ಮಾಡಲಾಗಿದೆ. ಅದರಂತೆ ಇಲ್ಲಿಯೂ ಕೂಡ ದೇವತೆಗಳಿಗೆ ಅನ್ಯೋನ್ಯಪ್ರವೇಶ ಎಂಬ ಲಯ ಹೇಳಿದ ಮೇಲೆ ದೇವತೆಗಳನ್ನು ಬಿಟ್ಟು ಉಳಿದವರಿಗೆ ದೇಹದಿಂದ ಉತ್ಕ್ರಮಣ ಎಂಬುದು ಹೇಳದಿದ್ದರೂ ಸಿದ್ಧವಾಗುತ್ತದೆ ಎಂದಿಟ್ಟುಕೊಂಡು ಆ ಉತ್ಕ್ರಮಣವು ಅಜ್ಞಾನಿಮರಣಕ್ಕಿಂತ ವಿಲಕ್ಷಣವೋ ಅಲ್ಲವೋ ಎಂಬ ವಿಶೇಷ ವಿಚಾರ ಮಾಡಲಾಗಿದೆ. ಹಾಗಾಗಿ ಯಾವುದೇ ದೋಷವಿಲ್ಲ.

## ॥ ಓಂ ಯೋಗಿನಃ ಪ್ರತಿ ಸ್ಮರ್ಯತೇ ಸ್ಮಾರ್ತೇ ಚೈತೇ ಓಂ ॥
## ೪-೨-೧೦

ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯದ ಮೇಲಿನ ಆಕ್ಷೇಪದಿಂದ ಶಂಕಾ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಆನಂತರ್ಯ ಸಂಗತಿಯಿದೆ. ಆ ಹಿಂದೆ ಪ್ರಧಾನವಾದ ಅಂಗಗಳು ಎಂದು ಪ್ರಕೃತವಾದ ವಿದ್ಯಾ ಹಾಗು ಗತಿಸ್ಮೃತಿಗಳು, ಗತಿಗೆ ಆವಶ್ಯಕವಲ್ಲವೋ ಅಥವಾ ಆವಶ್ಯಕವೇ ಆಗಿದೆಯೋ? ''ಅಗ್ನಿರ್ಜ್ಯೋತಿರಹಃ ಶುಕ್ಲಃ'' ಇತ್ಯಾದಿ ಸ್ಮೃತಿಯು ಲೋಕಾನುಸಾರಿತ್ವದಿಂದ ಸಹಿತವಾಗಿ ಗತಿಗೆ (ಮಾರ್ಗಕ್ಕೆ) ಕಾಲಮೃತ್ಯಧೀನತ್ವವನ್ನು ಹೇಳುತ್ತಿದೆ ಹಾಗೇ

''ಯಂ ಯಂ ವಾಪಿ'' ಎಂಬ ಸ್ಮೃತಿಯು ಮತ್ತು ಲಿಂಗದರ್ಶನವೂ ಕೂಡ ಲೋಕಕ್ಕನುಸಾರವಾಗಿ ಬೇರೆ ರೀತಿಯಿಂದ ಅರ್ಥ ಮಾಡಲ್ಪಡಬೇಕೋ ಅಥವಾ ''ಅಗ್ನಿರ್ಜ್ಯೋತಿ...'' ಎಂಬ ಸ್ಮೃತಿಯು ವಿದ್ಯಾದ್ಯಧೀನತ್ವವನ್ನು ಹೇಳುತ್ತಿದೆ. ಹಾಗೇ ''ಯಂ ಯಂ ವಾಪಿ...'' ಎಂಬ ವಚನವನ್ನು ಬೇರೆ ರೀತಿ ತಿಳಿಯಬೇಕಿಲ್ಲವೋ? ಹೀಗೆ ಪರಸ್ಪರ ಸಂಗತವಾದ ವಿಚಾರ ಬಂದಿದೆ.

**ಪೂರ್ವಪಕ್ಷ** :- ''ಅಗ್ನಿರ್ಜ್ಯೋತಿರಹಃ ಶುಕ್ಲಃ'' ಎಂಬ ಸ್ಮೃತಿ ಹಾಗು ''ಧೂಮೋ ರಾತ್ರಿಃ....'' ಎಂಬ ಸ್ಮೃತಿ ಇವೆರೆಡೂ ಕೂಡ ಕ್ರಮವಾಗಿ ಬ್ರಹ್ಮಪ್ರಾಪ್ತಿ ಮಾರ್ಗವು ಅಹರಾದಿಕಾಲಮೃತ್ಯಧೀನ ಹಾಗು ಚಂದ್ರಪ್ರಾಪ್ತಿ-ಮಾರ್ಗವು ರಾತ್ರ್ಯಾದಿಕಾಲಮೃತ್ಯಧೀನ ಎಂದು ಹೇಳುತ್ತಿವೆ. ಮತ್ತು ಲೋಕ-ದಲ್ಲಿಯೂ ಫಲಾನುಸ್ಮೃತಿ ಇಲ್ಲದೇ ಹೋದರೂ ಫಲಪ್ರಾಪ್ತಿಯಾಗಿರುವುದು ಕಂಡಿದೆ. ಹಾಗಾಗಿ ಗತಿಸ್ಮೃತಿ ಹಾಗೂ ವಿದ್ಯೆಗಳು ಗತಿಪ್ರಾಪ್ತಿಗೆ ಅಪೇಕ್ಷಿತವಲ್ಲ. ಮತ್ತೇನೆಂದರೆ ಅಹರಾದಿ ಕಾಲ ಮೃತಿಯೇ ಗತಿಪ್ರಾಪ್ತಿಗೆ ಅಪೇಕ್ಷಿತ.

**ಪ್ರಶ್ನೆ** :- ''ಯಂ ಯಂ ವಾಪಿ ಸ್ಮರನ್'' ಎಂಬಲ್ಲಿ ಯಾವುದು ಸ್ಮೃತಿ ವಿಷಯವಾಗಿದೆಯೋ ಅದೇ ಪ್ರಾಪ್ಯ ಎಂದು ಹೇಳಿದೆ. ಹಾಗಾಗಿ ಫಲಾನುಸ್ಮೃತಿ ಫಲಪ್ರಾಪ್ತಿಗೆ ಅವಶ್ಯಕವೇ ಆಗುತ್ತದೆ. ಅದೇ ರೀತಿ ''ಆಚಾರ್ಯಸ್ತು ತೇ ಗತಿಂ ವಕ್ತಾ'' ಎಂಬ ಶ್ರುತಿಯಲ್ಲಿ ಆಚಾರ್ಯರು ಮಾರ್ಗವನ್ನು ಉಪದೇಶ ಮಾಡುತ್ತಾರೆಂದು ಹೇಳಲಾಗಿದೆ. ಈ 'ಗತ್ಯುಕ್ತಿ'' ಎಂಬ ಲಿಂಗದ ವಿರೋಧವೂ ಬರುತ್ತದೆ. (ಗತಿಸ್ಮೃತಿ ಬೇಡ ಎಂದರೆ ಗತ್ಯುಕ್ತಿಯೇ ವ್ಯರ್ಥವಾಗುತ್ತದೆ).

**ಪರಿಹಾರ** :- ದೇಹತ್ಯಾಗ ಕ್ಷಣದಲ್ಲಿ ದುಃಖವಿರುವುದರಿಂದ ಮಾರ್ಗಸ್ಮರಣೆ ಸಾಧ್ಯವಿಲ್ಲ. ''ಯಂ ಯಂ'' ಎಂಬ ಸ್ಮೃತಿಯು ಶಾಸ್ತ್ರಾದಿಗಳಿಂದ ಮಾರ್ಗ-ವನ್ನು ಮೊದಲೇ ತಿಳಿದವನಾಗಿರಬೇಕೆಂದು ಅಷ್ಟೇ ಹೇಳುತ್ತಿದೆ. ಈ ಸ್ಮೃತಿಯಲ್ಲಿರುವ ''ಸ್ಮರನ್'' ಎಂಬುದಕ್ಕೆ 'ಜಾನನ್' ಎಂದು ಜ್ಞಾನಪರವಾಗಿ ಅರ್ಥ ಹೇಳಬೇಕು. ಇದೇ ರೀತಿ ಲಿಂಗದರ್ಶನಕ್ಕೂ ಕೂಡ ಜ್ಞಾನಮಾತ್ರದಲ್ಲಿ ಪರ್ಯವಸಾನ ಎಂದು ತಿಳಿಯಬೇಕು. ಹೀಗೆ ಒಪ್ಪದೇ ಹೋದರೆ ಲೋಕ-ವಿರೋಧ ಬರುತ್ತದೆ.

**ಸಿದ್ಧಾಂತ :-** ಮೊದಲನೇ ಸ್ಮೃತಿಯಾದ ''ಅಗ್ನಿರ್ಜ್ಯೋತಿಃ'' ಎಂಬಲ್ಲಿ 'ಬ್ರಹ್ಮವಿತ್'. ಎಂಬ ವಿಶೇಷಣವಿದೆ. ಹಾಗೇ ಎರಡನೆಯದಾದ 'ಧೂಮೋ ರಾತ್ರಿಃ' ಎಂಬ ಸ್ಮೃತಿಯಲ್ಲಿ 'ಯೋಗೀ' ಎಂಬ ವಿಶೇಷಣವಿದೆ. ಇದರಿಂದ ಬ್ರಹ್ಮಪ್ರಾಪ್ತಿಮಾರ್ಗವು ಜ್ಞಾನಸಾಧ್ಯ ಚಂದ್ರಪ್ರಾಪ್ತಿಮಾರ್ಗವು ಕರ್ಮಸಾಧ್ಯ ಎಂದು ತಿಳಿಯುತ್ತದೆ. ಇದರಲ್ಲಿ ಕಾಲಮೃತ್ಯಧೀನತ್ವ ಎಂಬುದು ಗೋಚರವಾಗುತ್ತಿಲ್ಲ.

ಹಾಗಾಗಿ ಮಾರ್ಗಪ್ರಾಪ್ತಿಗೆ ವಿದ್ಯಾದಿಗಳು ಅವಶ್ಯಕ ಎಂದು ಸಿದ್ಧವಾಗುತ್ತದೆ. ಇಲ್ಲದೇ ಹೋದರೆ ಸ್ಮೃತಿಗಳಲ್ಲಿ ವಿಶೇಷಣವನ್ನು ಕೊಟ್ಟಿದ್ದು ವ್ಯರ್ಥವಾಗುತ್ತದೆ.

ಸ್ಮೃತಿಯಲ್ಲಿರುವ ಅಹರಾದಿ ಶಬ್ದಗಳಿಗೆ ಅಭಿಮಾನ್ಯಧಿಕರಣ ನ್ಯಾಯ-ದಿಂದ ದೇವತಾಪರವಾಗಿ ಅರ್ಥ ಮಾಡಬೇಕು. ಹಾಗಾಗಿ ಈ ಶಬ್ದಗಳು ಕಾಲವಾಚಕಗಳಲ್ಲ.

ಇನ್ನು ''ಯಂ ಯಂ...' ಎಂಬ ಸ್ಮೃತಿಯಲ್ಲಿ ದೇಹತ್ಯಾಗಕ್ಷಣದಲ್ಲಿ ಯಾವುದರ ಸ್ಮರಣೆ ಬರುತ್ತದೋ ಅದೇ ಹೊಂದಲ್ಪಡುತ್ತದೆ ಎಂದು ಹೇಳಿದ್ದರಿಂದ ಗತಿಸ್ಮೃತಿಯೂ ಆವಶ್ಯಕ.

ದೇಹತ್ಯಾಗಕ್ಷಣದಲ್ಲಿ ದುಃಖವಿರುವುದರಿಂದ ಗತಿಸ್ಮೃತಿ ಸಾಧ್ಯವಿಲ್ಲ ಎನ್ನಬಾರದು. ಏಕೆಂದರೆ ಜ್ಞಾನಿಗಳಿಗೆ ದೇಹದಲ್ಲಿ ಸದಾ ಹೇಯತ್ವ ಬುದ್ಧಿ ಇರುವುದರಿಂದ ಅವರಿಗೆ ಸಾಯುವ ಕ್ಷಣದಲ್ಲಿ ದುಃಖವಿರುವುದಿಲ್ಲ. ಇನ್ನು ಪಾಮರರಿಗೂ ಕೂಡ ಸಾಯುವ ಪೂರ್ವಕ್ಷಣದಲ್ಲಿ ಮಾತ್ರ ದುಃಖವಿರುತ್ತದೇ ಹೊರತು ಸಾಯುವ ಕ್ಷಣದಲ್ಲಿ ದುಃಖವಿರುವುದಿಲ್ಲ. ಫಲಾನುಸ್ಮೃತಿ ಇದ್ದರೆ ಮಾತ್ರ ಫಲಪ್ರಾಪ್ತಿ ಎಂದರೆ ಲೋಕಾನುಸಾರಿತ್ವ ಬರುವುದಿಲ್ಲ ಎಂಬ ಆಕ್ಷೇಪಕ್ಕೂ ಅವಕಾಶವಿಲ್ಲ. ಏಕೆಂದರೆ ಲೋಕದಲ್ಲಿಯೂ ಕೂಡ ಫಲಪ್ರಾಪ್ತಿಯಲ್ಲಿ ಕರ್ಷಣಾದಿಕ್ರಿಯಾನುವೃತ್ತಿ ಕಂಡಿದೆ. (ಕರ್ಷಣಾದಿಕ್ರಿಯೆಯಿಂದ ಮಾತ್ರ ಫಲಪ್ರಾಪ್ತಿ) ಅದೇ ರೀತಿ ಪ್ರಕೃತದಲ್ಲಿಯೂ ಕೂಡ ಮಾರ್ಗಪ್ರಾಪ್ತಿ ಎಂಬ ಫಲಕ್ಕೆ ಮಾರ್ಗಾನುಸ್ಮೃತಿ ಎಂಬ ಕ್ರಿಯಾನುವೃತ್ತಿಯನ್ನು ಅಂಗೀಕಾರ

ಮಾಡಬೇಕು. ಲೋಕದಲ್ಲಿನ ಕ್ರಿಯೆ ಕರ್ಷಣಾದಿ ರೂಪವಾಗಿದೆ. ಪ್ರಕೃತದಲ್ಲಿ ಅದು ಮಾನಸಿಕವಾದ ಕ್ರಿಯೆಯಾಗಿದೆ. ಈ ಅವಾಂತರ ವೈಲಕ್ಷಣ್ಯ ಮಾತ್ರ ಇದೆ. ಇಷ್ಟರಿಂದಲೇ ಲೋಕಾನುಸಾರಿತ್ವ ಇಲ್ಲ ಎನ್ನಬಾರದು. ಏಕೆಂದರೆ, ಈ ಅವಾಂತರ ವೈಲಕ್ಷಣ್ಯ ಎಲ್ಲ ಕಡೆ ಇರುವುದರಿಂದ ಅತಿಪ್ರಸಂಗ ಬರಬೇಕಾಗುತ್ತದೆ. (ಎಲ್ಲಿಯೂ ಲೋಕಾನುಸಾರಿತ್ವ ಇಲ್ಲ ಎಂದಾಗುತ್ತದೆ ಎಂಬುದೇ ಅತಿಪ್ರಸಂಗ) ಕ್ರಿಯಾನುವೃತ್ತಿ ಎಂದರೆ ಅನೇಕ ಬಾರಿ ಕ್ರಿಯೆಯನ್ನು ಮಾಡುವುದು.

ಮಾರ್ಗಸ್ಮೃತಿಯು ಅವಶ್ಯಕವಾದ್ದರಿಂದ ಗತ್ಯುಕ್ತಿ ಎಂಬ ಲಿಂಗದರ್ಶನವನ್ನೂ ಬೇರೆ ರೀತಿ ಕೂಡಿಸುವ ಅವಶ್ಯಕತೆಯಿಲ್ಲ.

**ಅಧಿಕರಣ ಫಲ :-** ಜ್ಞಾನವು ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ ಎಂಬ ನಾಲ್ಕು ವಿಧವಾದ ಮೋಕ್ಷಕ್ಕೂ ಕಾರಣವಾಗಿದೆ ಎಂಬುದರ ಆಕ್ಷೇಪ ಹಾಗೂ ಸಮಾಧಾನವೇ ಈ ಅಧಿಕರಣದ ಫಲ.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ನಾಲ್ಕನೆಯ ಅಧ್ಯಾಯದ ಎರಡನೆಯ ಪಾದವು ಸಮಾಪ್ತವಾಯಿತು.**

# ನಾಲ್ಕನೆಯ ಅಧ್ಯಾಯದ ಮೂರನೆಯ ಪಾದ

ಹಿಂದಿನ ಪಾದದಲ್ಲಿ, ಬ್ರಹ್ಮನಾಡಿಯಿಂದ ಉತ್ಕ್ರಮಣ ಹೊಂದಿದವರಿಗೆ ಬ್ರಹ್ಮಪ್ರಾಪ್ತಿಗಾಗಿ ವಿದ್ಯಾಂಗವಾದ ಯಾವ ಗತಿಸ್ಮರಣವನ್ನು ಹೇಳಿದ್ದರೋ ಆ ಗತಿ ಹಾಗು ಗತಿಯಿಂದ ಗಮ್ಯವಾದದನ್ನು ಈ ಪಾದದಲ್ಲಿ ಹೇಳಲಾಗುತ್ತಿದೆ. ಹೀಗೆ ಈ ಪಾದಕ್ಕೆ ಹಿಂದಿನ ಪಾದದಿಂದ ಆನಂತರ್ಯ ಎಂಬ ಸಂಗತಿಯಿದೆ.

ಗತಿ ಹಾಗು ಗಮ್ಯ ಇವೆರಡನ್ನೂ ಹೇಳುವುದಾದರೆ ಎರಡು ಪಾದಗಳಾಗಿ ವಿಂಗಡಿಸಬೇಕಿತ್ತು ಎಂಬ ಶಂಕೆಗೆ ಅವಕಾಶವಿಲ್ಲ ಏಕೆಂದರೆ, ಚರಮಗಮ್ಯದಿಂದ ಸಹಿತವಾದದಕ್ಕೇ ಮಾರ್ಗ ಎಂದು ಹೆಸರು. ಹಾಗಾಗಿ ಗಮ್ಯವನ್ನು ಹೇಳಿದರೂ ಅದೂ ಮಾರ್ಗದಲ್ಲೇ ಸೇರಿರುವುದರಿಂದ ಪಾದದ ಏಕಾರ್ಥತ್ವಕ್ಕೆ

ಭಂಗವಿಲ್ಲ. ಆದರೂ ಚರಮಗಮ್ಯವನ್ನು ಬೇರೆ ಎಂದು ಇಟ್ಟುಕೊಂಡು ಗಮ್ಯವನ್ನೂ ಹೇಳುತ್ತಾರೆ ಎಂದು ಹೇಳಲಾಗಿದೆ.

## || ಓಂ ಅರ್ಚಿರಾದಿನಾ ತತ್ಪ್ರಥಿತೇಃ ಓಂ || ೪-೩-೧

ಯಾವ ಗತಿಸ್ಮರಣವು ಆವಶ್ಯಕ ಎಂದು ಹಿಂದೆ ಹೇಳಲಾಗಿದೆಯೋ ಆ ಗತಿಯು ಅರ್ಚಿ ವಾಯು ಇವರಿಬ್ಬರನ್ನೂ ಪ್ರಥಮಗಮ್ಯರಾಗಿ ಹೊಂದಿದೆಯೋ ಅಥವಾ ಅರ್ಚಿ ಮಾತ್ರ ಪ್ರಥಮಗಮ್ಯವಾಗಿ ಹೊಂದಿದೆಯೋ? ಇದನ್ನು ಹೇಳುವ ಎರಡು ಶ್ರುತಿಗಳು ನಿರವಕಾಶವೋ ಅಥವಾ ಸಾವಕಾಶವೋ? ಗತಿಗೆ ಉಭಯ ಪ್ರಾಥಮ್ಯವನ್ನು ಒಪ್ಪಿದರೆ ಅದು ಅವಿರುದ್ಧವೋ ಅಥವಾ ವಿರುದ್ಧವೋ? ಆ ಗತಿಯು ದ್ವಿರೂಪವಾಗಿದೆಯೋ ಅಥವಾ ಏಕರೂಪವಾಗಿದೆಯೋ? ಅಧಿಕಾರಿಭೇದದಿಂದ ಗತಿಗೆ ದ್ವಿರೂಪತ್ವ-ವನ್ನು ಹೇಳಿ 'ಅರ್ಚಿ' 'ವಾಯು' ಇಬ್ಬರಿಗೂ ಪ್ರಥಮ ಪ್ರಾಪ್ಯತ್ವವನ್ನು ಹೇಳಿದರೆ ವಿರೋಧವಿಲ್ಲವಾದ್ದರಿಂದ ಶ್ರುತಿಗಳು ನಿರವಕಾಶ ಎನ್ನಬಹುದೋ ಅಥವಾ ಸಾವಕಾಶವೇ ಆಗಿದೆಯೋ?

ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿದೆ.

**ಪೂರ್ವ ಪಕ್ಷ** :- ''ತೇ ಅರ್ಚಿಷಮಭಿಸಂಭವಂತಿ'' ''ಸ ವಾಯುಮುಪ-ಗಚ್ಛತಿ'' ಎಂಬ ಈ ಎರಡು ಶ್ರುತಿಗಳಿಂದ ಗತಿಯು 'ಅರ್ಚಿ' ಹಾಗು 'ವಾಯು' ಇಬ್ಬರನ್ನೂ ಪ್ರಥಮಪ್ರಾಪ್ಯವಾಗಿ ಹೊಂದಿದೆ ಎಂದು ಹೇಳಬೇಕು.

**ಸಿದ್ಧಾಂತ** :- ''ದ್ವಾವೇವ ಮಾರ್ಗೌ ಪ್ರಥಿತಾವರ್ಚಿರಾದಿರ್ವಿಪಶ್ಚಿತಾಮ್. ಧೂಮಾದಿಃ ಕರ್ಮಿಣಾಮ್'' ಎಂಬ ಸ್ಮೃತಿಯಲ್ಲಿ ಮಾರ್ಗ ಒಂದೇ ಎಂದು ಹೇಳಿದೆ. ಆ ಮಾರ್ಗವು ಅರ್ಚಿರಾದಿಯೇ ಆಗಿದೆ. ವಾಯ್ವಾದಿಯಾಗಿಲ್ಲ. ಈ ವಿಷಯ ಪ್ರಸಿದ್ಧ ಎಂದು ಪ್ರಥಿತಪದದಿಂದ ತಿಳಿಯುತ್ತಿದೆ. ಹೀಗಾಗಿ ''ತೇಽರ್ಚಿಷಂ'' ಎಂಬ ಶ್ರುತಿಯು ಪ್ರಬಲವಾಯಿತು. ಅದಕ್ಕೆ ಅನುಸಾರವಾಗಿ ಅರ್ಚಿ ನಾಮಕನಾದ ದೇವತೆಯನ್ನೇ ಪ್ರಥಮ ಪ್ರಾಪ್ಯನಾಗಿ ಹೊಂದಿದ ಬ್ರಹ್ಮಪ್ರಾಪ್ತಿ ಮಾರ್ಗ ಅದು ಒಂದೇ ಎಂದು ಸಿದ್ಧವಾಯಿತು.

ಮಾಡಬೇಕು. ಲೋಕದಲ್ಲಿನ ಕ್ರಿಯೆ ಕರ್ಷಣಾದಿ ರೂಪವಾಗಿದೆ. ಪ್ರಕೃತದಲ್ಲಿ ಅದು ಮಾನಸಿಕವಾದ ಕ್ರಿಯೆಯಾಗಿದೆ. ಈ ಅವಾಂತರ ವೈಲಕ್ಷಣ್ಯ ಮಾತ್ರ ಇದೆ. ಇಷ್ಟರಿಂದಲೇ ಲೋಕಾನುಸಾರಿತ್ವ ಇಲ್ಲ ಎನ್ನಬಾರದು. ಏಕೆಂದರೆ, ಈ ಅವಾಂತರ ವೈಲಕ್ಷಣ್ಯ ಎಲ್ಲ ಕಡೆ ಇರುವುದರಿಂದ ಅತಿಪ್ರಸಂಗ ಬರಬೇಕಾಗುತ್ತದೆ. (ಎಲ್ಲಿಯೂ ಲೋಕಾನುಸಾರಿತ್ವ ಇಲ್ಲ ಎಂದಾಗುತ್ತದೆ ಎಂಬುದೇ ಅತಿಪ್ರಸಂಗ) ಕ್ರಿಯಾನುವೃತ್ತಿ ಎಂದರೆ ಅನೇಕ ಬಾರಿ ಕ್ರಿಯೆಯನ್ನು ಮಾಡುವುದು.

ಮಾರ್ಗಸ್ಮೃತಿಯು ಅವಶ್ಯಕವಾದ್ದರಿಂದ ಗತ್ಯುಕ್ತಿ ಎಂಬ ಲಿಂಗದರ್ಶನವನ್ನೂ ಬೇರೆ ರೀತಿ ಕೂಡಿಸುವ ಅವಶ್ಯಕತೆಯಿಲ್ಲ.

**ಅಧಿಕರಣ ಫಲ :-** ಜ್ಞಾನವು ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ ಎಂಬ ನಾಲ್ಕು ವಿಧವಾದ ಮೋಕ್ಷಕ್ಕೂ ಕಾರಣವಾಗಿದೆ ಎಂಬುದರ ಆಕ್ಷೇಪ ಹಾಗೂ ಸಮಾಧಾನವೇ ಈ ಅಧಿಕರಣದ ಫಲ.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ನಾಲ್ಕನೆಯ ಅಧ್ಯಾಯದ ಎರಡನೆಯ ಪಾದವು ಸಮಾಪ್ತವಾಯಿತು.**

# ನಾಲ್ಕನೆಯ ಅಧ್ಯಾಯದ ಮೂರನೆಯ ಪಾದ

ಹಿಂದಿನ ಪಾದದಲ್ಲಿ, ಬ್ರಹ್ಮನಾಡಿಯಿಂದ ಉತ್ಕ್ರಮಣ ಹೊಂದಿದವರಿಗೆ ಬ್ರಹ್ಮಪ್ರಾಪ್ತಿಗಾಗಿ ವಿದ್ಯಾಂಗವಾದ ಯಾವ ಗತಿಸ್ಮರಣವನ್ನು ಹೇಳಿದ್ದರೋ ಆ ಗತಿ ಹಾಗು ಗತಿಯಿಂದ ಗಮ್ಯವಾದದನ್ನು ಈ ಪಾದದಲ್ಲಿ ಹೇಳಲಾಗುತ್ತಿದೆ. ಹೀಗೆ ಈ ಪಾದಕ್ಕೆ ಹಿಂದಿನ ಪಾದದಿಂದ ಆನಂತರ್ಯ ಎಂಬ ಸಂಗತಿಯಿದೆ.

ಗತಿ ಹಾಗು ಗಮ್ಯ ಇವೆರಡನ್ನೂ ಹೇಳುವುದಾದರೆ ಎರಡು ಪಾದಗಳಾಗಿ ವಿಂಗಡಿಸಬೇಕಿತ್ತು ಎಂಬ ಶಂಕೆಗೆ ಅವಕಾಶವಿಲ್ಲ ಏಕೆಂದರೆ, ಚರಮಗಮ್ಯದಿಂದ ಸಹಿತವಾದದಕ್ಕೇ ಮಾರ್ಗ ಎಂದು ಹೆಸರು. ಹಾಗಾಗಿ ಗಮ್ಯವನ್ನು ಹೇಳಿದರೂ ಅದೂ ಮಾರ್ಗದಲ್ಲೇ ಸೇರಿರುವುದರಿಂದ ಪಾದದ ಏಕಾರ್ಥತ್ವಕ್ಕೆ

ಭಂಗವಿಲ್ಲ. ಆದರೂ ಚರಮಗಮ್ಯವನ್ನು ಬೇರೆ ಎಂದು ಇಟ್ಟುಕೊಂಡು ಗಮ್ಯವನ್ನೂ ಹೇಳುತ್ತಾರೆ ಎಂದು ಹೇಳಲಾಗಿದೆ.

## ॥ ಓಂ ಅರ್ಚಿರಾದಿನಾ ತತ್ಪ್ರಥಿತೇಃ ಓಂ ॥ ೪-೩-೧

ಯಾವ ಗತಿಸ್ಮರಣವು ಆವಶ್ಯಕ ಎಂದು ಹಿಂದೆ ಹೇಳಲಾಗಿದೆಯೋ ಆ ಗತಿಯು ಅರ್ಚಿ ವಾಯು ಇವರಿಬ್ಬರನ್ನೂ ಪ್ರಥಮಗಮ್ಯರಾಗಿ ಹೊಂದಿದೆಯೋ ಅಥವಾ ಅರ್ಚಿ ಮಾತ್ರ ಪ್ರಥಮಗಮ್ಯವಾಗಿ ಹೊಂದಿದೆಯೋ? ಇದನ್ನು ಹೇಳುವ ಎರಡು ಶ್ರುತಿಗಳು ನಿರವಕಾಶವೋ ಅಥವಾ ಸಾವಕಾಶವೋ? ಗತಿಗೆ ಉಭಯ ಪ್ರಾಥಮ್ಯವನ್ನು ಒಪ್ಪಿದರೆ ಅದು ಅವಿರುದ್ಧವೋ ಅಥವಾ ವಿರುದ್ಧವೋ? ಆ ಗತಿಯು ದ್ವಿರೂಪವಾಗಿದೆಯೋ ಅಥವಾ ಏಕರೂಪವಾಗಿದೆಯೋ? ಅಧಿಕಾರಿಭೇದದಿಂದ ಗತಿಗೆ ದ್ವಿರೂಪತ್ವ-ವನ್ನು ಹೇಳಿ 'ಅರ್ಚಿ' 'ವಾಯು' ಇಬ್ಬರಿಗೂ ಪ್ರಥಮ ಪಾಪ್ಯತ್ವವನ್ನು ಹೇಳಿದರೆ ವಿರೋಧವಿಲ್ಲವಾದ್ದರಿಂದ ಶ್ರುತಿಗಳು ನಿರವಕಾಶ ಎನ್ನಬಹುದೋ ಅಥವಾ ಸಾವಕಾಶವೇ ಆಗಿದೆಯೋ?

ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿದೆ.

**ಪೂರ್ವ ಪಕ್ಷ** :- ''ತೇ ಅರ್ಚಿಷಮಭಿಸಂಭವಂತಿ'' ''ಸ ವಾಯುಮುಪ-ಗಚ್ಛತಿ'' ಎಂಬ ಈ ಎರಡು ಶ್ರುತಿಗಳಿಂದ ಗತಿಯು 'ಅರ್ಚಿ' ಹಾಗು 'ವಾಯು' ಇಬ್ಬರನ್ನೂ ಪ್ರಥಮಪ್ರಾಪ್ಯವಾಗಿ ಹೊಂದಿದೆ ಎಂದು ಹೇಳಬೇಕು.

**ಸಿದ್ಧಾಂತ** :- ''ದ್ವಾವೇವ ಮಾರ್ಗೌ ಪ್ರಥಿತಾವರ್ಚಿರಾದಿರ್ವಿಪಶ್ಚಿತಾಮ್. ಧೂಮಾದಿಃ ಕರ್ಮಿಣಾಮ್'' ಎಂಬ ಸ್ಮೃತಿಯಲ್ಲಿ ಮಾರ್ಗ ಒಂದೇ ಎಂದು ಹೇಳಿದೆ. ಆ ಮಾರ್ಗವು ಅರ್ಚಿರಾದಿಯೇ ಆಗಿದೆ. ವಾಯ್ವಾದಿಯಾಗಿಲ್ಲ. ಈ ವಿಷಯ ಪ್ರಸಿದ್ಧ ಎಂದು ಪ್ರಥಿತಪದದಿಂದ ತಿಳಿಯುತ್ತಿದೆ. ಹೀಗಾಗಿ ''ತೇಽರ್ಚಿಷಂ'' ಎಂಬ ಶ್ರುತಿಯು ಪ್ರಬಲವಾಯಿತು. ಅದಕ್ಕೆ ಅನುಸಾರವಾಗಿ ಅರ್ಚಿ ನಾಮಕನಾದ ದೇವತೆಯನ್ನೇ ಪ್ರಥಮ ಪ್ರಾಪ್ಯನಾಗಿ ಹೊಂದಿದ ಬ್ರಹ್ಮಪ್ರಾಪ್ತಿ ಮಾರ್ಗ ಅದು ಒಂದೇ ಎಂದು ಸಿದ್ಧವಾಯಿತು.

''ಸ ವಾಯುಂ...'' ಎಂಬ ಶ್ರುತಿಗೆ ಪ್ರಬಲಶ್ರುತಿಗನುಸಾರವಾಗಿ ಅರ್ಚಿಯ ನಂತರ ವಾಯುವನ್ನು ಹೊಂದುತ್ತಾನೆ ಎಂದರ್ಥ ಎನ್ನಬೇಕು. ಉಳಿದ ವಿಷಯ ಟೀಕಾದಲ್ಲಿ ಸ್ಪಷ್ಟವಾಗಿದೆ.

**ಅಧಿಕರಣ ಫಲ :-** ಅಧಿಕಾರಿಭೇದದಿಂದ ಮಾರ್ಗದ್ವಯ ಎಂದು ವ್ಯವಸ್ಥೆ ಮಾಡಿದರೂ ನಾನು ಈ ಮಾರ್ಗದಲ್ಲಿ ಹೋಗುವುದಕ್ಕೆ ಅಧಿಕಾರಿ ಎಂದು ನಿಶ್ಚಯವಿರುವುದಿಲ್ಲವಾದ್ದರಿಂದ ಗತಿಸ್ಮೃತಿ ಕೂಡುವುದಿಲ್ಲ. ಇದೇ ಪೂರ್ವಪಕ್ಷ ಫಲ. ಇದರ ಸಮಾಧನವೇ ಸಿದ್ಧಾಂತ ಫಲ.

## ॥ ಓಂ ವಾಯುಶಬ್ದಾದವಿಶೇಷ ವಿಶೇಷಾಭ್ಯಾಂ ಓಂ ॥
## ೪-೩-೨

ಹಿಂದೆ ಬ್ರಹ್ಮಪ್ರಾಪ್ತಿಮಾರ್ಗದಲ್ಲಿ ಪ್ರಥಮಪ್ರಾಪ್ಯ ದೇವತೆ ಯಾರು ಎಂಬ ವಿಷಯದಲ್ಲಿ ನಿರ್ಣಯ ಮಾಡಲಾಗಿದೆ. ಈ ಅಧಿಕರಣದಲ್ಲಿ ದ್ವಿತೀಯ ಪ್ರಾಪ್ಯ ದೇವತೆ ಯಾರು ಎಂಬಲ್ಲಿ ನಿರ್ಣಯ ಮಾಡುತ್ತಿರುವುದರಿಂದ ಸಂಗತಿಯಿದೆ.

ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯ ಇಲ್ಲಿ ಅನ್ವಯಿಸುವುದಿಲ್ಲ ಎಂದು ಪೂರ್ವಪಕ್ಷ ಪ್ರವೃತ್ತವಾಗುತ್ತಿರುವುದರಿಂದ (ಪತ್ಯುದಾಹರಣ ಎಂಬ) ಸಂಗತಿಯಿದೆ. ಹಿಂದೆ ಪ್ರಕೃತವಾದ ಅರ್ಚಿರಾದಿ ಮಾರ್ಗದಲ್ಲಿ ವಾಯುದೇವತೆ ಹಾಗು ಅಹರ್ದೇವತೆ ಇಬ್ಬರೂ ದ್ವಿತೀಯ ಪ್ರಾಪ್ಯರೋ ಅಥವಾ ವಾಯು-ದೇವತೆ ಮಾತ್ರ ದ್ವಿತೀಯ ಪ್ರಾಪ್ಯನೋ? ''ಸ ವಾಯುಮ್'' ''ಅರ್ಚಿ-ಷೋಽಹಃ'' ಎಂಬ ಎರಡು ಶ್ರುತಿಗಳು ವಾಯು, ಅಹರ್ ದೇವತೆಗಳಿಗೆ ದ್ವಿತೀಯ ಪ್ರಾಪ್ಯತ್ವವನ್ನು ಹೇಳುತ್ತಿದೆಯೋ ಅಥವಾ ಇಲ್ಲವೋ? ಎರಡು ಮಾರ್ಗಗಳಿವೆಯೋ ಅಥವಾ ಒಂದೇ ಮಾರ್ಗವೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ :-** ಹಿಂದೆ ''ದ್ವಾವೇವ ಮಾರ್ಗೌ'' ಎಂಬ ವಿಶೇಷ ಪ್ರಮಾಣವಿದ್ದದ್ದರಿಂದ ಅರ್ಚಿಯೇ ಪ್ರಥಮ ಪ್ರಾಪ್ಯ ಎಂದು ನಿಶ್ಚಯ

ಸಾಧ್ಯವಾಯಿತು. ಆದರೆ ಪ್ರಕೃತದಲ್ಲಿ ವಾಯುವೇ ದ್ವಿತೀಯ ಪ್ರಾಪ್ಯ ಎಂಬ ವಿಷಯದಲ್ಲಿವಿಶೇಷಪ್ರಮಾಣವಿಲ್ಲವಾದ್ದರಿಂದ, ಹಾಗೂ ''ಅರ್ಚಿಷೋಽಹಃ'' ''ಸ ವಾಯುಂ'' ಎಂಬ ಎರಡೂ ಶ್ರುತಿಗಳು ಪ್ರಮಾಣವಾದ್ದರಿಂದ, ಮತ್ತು ಮಾರ್ಗಭೇದವನ್ನು ಕಲ್ಪನೆ ಮಾಡಿ ಎರಡಕ್ಕೂ ದ್ವಿತೀಯ ಪ್ರಾಪ್ಯತ್ವ-ವನ್ನು ಹೇಳಿದರೆ ಯಾವುದೇ ವಿರೋಧವಿಲ್ಲವಾದ್ದರಿಂದ, ಎರಡು ಶ್ರುತಿಗಳ ಆಧಾರದಿಂದ ಅಹರ್, ವಾಯು ಇಬ್ಬರಿಗೂ ದ್ವಿತೀಯ ಪ್ರಾಪ್ಯತ್ವವನ್ನು ಒಪ್ಪಬೇಕು.

**ಸಿದ್ಧಾಂತ** :- ವಾಯುವೇ ದ್ವಿತೀಯ ಪ್ರಾಪ್ಯ. ಹೇಗೆಂದರೆ, ''ಸ ವಾಯುಮಾಗಚ್ಛತಿ'' ಎಂಬ ಸಾಮಾನ್ಯವಚನದಿಂದ ವಾಯುವು ಪ್ರಥಮ-ಪ್ರಾಪ್ಯ ಎಂದು ತಿಳಿದರೂ ''ದ್ವಾವೇವ ಮಾರ್ಗೌ ಪ್ರಥಿತೌ'' ಎಂಬ ವಿಶೇಷ ವಚನದಲ್ಲಿನ ಅರ್ಚಿರಾದಿತ್ವ ಪ್ರಸಿದ್ಧಿಯ ವಿರೋಧ ಬರುವುದರಿಂದ ಅದನ್ನು ತ್ಯಾಗ ಮಾಡಿದ್ದು ಕೂಡುತ್ತದೆ. ಆದರೆ ನ್ಯಾಯ ಪ್ರಾಪ್ತವಾದ (ಅಂದರೆ, ಸಾಮಾನ್ಯ ಶ್ರುತಿಗೆ ವಿಶೇಷ ಶ್ರುತಿಯಿಂದ ಬಾಧ ಹೇಳುವಾಗ ವಿಶೇಷ ಶ್ರುತಿ ಎಷ್ಟಂಶದಲ್ಲಿ ಇದೆಯೋ ಅಷ್ಟೇ ಬಾಧವನ್ನು (ಪ್ರಾಥಮ್ಯಕ್ಕೆ ಮಾತ್ರ) ಹೇಳಬೇಕು. ಉಳಿದಂತೆ ದ್ವಿತೀಯ ಪ್ರಾಪ್ಯತ್ವಕ್ಕೆ ಸಾಮಾನ್ಯ ಶ್ರುತಿ ಪ್ರಮಾಣವೇ ಆಗುತ್ತದೆ. ಇದೇ ನ್ಯಾಯ) ದ್ವಿತೀಯ ಪ್ರಾಪ್ಯತ್ವವನ್ನು ವಾಯುವಿಗೆ ಒಪ್ಪಲೇ ಬೇಕು. ಜೊತೆಗೆ ''ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ'' ಎಂಬ ವಿಶೇಷ ಶ್ರುತಿಯೂ ಇದೆ. ಹಾಗಾಗಿ ವಾಯುವೇ ದ್ವಿತೀಯ ಪ್ರಾಪ್ಯ, ಅಹರ್‌ದೇವತೆಯು ಅನಂತರ ಪ್ರಾಪ್ಯ ಎಂದು ಸಿದ್ಧವಾಗುತ್ತದೆ.

ಮಾರ್ಗಭೇದವನ್ನು ಕಲ್ಪನೆ ಮಾಡಿ ವಾಯು, ಅಹರ್ ಎರಡಕ್ಕೂ ದ್ವಿತೀಯ ಪ್ರಾಪ್ಯತ್ವವನ್ನು ಹೇಳಿದರೆ ''ದ್ವಾವೇವ ಮಾರ್ಗೌ'' ಎಂಬಲ್ಲಿ ಹೇಳಿದ ಪ್ರಸಿದ್ಧಿಯ ವಿರೋಧ ಬರುತ್ತದೆ. ಹಾಗಾಗಿ ಅದು ಸರಿಯಲ್ಲ.

**ಅಧಿಕರಣ ಫಲ** :- ಅಧಿಕಾರಿಭೇದದಿಂದ ಮಾರ್ಗಭೇದವನ್ನು ಒಪ್ಪಿದರೆ ಮಾರ್ಗನಿಶ್ಚಯ ಸಾಧ್ಯವಾಗದೇ ಹೋಗಿ ಗತಿಸ್ಮೃತಿ ಕೂಡುವುದಿಲ್ಲ ಎಂಬ

ಆಕ್ಷೇಪ ಹಾಗೂ ಅವರ ಸಮಾಧಾನವೇ ಈ ಅಧಿಕರಣದ ಪೂರ್ವಪಕ್ಷ ಹಾಗೂ ಸಿದ್ಧಾಂತ ಫಲ.

## || ಓಂ ತಟಿತೋऽಧಿ ವರಣಃ ಸಂಬಂಧಾತ್ ಓಂ || ೪-೩-೩

"ತೇऽರ್ಚಿಷಮಭಿಸಂಭವಂತಿ ಅರ್ಚಿಷೋऽಹಃ ಅಹ್ನಃ ಆಪೂರ್ಯಮಾಣಪಕ್ಷಂ ಆಪೂರ್ಯಮಾಣ ಪಕ್ಷಾತ್ ಯಾನ್ ಷಡುದಙ್ ಏತಿ ಮಾಸಾನ್ ತಾನ್, ಮಾಸೇಭ್ಯಃ ಸಂವತ್ಸರಮ್." ಹೀಗೆ ಛಂದೋಗಶ್ರುತಿಯಲ್ಲಿ ಬ್ರಹ್ಮಪ್ರಾಪ್ತಿಮಾರ್ಗವು ಉಕ್ತವಾಗಿದೆ. ಇದರಲ್ಲಿ ಆದ್ಯ ಹಾಗೂ ದ್ವಿತೀಯ ಪ್ರಾಪ್ಯದ ವಿಷಯದಲ್ಲಿ ವಿವಾದವಿದ್ದದ್ದರಿಂದ ಅದರ ನಿರ್ಣಯವನ್ನು ಹಿಂದೆ ಮಾಡಲಾಗಿದೆ. ಮುಂದೆ ಸಂವತ್ಸರದ ತನಕ ಕ್ರಮವಾಗಿ ಪ್ರಾಪ್ಯವಾದದ್ದರಲ್ಲಿ ವಿವಾದವಿಲ್ಲವಾದ್ದರಿಂದ ಆ ವಿಷಯದಲ್ಲಿ ನಿರ್ಣಯವೇ ಇದೆ. ಸಂವತ್ಸರದ ನಂತರ ಪ್ರಜಾಪತಿ ಲೋಕಕ್ಕೆ ಹೋಗಬೇಕಾದರೆ ಮಧ್ಯದಲ್ಲಿ ತಟಿತ್ ಹಾಗೂ ವರುಣ ಇಬ್ಬರೂ ಮಾರ್ಗಭೇದದಿಂದ ಪ್ರಾಪ್ಯರೋ ಅಥವಾ ಒಂದೇ ಮಾರ್ಗ ಎಂದಿಟ್ಟುಕೊಂಡು ತಟಿಲ್ಲೋಕವೇ ಪ್ರಾಪ್ಯವೋ? "ಸಂವತ್ಸರಾದ್ವರುಣಲೋಕಮ್" "ಸಂವತ್ಸರಾತ್ತಟಿತಂ" ಎಂಬ ಎರಡು ಶ್ರುತಿಗಳು ತಟಿತ್ ಹಾಗೂ ವರಣ ಇಬ್ಬರನ್ನು ಹೊಂದುತ್ತಾರೆ ಎನ್ನುವುದಕ್ಕೆ ಗಮಕವಾಗಿದೆಯೋ ಅಥವಾ ಇಲ್ಲವೋ? ಉಭಯಪ್ರಾಪ್ತಿಗೆ ಪ್ರಾಪಕ ಅಲ್ಲ ಎನ್ನುವುದಕ್ಕೆ ಪ್ರಮಾಣವಿಲ್ಲವೋ ಅಥವಾ ಇದೆಯೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ** :- ಹಿಂದೆ "ದ್ವಿತೀಯಾಂ ಗತಿಂ ವಾಯುಂ" ಎಂಬ ವಿಶೇಷ ವಚನ ಇದ್ದದ್ದರಿಂದ ವಾಯುವೇ ದ್ವಿತೀಯ ಪ್ರಾಪ್ಯ ಎಂದು ನಿರ್ಣಯ ಮಾಡಿದ್ದು ಕೂಡುತ್ತದೆ. ಆದರೆ ಪ್ರಕೃತದಲ್ಲಿ ಆ ರೀತಿಯ ವಿಶೇಷವಚನವಿಲ್ಲ. ಹಾಗಾಗಿ, ಮತ್ತೂ ಎರಡೂ ಶ್ರುತಿಗಳು ಪ್ರಮಾಣವೇ ಆದ್ದರಿಂದ ಅಧಿಕಾರಿಭೇದದಿಂದ ಮಾರ್ಗಭೇದವನ್ನು ಹೇಳಿ ತಟಿತ್ ಹಾಗು ವರುಣ ಇಬ್ಬರಿಗೂ ಪ್ರಾಪ್ಯತ್ವವನ್ನು ಕೂಡಿಸಬಹುದು. ಹೀಗಾಗಿ ಇಬ್ಬರೂ ಕೂಡ ಸಂವತ್ಸರಾಭಿಮಾನಿಲೋಕದ ನಂತರ ಪ್ರಾಪ್ಯರಾಗಿದ್ದಾರೆ. ಹೀಗೆ ಸಂಗತಿ ಹಾಗು ಪೂರ್ವಪಕ್ಷಗಳನ್ನು ತಿಳಿಯಬೇಕು. (ಹಿಂದಿನಂತೆ ಇಲ್ಲಿಯೂ ಆನಂತರ್ಯ ಹಾಗೂ ಪ್ರತ್ಯುದಾಹಣ ಎಂಬ ಸಂಗತಿಯಿದೆ).

**ಸಿದ್ಧಾಂತ** :- ''ತಟಿತೋ ವರುಣಂ ಗಚ್ಛತಿ ತಟಿತಾ ಹ್ಯುಹ್ಯತೇ ವರುಣ ಲೋಕಃ'' ಎಂಬ ವಿಶೇಷ ಶ್ರುತಿಯಲ್ಲಿ ತಟಿತ್‌ಲೋಕದ ನಂತರವೇ ವರುಣ ಲೋಕವು ಹೊಂದಲ್ಪಡುತ್ತದೆ ಎಂದಿದೆ. ಈ ಶ್ರುತಿಯು ಯುಕ್ತಿಸಹಿತವೂ ಆಗಿದೆ. (ತಟಿತ್ ಲೋಕವು ವರುಣ ಲೋಕವನ್ನು ಹೊತ್ತಿದೆ. ಹಾಗಾಗಿ ತಟಿತ್ ಲೋಕವೇ ಪ್ರಥಮಪ್ರಾಪ್ಯ ಇದೇ ಶ್ರುತ್ಯುಕ್ತವಾದ ಯುಕ್ತಿ)

ಮಾರ್ಗಭೇದವನ್ನು ಒಪ್ಪಿದರೆ ''ದ್ವಾವೇವ ಮಾರ್ಗೌ'' ಎಂಬಲ್ಲಿ ಹೇಳಿದ ''ಬ್ರಹ್ಮಪ್ರಾಪ್ತಿ ಮಾರ್ಗವು ಒಂದೇ ಎಂದು ಪ್ರಸಿದ್ಧ'' ಎಂಬುದರ ವಿರೋಧ ಬರುತ್ತದೆ.

ಹಾಗಾಗಿ ಹಿಂದೆ ಹೇಳಿದ ಎರಡು ಶ್ರುತಿಗಳು (''ಸಂವತ್ಸರಾದ್ವರುಣಲೋಕಂ'' ಹಾಗು ''ಸಂವತ್ಸರಾತ್ತಟಿತಂ'') ಪೂರ್ವಾಪರೀ ಭಾವದಿಂದ ತಟಿತ್ ಹಾಗು ವರುಣ ಇವುಗಳ ಪ್ರಾಪ್ತಿಯನ್ನು ತಿಳಿಸುತ್ತಿದೆ ಎಂದೇ ಹೇಳಬೇಕು. ಆದ್ದರಿಂದ ಮೊದಲು ತಟಿತ್ ಲೋಕವನ್ನು ಹೊಂದಿ ನಂತರ ವರುಣ ಲೋಕವನ್ನು ಹೊಂದುತ್ತಾನೆ ಎಂದು ಸಿದ್ಧವಾಯಿತು.

**ಅಧಿಕರಣ ಫಲ** :- ಮಾರ್ಗನಿರ್ಣಯವಾಗದೇ ಹೋದರೆ ಅದರ ಅನುಸ್ಮೃತಿಯೂ ಕುಡುವುದಿಲ್ಲ ಎಂಬ ಆಕ್ಷೇಪ ಹಾಗೂ ಅದರ ಸಮಾಧಾನವೇ ಈ ಅಧಿಕರಣದ ಫಲ.

## ॥ ಓಂ ಆತಿವಾಹಿಕಸ್ತಲ್ಲಿಂಗಾತ್ ಓಂ ॥ ೪-೩-೪

ಹಿಂದಿನ ಅಧಿಕರಣದಲ್ಲಿ ಬೇರೆ ಬೇರೆ ವಾಕ್ಯದಲ್ಲಿರುವ ಹಾಗು ಬೇರೆ ಬೇರೆ ಪದಗಳ ಅರ್ಥವಾದ ತಟಿತ್ ಹಾಗು ವರುಣ ಇವರಿಬ್ಬರಿಗೆ ಪೌರ್ವಾ-ಪರ್ಯವನ್ನು ಹೇಳಲಾಗಿದೆ. ಈ ಅಧಿಕರಣದಲ್ಲಿ 'ವಾಯು' ಎಂಬ ಒಂದೇ ಶಬ್ದ ಅರ್ಥವಾದ ಆತಿವಾಹಿಕ ಹಾಗೂ ಮುಖ್ಯವಾಯುಗಳಿಗೆ ಪೌರ್ವಾ-ಪರ್ಯವನ್ನು ಹೇಳುತ್ತಿದ್ದಾರೆ. ಹೀಗೆ ಈ ಅಧಿಕರಣಕ್ಕೆ ಹಿಂದಿನಿಂದ ಸಂಗತಿಯಿದೆ.

''ದ್ವಿತೀಯಾಂ ಗತಿಂ ವಾಯುಮಾಗಚ್ಛತಿ'' ಎಂಬ ಶ್ರುತಿಯಲ್ಲಿ ಉಕ್ತವಾದ ವಾಯುವು ಆತಿವಾಹಿಕ (ಪ್ರವಹ)ನೋ ಅಥವಾ ಮುಖ್ಯವಾಯುವೋ? ಇಲ್ಲಿರುವ ವಾಯು ಶಬ್ದಕ್ಕೆ ಆತಿವಾಹಿಕ ಎಂದರ್ಥ ಮಾಡಿದರೆ, ಮುಖ್ಯ-ವಾಯುವಿಗೆ ಪ್ರಾಪ್ಯತ್ವ ಬರುವುದಿಲ್ಲವೋ ಅಥವಾ ಬರುತ್ತದೋ? ''ದೌರ್ವಾವ ವಿದ್ಯುತ್ವತಿಂ ವಾಯುಮುಪಗಮ್ಯ ತೇನೈವ ಬ್ರಹ್ಮ ಗಚ್ಛತಿ'' ಎಂಬ ಶ್ರುತಿಯಲ್ಲಿರುವ ವಾಯು ಶಬ್ದಕ್ಕೆ ಮುಖ್ಯವಾಯುವೋ ಆತಿ-ವಾಹಿಕನೋ ಎಂಬ ಸಂದೇಹ ಇರುವುದರಿಂದ, ಹಿಂದೆ ಬಂದಿರುವ ವಾಯು-ಶಬ್ದದಲ್ಲೂ ಸಂದೇಹ ಉಂಟಾಗುವುದರಿಂದ ನಿರ್ಣಯವಾಗುವುದಿಲ್ಲವೋ ಅಥವಾ ನಿರ್ಣಯ ಸಾಧ್ಯವಿದೆಯೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ** :- ಹಿಂದಿನ ಅಧಿಕರಣದಲ್ಲಿ ''ತಟಿತೋ ವರುಣಂ ಗಚ್ಛತಿ'' ಎಂಬ ಯುಕ್ತಿಸಹಿತವಾದ ಶ್ರುತಿಯ ಆಧಾರದಿಂದ ಪೌರ್ವಾಪರ್ಯವನ್ನು ನಿರ್ಣಯಿಸಿದ್ದು ಸರಿಯಾಗುತ್ತದೆ. ಆದರೆ ಪ್ರಕೃತದಲ್ಲಿ ''ಪೂರ್ವಃ ಆತಿವಾಹಿಕಃ ಚರಮಃ ಮುಖ್ಯಃ'' ಎಂಬುದಾಗಿ ಆಗಲೀ ಅಥವಾ ''ಪೂರ್ವಃಮುಖ್ಯಃ ಚರಮ ಆತಿವಾಹಿಕಃ'' ಎಂದಾಗಲೀ ಸಂದೇಹ ಬಂದರೆ, ನಿರ್ಣಯ ಮಾಡಲು ಯಾವುದೇ ವಿಶೇಷ ವಚನವಿಲ್ಲ. ಪೂರ್ವದಲ್ಲಿ ಹೇಳಲ್ಪಟ್ಟವನು ಆತಿವಾಹಿಕ ಎನ್ನುವುದಕ್ಕೆ ಯಾವುದೇ ಜ್ಞಾಪಕವಿಲ್ಲ.

**ಪ್ರಶ್ನೆ** :- ತಾರತಮ್ಯ ಕ್ರಮವೇ ಜ್ಞಾಪಕ ಎಂದೇಕೆ ಹೇಳಬಾರದು?

**ಉತ್ತರ** :- ತಾರತಮ್ಯಕ್ರಮ ಇಲ್ಲಿ ವಿವಕ್ಷಿತವಾಗಿಲ್ಲ. ಏಕೆಂದರೆ, ಸೋಮ, ಅಗ್ನಿ, ಇಂದ್ರ, ಧ್ರುವ ಇವರುಗಳಿಗೂ ಮಾರ್ಗದಲ್ಲಿ ಕ್ರಮವಾಗಿ ಪ್ರಾಪ್ಯತ್ವ-ವನ್ನು ಹೇಳಿದ್ದಾರೆ. ಆದರೆ ಇಲ್ಲಿ ತಾರತಮ್ಯವನ್ನು ಅನುಸರಿಸಿಲ್ಲ. ಹಾಗಾಗಿ ಮುಖ್ಯವಾಯುವೂ ದ್ವಿತೀಯ ಪ್ರಾಪ್ಯನಾಗಬಹುದು. ವಾಯು ಶಬ್ದಕ್ಕೆ ಮುಖ್ಯವಾಯು ಎಂದರ್ಥ ಮಾಡಿದರೆ ಮುಖ್ಯಾರ್ಥವನ್ನು ಸ್ವೀಕರಿಸಿ-ದಂತಾಗುತ್ತದೆ. ಈ ಎಲ್ಲಾ ಕಾರಣಗಳಿಂದ ದ್ವಿತೀಯ ಪ್ರಾಪ್ಯ ಎಂದು ಪ್ರಕೃತ-ನಾದ ವಾಯುವು ಮುಖ್ಯವಾಯುವೇ ಹೊರತು ಆತಿವಾಹಿಕನಲ್ಲ.

ಮುಖ್ಯವಾಯು ಎಂಬರ್ಥ ಮಾಡದೇ ಹೋದರೆ ಮುಖ್ಯವಾಯುವಿಗೆ ಪ್ರಾಪ್ಯತ್ವವೇ ಇಲ್ಲ ಎಂದಾಗಬೇಕಾಗುತ್ತದೆ.

ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯ ಇಲ್ಲಿ ಅನ್ವಯಿಸುವುದಿಲ್ಲ ಎಂದು ಶಂಕಾ ಮಾಡುತ್ತಿರುವುದರಿಂದ ಇಲ್ಲಿ ಪ್ರತ್ಯುದಾಹರಣ ಎಂಬ ಸಂಗತಿಯಿದೆ ಎಂದು ತಿಳಿಯಬೇಕು.

**ಸಿದ್ಧಾಂತ :-** 'ಪೂರ್ವಪ್ರಾಪ್ಯತ್ವ' ಎಂಬ ಲಿಂಗವಿರುವುದರಿಂದ ಪೂರ್ವ-ಪ್ರಾಪ್ಯ (ದ್ವಿತೀಯ ಪ್ರಾಪ್ಯ) ಆತಿವಾಹಿಕ. 'ವಿದ್ಯುತ್ ಶಬ್ದಿತ ವಾಣೀಪತಿತ್ವ' ಎಂಬ ಲಿಂಗವಿರುವುದರಿಂದ ಚರಮಪ್ರಾಪ್ಯ ಮುಖ್ಯವಾಯು. ಹೀಗೆ ನಿರ್ಣಯ ಸಾಧ್ಯವಿದೆ. ವಾಯುಶಬ್ದಕ್ಕೆ ಮುಖ್ಯಾರ್ಥವನ್ನು ತ್ಯಾಗ ಮಾಡಿ-ದಂತಾಗುತ್ತದೆ? ಎಂದರೆ, ಪೂರ್ವಪ್ರಾಪ್ಯತ್ವ ಎಂಬ ಲಿಂಗವಿರುವುದರಿಂದ ಹಾಗೂ ''ಉತ್ಕ್ರಾಂತಸ್ತು ಶರೀರಾತ್ ಸ್ವಾತ್ ಗಚ್ಛತ್ಯರ್ಚಿಷಮೇವ ತು'' ಇತ್ಯಾದಿ ಭಾಷ್ಯೋಕ್ತವಾದ ಸ್ಮೃತಿಯಿರುವುದರಿಂದಲೂ ಮುಖ್ಯಾರ್ಥವನ್ನು ತ್ಯಾಗ ಮಾಡುವುದು ತಪ್ಪಲ್ಲ. ಹೀಗಾಗಿ ಪೂರ್ವಪ್ರಾಪ್ಯ ಅತಿವಾಹಿಕನೇ ಎಂದು ಸಿದ್ಧವಾಗುವುದು.

**ಅಧಿಕರಣ ಫಲ :-** ''ಇಯದಾಮನನಾತ್'' ಎಂಬಲ್ಲಿ ಮುಖ್ಯ ಪ್ರಾಣನೇ ಅಧಿಕಾರಿಗಳಲ್ಲಿ ಉತ್ತಮ ಎಂದು ಹೇಳಲಾಗಿದೆ. ಆದರೆ ಮುಖ್ಯಪ್ರಾಣನು ದ್ವಿತೀಯ ಪ್ರಾಪ್ಯ ಎಂದಾದರೆ ಅದು ಕೂಡುವುದಿಲ್ಲ. ಈ ಆಕ್ಷೇಪ ಹಾಗೂ ಇದರ ಸಮಾಧಾನವೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಪ್ರಯೋಜನ.

## ॥ ಓಂ ವೈದ್ಯುತೇನೈವ ತತಸ್ತಚ್ಛ್ರುತೇಃ ಓಂ ॥ ೪-೩-೫

ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯ ಇಲ್ಲಿ ಅನ್ವಯವಾಗುವುದಿಲ್ಲ ಎಂದು ಶಂಕಾ ಮಾಡುತ್ತಿರುವುದರಿಂದ ಈ ಅಧಿಕರಣದಲ್ಲಿ ಪ್ರತ್ಯುದಾಹರಣ ಎಂಬ ಸಂಗತಿಯಿದೆ.

ಪ್ರಕೃತವಾದ ಬ್ರಹ್ಮಪ್ರಾಪ್ತಿ ಮಾರ್ಗದಲ್ಲಿ ಮುಖ್ಯವಾಯುವಿನ ನಂತರ ಪರಬ್ರಹ್ಮನಿಗಿಂತ ಮೊದಲು ಪ್ರಾಪ್ಯರಾದವರು ಇದ್ದಾರೋ ಇಲ್ಲವೋ? ಮುಖ್ಯವಾಯು ಹಾಗೂ ಪರಬ್ರಹ್ಮನ ನಡುವೆ ಪ್ರಾಪ್ಯರಾದವರನ್ನು ಒಪ್ಪಿದರೆ ಬಾಧಕವಿಲ್ಲವೋ ಅಥವಾ ಇದೆಯೋ?

ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ** :- ಹಿಂದೆ ದಿವಸ್ಪತಿತ್ವ(ವಾಣೀಪತಿತ್ವ) ಎಂಬ ಬಾಧಕವಿದ್ದದ್ದ-ರಿಂದ ಚರಮಪ್ರಾಪ್ಯ ಆತಿವಾಹಿಕ ಅಲ್ಲ ಎಂದದ್ದು ಸರಿ. ಆದರೆ ಇಲ್ಲಿ ಮುಖ್ಯವಾಯು ಹಾಗೂ ಪರಬ್ರಹ್ಮನ ಮಧ್ಯೆ ಇನ್ನೊಬ್ಬ ಪ್ರಾಪ್ಯನನ್ನು ಅಂಗೀಕರಿಸಿದರೆ ಅಂತಹ ಬಾಧಕವೇನೂ ಇಲ್ಲ. ಹಾಗೇ, ಮುಖ್ಯವಾಯುವೂ, ಹಿಂದೆ ಬಂದ ಅದಿಕಾರಿಗಳಂತೆ ಅಧಿಕಾರಿಯೇ ಆದ್ದರಿಂದ ಅವನೂ ಕೂಡ, ತನ್ನ ನಂತರ ಬ್ರಹ್ಮನನ್ನುಹೊರತು ಪಡಿಸಿ ಇನ್ನೊಬ್ಬ ಪ್ರಾಪ್ಯನನ್ನು ಹೊಂದಿರಲೇ ಬೇಕು ಎಂಬ ಅನುಮಾನವೂ ಇದೆ.

**ಪ್ರಶ್ನೆ** :- ''ಇಯದಾಮನನಾತ್'' ಎಂಬಲ್ಲಿ ಮುಖ್ಯವಾಯುವೇ ಅಧಿ ಕಾರಿಗಳಲ್ಲಿ ಉತ್ತಮ ಎಂದು ಹೇಳಿದೆ. ಅದೇ ಈ ಅನುಮಾನಕ್ಕೆ ಬಾಧಕ-ವಾಗುತ್ತದೆ. ಹಾಗಾಗಿ ಮುಖ್ಯವಾಯುವು ಪ್ರಾಪ್ಯಾಂತರ ಯುಕ್ತ ಎನ್ನುವುದು ಸರಿಯಲ್ಲ?

**ಉತ್ತರ** :- ''ಸೋಮಂ ವೈಶ್ವಾನರಂ ಚೇಂದ್ರಂ ಧ್ರುವಮ್'' ಎಂದು ಹಿಂದೆ ಭಾಷ್ಯದಲ್ಲಿ ಹೇಳಿದ ಸ್ಮೃತಿಯಲ್ಲಿ ಇಂದ್ರನಿಗಿಂತ ಕೆಳಗಿನವನಾದ ಧ್ರುವನಿಗೆ ಇಂದ್ರನ ನಂತರ ಪ್ರಾಪ್ಯತ್ವವು ಹೇಳಲ್ಪಟ್ಟಿದೆ. ಅದರಿಂದ ಉತ್ತಮತ್ವ ಕ್ರಮದಿಂದ ಪ್ರಾಪ್ತಿಕ್ರಮವಿಲ್ಲ ಎಂದು ತಿಳಿಯುತ್ತದೆ. ಹಾಗಾಗಿ ವಾಯುವಿನ ಅನಂತರ ಅವನಿಗಿಂತ ಕೆಳಗಿನವನಾದ ಇನ್ನೊಬ್ಬ ಪ್ರಾಪ್ಯನಿದ್ದಾನೆ ಎಂದು ಹೇಳಬಹುದು. ಯಾವುದೇ ಬಾಧಕವಿಲ್ಲ.

**ಸಿದ್ಧಾಂತ** :- ಪ್ರಾಣನು ಅಧಿಕಾರಿಗಳಲ್ಲಿ ಉತ್ತಮ ಎಂಬುದು ಇನ್ನೊಬ್ಬ ಪ್ರಾಪ್ಯನನ್ನು ಅಂಗೀಕರಿಸಿದ್ದಕ್ಕೆ ಬಾಧಕವಾಗದೇ ಹೋದರೂ ಬೇರೆ

ಬಾಧಕವಿದೆ. ಅದೇನೆಂದರೆ, ''ತತ್ಪುರುಷೋ ಮಾನವಃ ಸ ಏನಾನ್ ಬ್ರಹ್ಮ ಗಮಯತಿ'' ''ವಿದ್ಯುತ್ಪತ್ತಿರ್ವಾಯುರೇವ ನಯೇದ್ಬ್ರಹ್ಮ ನ ಚಾಪರಃ'' ಇತ್ಯಾದಿ ಶ್ರುತಿಸ್ಮೃತಿಗಳಲ್ಲಿ ವಾಯುವಿಗೇ ಬ್ರಹ್ಮಪ್ರಾಪಕತ್ವ ಇರುವುದು ಎಂದು ಹೇಳಲಾಗಿದೆ. ವಾಯು ಹಾಗೂ ಪರಬ್ರಹ್ಮರ ಮಧ್ಯದಲ್ಲಿ ಇನ್ನೊಬ್ಬ ಪ್ರಾಪ್ಯನನ್ನು ಒಪ್ಪಿದರೆ ಆಗ ಈ ಶ್ರುತಿಸ್ಮೃತಿಗಳ ವಿರೋಧ ಬರುತ್ತದೆ. ಹಾಗಾಗಿ ವಾಯುವೇ ಅಂತಿಮಪ್ರಾಪ್ಯ . ವಾಯುವಿನ ನಂತರ ಇನ್ನೊಬ್ಬ ಪ್ರಾಪ್ಯನನ್ನು ಒಪ್ಪಿದರೆ ಅವನೇ ಬ್ರಹ್ಮಪ್ರಾಪಕನಾಗಬೇಕಾಗುತ್ತದೆ. (ಶ್ರುತಿಸ್ಮೃತಿಗಳಲ್ಲಿ ಹೇಳಿದಂತೆ ವಾಯುವಾಗಲು ಸಾಧ್ಯವಿಲ್ಲ) ರಾಜಾದಿಗಳ ವಿಷಯದಲ್ಲೂ ಹೀಗೆ ಕಂಡಿದೆ. (ಕೊನೆಯವನಾದ ರಾಜನಿಗೆ ಅತ್ಯಂತ ಪ್ರಿಯನಾದವನೇ ರಾಜನ ಹತ್ತಿರ ಕರೆದುಕೊಂಡು ಹೋಗುವುದು ಕಂಡಿದೆ ಎಂದರ್ಥ.)

**ಅಧಿಕರಣ ಫಲ** :- ವಾಯುವಿನ ನಂತರವೂ ಇನ್ನೊಬ್ಬ ಪ್ರಾಪ್ಯನಿದ್ದಾನೆ ಎಂದರೆ ವಾಯುವಿಗೆ ಅತಿಶಯಪ್ರಾಧಾನ್ಯ ಸಿದ್ಧವಾಗುವುದಿಲ್ಲ ಎಂಬ ಆಕ್ಷೇಪ ಹಾಗೂ ಅದರ ಸಮಾಧಾನವೇ ಈ ಅಧಿಕರಣದ ಪೂರ್ವಪಕ್ಷ ಹಾಗು ಸಿದ್ಧಾಂತ ಫಲ.

## ॥ ಓಂ ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ಓಂ ॥ ೪-೩-೬

ಬ್ರಹ್ಮಪ್ರಾಪ್ತಿ ಮಾರ್ಗದಲ್ಲಿ ಚರಮಪ್ರಾಪ್ಯನನ್ನು ನಿರೂಪಣೆ ಮಾಡುತ್ತಿರುವುದರಿಂದ ಸಂಗತಿಯಿದೆ. ಅಥವಾ ಹಿಂದೆ ಹೇಳಿದ ಶ್ರುತಿ-ಯಲ್ಲಿರುವ ಬ್ರಹ್ಮಪದದ ಅರ್ಥ ಯಾರು ಎಂದು ಹೇಳುತ್ತಿರುವುದರಿಂದ ಈ ಅಧಿಕರಣಕ್ಕೆ ಹಿಂದಿನಿಂದ ಸಂಗತಿಯಿದೆ. ''ಸ ಏನಾನ್ ಬ್ರಹ್ಮ ಗಮಯತಿ'' ಎಂಬಲ್ಲಿ ಶ್ರುತನಾದ ಬ್ರಹ್ಮನು ಚತುರ್ಮುಖನೇನೋ ಅಥವಾ ಪರಬ್ರಹ್ಮನೋ ಅಥವಾ ಇಬ್ಬರೂ ಎಂಬ ಪಕ್ಷದಲ್ಲಿ ಏಕೈಕಪಕ್ಷದಲ್ಲಿ ಹೇಳಿದ ಸಾಧಕ-ಬಾಧಕಗಳನ್ನು ಕೂಡಿಸಲು ಸಾಧ್ಯವಿಲ್ಲವೋ ಅಥವಾ ಸಾಧ್ಯವಿದೆಯೋ? ಉಭಯ ಪ್ರಾಪ್ತಿಪಕ್ಷದಲ್ಲಿ ಒಟ್ಟಿಗೆ ಇಬ್ಬರನ್ನೂ ಹೊಂದಲು ಸಾಧ್ಯವಿಲ್ಲ-ವಾದ್ದರಿಂದ ಕ್ರಮವನ್ನು ಒಪ್ಪಿದರೆ ಅದಕ್ಕೆ ಪ್ರಮಾಣ ಇಲ್ಲವೋ ಅಥವಾ ಇದೆಯೋ?

ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ** :- ಚತುರ್ಮುಖನೇ ''ಸ ಏನಾನ್ ಬ್ರಹ್ಮ ಗಮಯತಿ'' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮಶಬ್ದವಾಚ್ಯ . ಏಕೆಂದರೆ, ''ಯದಿಹ ವಾವ ಪರಮಭಿಪಶ್ಯತಿ ಪ್ರಾಪ್ನೋತಿ ಬ್ರಹ್ಮಾಣಂ ಚತುರ್ಮುಖಮ್'' ಎಂಬ ಶ್ರುತಿಯಲ್ಲಿ ಹಾಗು ''ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ. ಪರಸ್ಯಾಂತೇ ಪರಾತ್ಮಾನಃ ಪ್ರವಿಶಂತಿ ಪರಂ ಪದಂ'' ಎಂಬ ಸ್ಮೃತಿಯಲ್ಲೂ ಚತುರ್ಮುಖಪ್ರಾಪ್ತಿಯನ್ನೇ ಹೇಳಲಾಗಿದೆ. ಮತ್ತು ''ತಥಾಪಿ ಪ್ರಕೃತೇ-ರ್ಬಂಧೋ ಬ್ರಹ್ಮಣಾ ಸಹ ಭಿದ್ಯತೇ'' ಇತ್ಯಾದಿ ವಚನಗಳಿಂದ ಚತುರ್ಮುಖ ಮುಕ್ತಿಪರ್ಯಂತ ಬಂಧ ನಾಶವಾಗುವುದಿಲ್ಲ ಎಂದು ತಿಳಿಯುತ್ತಿದೆ. ಬಂಧ ಇರುವಾಗ (ಮುಕ್ತಿಗಿಂತ ಮೊದಲು) ಚತುರ್ಮುಖನನ್ನೇ ಶ್ರವಣಾದಿ ಸಾಧನೆಗಳಿಂದ ಅಪರೋಕ್ಷೀಕರಿಸಿಕೊಳ್ಳುವುದರಿಂದ ಅವನನ್ನು ಹೊಂದುತ್ತಾರೆ ಎನ್ನುವುದೇ ಯುಕ್ತಿಯುಕ್ತವಾಗಿದೆ.

ಹಾಗಾಗಿ ''ಸ ಏನಾನ್ ಬ್ರಹ್ಮ ಗಮಯತಿ'' ಎಂಬಲ್ಲಿ ಬ್ರಹ್ಮಶಬ್ದಕ್ಕೆ ಪರಬ್ರಹ್ಮ ಎಂಬರ್ಥ ಮುಖ್ಯವಾದರೂ ಈ ಎಲ್ಲಾ ಬಾಧಕವಿರುವುದರಿಂದ ಮುಖ್ಯಾರ್ಥ-ವನ್ನು ಬಿಟ್ಟು ಅಮುಖ್ಯಾರ್ಥವಾದ ''ಚತುರ್ಮುಖ' ಎಂಬರ್ಥವನ್ನೇ ಇಟ್ಟುಕೊಳ್ಳಬೇಕು.

''ಬ್ರಹ್ಮವಿದಾಪ್ನೋತಿ ಪರಮ್'' ಎಂಬಲ್ಲಿ ಬ್ರಹ್ಮಜ್ಞಾನಿಯು ಪರಬ್ರಹ್ಮನನ್ನು ಹೊಂದುತ್ತಾನೆಂದು ಹೇಳಿದೆ. ಈ ಶ್ರುತಿಯ ವಿರೋಧ ಬರುವುದಿಲ್ಲವೇ? ಎಂದರೆ, ಇಲ್ಲಿ ''ಬ್ರಹ್ಮ ವಿದಾಪ್ನೋತಿ ಪರಂ'' ಎಂಬುದು ಸಾಮಾನ್ಯಶ್ರುತಿ. ಇದಕ್ಕೆ ಹಿಂದೆ ಉದಾಹರಿಸಿದ ವಿಶೇಷ ಶ್ರುತಿಗಳ ವಿರೋಧ ಬರುವುದರಿಂದ, ಚತುರ್ಮುಖನನ್ನು ಹೊಂದಿದ ಮೇಲೆ ಶೀಘ್ರದಲ್ಲೇ ಪ್ರಳಯಕಾಲದಲ್ಲಿ ಚತುರ್ಮುಖನ ಜೊತೆ ಪರಬ್ರಹ್ಮನನ್ನು ಹೊಂದುತ್ತಾರೆ. ಎಂದು ಸಾಮೀಪ್ಯಾರ್ಥವನ್ನು ಇಟ್ಟುಕೊಂಡು ಅರ್ಥ ಹೇಳಬೇಕು. ಹಾಗಾಗಿ ಈ ಶ್ರುತಿಯು ಸಾವಕಾಶವಾಯಿತು. ಇದು ಒಂದು ಪೂರ್ವಪಕ್ಷ (ಬಾದರಿ ಆಚಾರ್ಯರ ಮತ) ಎರಡನೇ ಪೂರ್ವಪಕ್ಷ (ಜೈಮಿನಿ ಆಚಾರ್ಯರ ಮತ) ಏನೆಂದರೆ, ''ಸ ಏನಾನ್ ಬ್ರಹ್ಮ ಗಮಯತಿ'' ಎಂಬಲ್ಲಿರುವ ಬ್ರಹ್ಮಶಬ್ದಕ್ಕೆ

ಪರಬ್ರಹ್ಮ ಎಂದೇ ಅರ್ಥ. ಬ್ರಹ್ಮಶಬ್ದಕ್ಕೆ ಪರಬ್ರಹ್ಮ ಎಂಬುದೇ ಮುಖ್ಯಾರ್ಥ. (ಮುಖ್ಯಾರ್ಥ ಕೂಡುವಾಗ ಅಮುಖ್ಯಾರ್ಥವನ್ನು ಇಟ್ಟುಕೊಳ್ಳಬಾರದು). ಪರಬ್ರಹ್ಮನನ್ನೇ ಜ್ಞಾನಿಗಳು ಶ್ರವಣಾದಿಸಾಧನಗಳಿಂದ ಅಪರೋಕ್ಷೀಕರಿಸಿ-ಕೊಂಡಿರುವುದು. ಚತುರ್ಮುಖನನ್ನು ಶ್ರವಣಾದಿಸಾಧನಗಳಿಂದ ಅಪ-ರೋಕ್ಷೀಕರಿಸಿಕೊಂಡಿಲ್ಲ ಹಾಗೂ ಚತುರ್ಮುಖನನ್ನು ಹೊಂದಬೇಕು, ಎಂಬ ಇಚ್ಛೆಯೂ ಇಲ್ಲ. ಹಾಗಾಗಿ ''ಸ ಏನಾನ್'' ಎಂಬಲ್ಲಿ ವಾಯುವು ಯಾವ ಬ್ರಹ್ಮನ ಹತ್ತಿರ ಕರೆದುಕೊಂಡು ಹೋಗುತ್ತಾನೆ ಎಂದು ಹೇಳಿದೆಯೋ ಆ ಬ್ರಹ್ಮ ಪರಬ್ರಹ್ಮನೇ.

ಉಭಯ ಸ್ವೀಕಾರಪಕ್ಷ ಸರಿಯಲ್ಲ. ಎರಡೂ ಪಕ್ಷಗಳಲ್ಲಿ ಹೇಳಿದ ಸಾಧಕಬಾಧಕಗಳ ಸಮೀಕರಣ ಸಾಧ್ಯವಿಲ್ಲ. ಮತ್ತು ಇಬ್ಬರನ್ನೂ ಒಂದೇ ಬಾರಿ ಹೊಂದುವುದು ಸಾಧ್ಯವಿಲ್ಲ. ಕ್ರಮವಾಗಿ ಹೊಂದುತ್ತಾರೆ ಎಂದರೆ ಅದಕ್ಕೆ ಯಾವುದೇ ಪ್ರಮಾಣವಿಲ್ಲ.

**ಸಿದ್ಧಾಂತ :-** ''ಸ ಏನಾನ್...'' ಎಂಬಲ್ಲಿ ಚತುರ್ಮುಖ ಹಾಗೂ ಪರಬ್ರಹ್ಮ ಇಬ್ಬರೂ ಬ್ರಹ್ಮಶಬ್ದವಾಚ್ಯರೇ. ಹೇಗೆಂದರೆ, ಚತುರ್ಮುಖನೇ ಇಲ್ಲಿರುವ ಬ್ರಹ್ಮಶಬ್ದವಾಚ್ಯ ಪರಬ್ರಹ್ಮ ಅಲ್ಲ ಎನ್ನುವುದಕ್ಕಾಗಲೀ, ಅಥವಾ ಪರಬ್ರಹ್ಮನೇ ಬ್ರಹ್ಮಶಬ್ದವಾಚ್ಯ ಚತುರ್ಮುಖ ಅಲ್ಲ ಎನ್ನುವುದಕ್ಕಾಗಲೀ ಯಾವುದೇ ವಿಶೇಷಕಾರಣವಿಲ್ಲ. ಹಿಂದೆ ಹೇಳಿದ ಹೇತುಗಳು ಆ ಆ ಅರ್ಥವನ್ನು ಸ್ವೀಕರಿಸಬೇಕು ಎಂದಷ್ಟೇ ಹೇಳುತ್ತಿವೆ. ಹಾಗಾಗಿ ಈ ಪ್ರಾಪ್ತಿ-ಶ್ರುತಿಯಲ್ಲಿ ಇಬ್ಬರೂ ಬ್ರಹ್ಮಶಬ್ದವಾಚ್ಯರು ಎಂಬುದೇ ವಿವಕ್ಷಿತವಾದ ಅರ್ಥ.

ಇನ್ನು ಚತುರ್ಮುಖ ಎಂಬರ್ಥ ಇಟ್ಟುಕೊಂಡರೆ ಪ್ರತಿಪತ್ತಿ (ಅಪರೋಕ್ಷ ಜ್ಞಾನ) ಅಭಿಸಂಧಿ (ಇಚ್ಛಾ) ಗಳು ಇಲ್ಲ ಎಂಬ ಬಾಧವನ್ನು ಹೇಳಲಾಗಿದೆಯಲ್ಲಾ ಎಂದರೆ, ಇಲ್ಲ ಪ್ರತೀಕಾಲಂಬನರಿಗೆ ಪರಬ್ರಹ್ಮಪ್ರಾಪ್ತಿಯನ್ನು (ನೇರವಾಗಿ) ಒಪ್ಪಿಲ್ಲ ಹಾಗೂ ಪ್ರತೀಕಾಲಂಬನರಿಗೆ ಚತುರ್ಮುಖನ ವಿಷಯದಲ್ಲಿ ಪ್ರತಿಪತ್ತಿ ಅಭಿಸಂಧಿಗಳು ಇರುತ್ತವೆ. ಹಾಗಾಗಿ ಹಿಂದೆ ಹೇಳಿದ ಬಾಧಕ ಸರಿಯಲ್ಲ. ಅದೇ ರೀತಿ, ಪರಬ್ರಹ್ಮ ಎಂದರ್ಥ ಮಾಡಿದರೆ ''ಗತ್ಯುಪಪತ್ತೇಃ'' ಎಂಬಲ್ಲಿ

ಬಂಧವು ನಾಶವಾಗಿರುವುದಿಲ್ಲ ಎಂಬ ಬಾಧಕ ಹೇಳಿದೆಯಲ್ಲಾ ? ಎಂದರೆ ಇಲ್ಲ. ''ಅಪ್ರತೀಕಾಶ್ರಯಾ ಯೇ ಹಿ ತೇ ಯಾಂತಿ ಪರಮೇವ ತು'' ಎಂಬ ಪ್ರಮಾಣದ ಆಧಾರದಿಂದ ಅಪ್ರತೀಕಾಲಂಬನರು (ವ್ಯಾಪ್ತೋಪಾಸಕರು) ವೈಕುಂಠದಲ್ಲಿ ಅಮುಕ್ತಸ್ಥಾನದಲ್ಲಿರುವ ಪರಬ್ರಹ್ಮನನ್ನು ಹೊಂದುತ್ತಾರೆ ಎಂದು ಅಂಗೀಕರಿಸಲಾಗಿದೆ. ಹಾಗಾಗಿ ಯಾವುದೇ ಬಾಧಕವಿಲ್ಲ.

ಹೀಗೆ ಪ್ರತಿಕಾಲಂಬನರು, ಅಪ್ರತೀಕಾಲಂಬನರು ಎಂಬ ಅಧಿಕಾರಿ-ಬೇಧವನ್ನು ಇಟ್ಟುಕೊಂಡು ಉಭಯಾರ್ಥವನ್ನು ಸ್ವೀಕರಿಸಿ ಉಭಯ ಪಕ್ಷದಲ್ಲಿ ಹೇಳಿದ ಹೇತುಗಳನ್ನು ಸಮೀಕರಿಸಲು ಸಾಧ್ಯವಿದೆ. ''ಅಪ್ರತೀಕಾಶ್ರಯಾ ಯೇ ಹಿ ತೇ ಯಾಂತಿ ಪರಮೇವ ತು. ಸ್ವದೇಹೇ ಬ್ರಹ್ಮದೃಷ್ಟ್ಯೈವ ಗಚ್ಛೇದ್ಬ್ರಹ್ಮ ಸಲೋಕತಾಮ್'' ಎಂದು ಹೇಳಿದ್ದರಿಂದ ಯೋಗ್ಯತಾಕ್ರಮದಿಂದ ಕೆಲವರು ಪ್ರಳಯದಲ್ಲಿ ಕೆಲವರು ಅದಕ್ಕಿಂತ ಮೊದಲು ಪರಬ್ರಹ್ಮನನ್ನು ಹೊಂದುತ್ತಾರೆ ಎಂದು ಹೇಳಬೇಕು. ಹಾಗಾಗಿ ಕ್ರಮಪ್ರಾಪ್ತಿಗೆ ಪ್ರಮಾಣವಿಲ್ಲ ಎಂಬುದು ಸರಿಯಲ್ಲ.

**ಅಧಿಕರಣ ಫಲ** :- ಗಮ್ಯನಿರ್ಣಯವಾಗದೇ ಹೋದರೆ ಗತಿಸ್ಮೃತಿ ಕೂಡುವುದಿಲ್ಲ ಎಂಬ ಆಕ್ಷೇಪ, ಗಮ್ಯ ನಿರ್ಣಯ ವಾಗುತ್ತದೆಯಾದ್ದರಿಂದ ಗತಿಸ್ಮೃತಿ ಕೂಡುತ್ತದೆ ಎಂಬ ಸಮಾಧಾನ. ಇದೇ ಈ ಅಧಿಕರಣದ ಪೂರ್ವಪಕ್ಷ, ಸಿದ್ಧಾಂತ ಫಲ.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ನಾಲ್ಕನೆಯ ಅಧ್ಯಾಯದ ಮೂರನೆಯ ಪಾದವು ಸಮಾಪ್ತವಾಯಿತು.**

# ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಪಾದ

ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ ಎಂಬ ನಾಲ್ಕು ವಿಧ ಫಲಗಳಲ್ಲಿ ಮೂರನ್ನು ಹೇಳಿ ಈಗ ಅವಸರಪ್ರಾಪ್ತವಾದ ಭೋಗವನ್ನು ಹೇಳುತ್ತಿದ್ದಾರೆ.

## ॥ ಓಂ ಸಂಪದ್ಯಾವಿಹಾಯ ಸ್ವೇನ ಶಬ್ದಾತ್ ಓಂ ॥ ೪-೪-೧

''ಪರಂ ಜೈಮಿನಿ...'' ಎಂಬಲ್ಲಿ ಬ್ರಹ್ಮಪ್ರಾಪ್ತಿಯುಳ್ಳವನು ಎಂದು ಪ್ರಕೃತನಾದ ಮುಕ್ತನು ಬ್ರಹ್ಮನನ್ನು ಅತಿಕ್ರಮಿಸಿ ಭೋಗಗಳನ್ನು ಅನುಭವಿಸು-ತ್ತಾನೋ ಅಥವಾ ಮೀರದೇ ಅನುಭವಿಸುತ್ತಾನೋ? ''ಏತಂ ಸೇತುಂ ತೀರ್ತ್ವಾಂಧಸ್ಸನ್ನನಂಧೋ ಭವತಿ'' ಎಂಬ ಶ್ರುತಿಯಲ್ಲಿ ಅತಿಕ್ರಮವನ್ನು ಹೇಳಿದ್ದಾರೋ ಅಥವಾ ಅನತಿಕ್ರಮವನ್ನೋ? ಅನತಿಕ್ರಮ ಎಂಬರ್ಥವನ್ನು ಇಟ್ಟುಕೊಳ್ಳಲು ಕಲ್ಪಕವಿಲ್ಲವೋ ಅಥವಾ ಇದೆಯೋ ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ :-** ''ಏತಂ ಸೇತುಂ...'' ಎಂಬ ಶ್ರುತಿಗೆ ಬೇರೆ ಅರ್ಥ ಮಾಡಲು ಯಾವುದೇ ಕಲ್ಪಕವಿಲ್ಲವಾದ್ದರಿಂದ ಸೇತು ಶಬ್ದೋಕ್ತನಾದ ಬ್ರಹ್ಮನನ್ನು 'ತೀರ್ತ್ವಾ' ಅಂದರೆ ಅತಿಕ್ರಮಿಸಿ ಎಂದೇ ಅರ್ಥ ಮಾಡಬೇಕು. ಬ್ರಹ್ಮಾತಿ-ಕ್ರಮಣದ ನಂತರವೇ ಸ್ವರೂಪಾ ವಿರ್ಭಾವ ಎಂಬ ಮುಕ್ತಿಯಾಗುತ್ತದೆ ಎಂದು ಶ್ರುತಿಯ ಅಭಿಪ್ರಾಯ.

ಬ್ರಹ್ಮನನ್ನು ಹೊಂದಿದವನೂ ಅಮುಕ್ತನೇ ಆಗಿರುತ್ತಾನೆ ಎಂದು ತಿಳಿಯುತ್ತಿದೆ. ಮುಕ್ತನಾದರೆ ಮಾತ್ರ ಭೋಗಭೋಕ್ತೃತ್ವ ಕೂಡುತ್ತದೆ. ಹಾಗಾಗಿ ಬ್ರಹ್ಮನನ್ನು ಅತಿಕ್ರಮಿಸಿ ಮುಕ್ತನಾಗಿ ಭೋಗಗಳನ್ನು ಭೋಗಿಸುತ್ತಾನೆ ಎಂದೇ ಹೇಳಬೇಕು.

**ಸಿದ್ಧಾಂತ :-** ''ಪರಂ ಜ್ಯೋತಿರುಪಸಂಪದ್ಯ'' ಎಂಬ ಶ್ರುತಿಯಲ್ಲಿ ಬ್ರಹ್ಮನನ್ನು ಹೊಂದಿದವನಿಗೇ ಸ್ವರೂಪಾವಿರ್ಭಾವ ಎಂಬ ಮೋಕ್ಷವಿದೆ ಎಂದು ಹೇಳಲಾಗಿದೆ. ಅದೇ ರೀತಿ ''ಇಮಾಂ ಘೋರಾಮಶಿವಾಂ ನದೀಂ ತೀರ್ತ್ವಾ ಏತಂ ಸೇತುಮಾಪ್ಯ'' ಎಂಬ ಸ್ಪಷ್ಟ ಶ್ರುತಿಯಿರುವುದರಿಂದ ''ಏತಂ ಸೇತುಂ''

ಎಂಬಶ್ರುತಿಗೂ ''ಏತಂ ಸೇತುಂ ಗಂತುಂ ಅನ್ಯತ್ತೀರ್ತ್ವಾ (ಆಶ್ರಯನಾದ ಬ್ರಹ್ಮನನ್ನು ಹೊಂದಲು ಉಳಿದದ್ದನ್ನು ದಾಟಿ) ಎಂದೇ ಅರ್ಥ ಮಾಡಬೇಕು. ಜೊತೆಗೆ, ''ಆತ್ಮಾನಮಭಿಸಂಪದ್ಯ ಏತೇನಾತ್ಮನಾ ಯಥಾಕಾಮಂ ಸರ್ವಾನ್ ಕಾಮಾನನುಭವತಿ'' ಎಂಬಶ್ರುತಿಯೂ ಇದೇ ಅರ್ಥವನ್ನು ಹೇಳುತ್ತಿದೆ. ಈ ಎಲ್ಲಾ ಕಾರಣಗಳಿಂದ ಜ್ಞಾನಿಯು ಬ್ರಹ್ಮನನ್ನು ಹೊಂದಿ ಅವನನ್ನು ಅತಿಕ್ರಮಿಸದೇ ಭೋಗಗಳನ್ನು ಅನುಭವಿಸುತ್ತಾನೆ ಎಂದೇ ಹೇಳಬೇಕು.

**ಅಧಿಕರಣ ಫಲ** :- ಜ್ಞಾನಿಯು ಬ್ರಹ್ಮನನ್ನು ಅತಿಕ್ರಮಿಸುವುದಾದರೆ ಬ್ರಹ್ಮನು ಚರಮಪ್ರಾಪ್ಯನಲ್ಲ ಎಂದಾಗುತ್ತದೆ. ಈ ಆಕ್ಷೇಪ ಹಾಗೂ ಇದರ ಸಮಾಧಾನವೇ ಈ ಅಧಿಕರಣದ ಪೂರ್ವಪಕ್ಷ, ಸಿದ್ಧಾಂತ ಫಲ.

## ॥ ಓಂ ಮುಕ್ತಃ ಪ್ರತಿಜ್ಞಾನಾತ್ ಓಂ ॥ ೪-೪-೨

ಹಿಂದಿನ ಅಧಿಕರಣದ ಮೇಲಿನ ಆಕ್ಷೇಪದಿಂದ ಇಲ್ಲಿ ಶಂಕಾ ಮಾಡುತ್ತಿರು-ವುದರಿಂದ ಆಕ್ಷೇಪಿಕೀ ಎಂಬ ಸಂಗತಿಯಿದೆ.

''ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ'' ಎಂದು ಹಿಂದಿನ ಸೂತ್ರದಲ್ಲಿ ಉದಾಹರಿಸಿದ ಶ್ರುತಿಯ ಶೇಷವಾದ ''ಸ ತತ್ರ ಪರ್ಯೇತಿ'' ಎಂಬ ಶ್ರುತಿಯಲ್ಲಿರುವ 'ಸ' ಎಂಬುದಾಗಿ ಹೇಳಲ್ಪಟ್ಟವನು ಅಮುಕ್ತನೋ ಅಥವಾ ಮುಕ್ತನೋ? 'ಸ' ಎಂಬ ತದ್ ಶಬ್ದಕ್ಕೆ ಅವ್ಯವಹಿತಪೂರ್ವಪರಾಮರ್ಶವನ್ನು ಹೇಳಬೇಕೋ ಅಥವಾ ಪ್ರಾಕರಣಿಕ ಪರಾಮರ್ಶವನ್ನೋ? ಅವ್ಯವಹಿತಪೂರ್ವ ಪರಾಮರ್ಶವನ್ನು ಒಪ್ಪಿದರೆ 'ಪರ್ಯೇತಿ' ಇತ್ಯಾದಿಗಳಿಂದ ಹೇಳಿದ ಕ್ರಿಯಾವತ್ವ ಬಾಧಕವಾಗುತ್ತದೋ ಇಲ್ಲವೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ** :- ಹಿಂದಿನ ಸೂತ್ರದಲ್ಲಿ, ಬ್ರಹ್ಮನನ್ನು ಹೊಂದಿದ, ಆವಿರ್ಭೂತ ಸ್ವರೂಪನಾದ ಮುಕ್ತನನ್ನೇ ''ಸ ತತ್ರ ಪರ್ಯೇತಿ'' ಎಂಬಲ್ಲಿ 'ಸ' ಎಂಬುದಾಗಿ ಪರಾಮರ್ಶೆ ಮಾಡಿ, ಮುಕ್ತನು ಈಶನನ್ನು ಅತಿಕ್ರಮಿಸದೇ ಭೋಗ ಮಾಡುತ್ತಾನೆ. ಎನ್ನುವುದಕ್ಕೆ ''ಸ ತತ್ರ ....'' ಎಂಬುದನ್ನೇ ಪ್ರಮಾಣವನ್ನಾಗಿ ಇಟ್ಟುಕೊಂಡು, ''ಸ್ವೇನ'' ಎಂದು ಹೇಳಿದ್ದು ಸರಿಯಲ್ಲ. ಏಕೆಂದರೆ, ''ಸ್ವೇನ''

ಎಂಬ ಪೂರ್ವವಾಕ್ಯದಲ್ಲಿ ನಿರ್ಗುಣೋಪಾಸಕನ ಸ್ವರೂಪಾವಿರ್ಭಾವವು ಹೇಳಲ್ಪಟ್ಟಿದೆ. ''ಸ ತತ್ರ ...' ಎಂಬಲ್ಲಿಯಾದರೋ ದಹರ ವಿದ್ಯೆಯನ್ನು ಉಪಾಸನೆ ಮಾಡುವ ಅಮುಕ್ತನನ್ನೇ ಪರಾಮರ್ಶಿಸಲಾಗಿದೆ.

ಹೀಗೆ ಪ್ರಕರಣಭೇದವನ್ನು ಕಲ್ಪನೆ ಮಾಡುವುದು ಸರಿಯಲ್ಲ ಎನ್ನಬಾರದು. ಏಕೆಂದರೆ, ''ಸ ತತ್ರ ಪರ್ಯೇತಿ'' ಎಂಬ ವಾಕ್ಯಶೇಷದಲ್ಲಿ ಹೇಳಿದ ಪರ್ಯಟನಾದಿ ಕ್ರಿಯಾವತ್ವವೇ ಕಲ್ಪಕವಾಗಿದೆ. ಕೃತಕೃತ್ಯನಾದ ಮುಕ್ತನಿಗೆ ಕ್ರಿಯಾವತ್ವ ಕೂಡುವುದಿಲ್ಲ.

**ಪ್ರಶ್ನೆ** :- ಅಮುಕ್ತನಾದರೆ ಈ ದಿವ್ಯಭೋಗ ಹೇಗೆ ಕೂಡುತ್ತದೆ?

**ಉತ್ತರ** :- ಅಮುಕ್ತನಿಗೆ ಬೇರೆಕಾಲದಲ್ಲಿ ಇಂತಹ ಭೋಗವಿಲ್ಲದೇ ಹೋದರೂ ಬ್ರಹ್ಮನನ್ನು ಹೊಂದಿದಾಗ ದಿವ್ಯಭೋಗ ಕೂಡುತ್ತದೆ.

**ಪ್ರಶ್ನೆ** :- ಎರಡನೇ ಅಧ್ಯಾಯದಲ್ಲಿ ''ವಿಹಾರೋಪದೇಶಾತ್'' ಎಂಬಲ್ಲಿ ಮುಕ್ತನಿಗೇನೇ ''ಸ ತತ್ರ ಪರ್ಯೇತಿ'' ಎಂದು ವಿಹಾರವನ್ನು ಹೇಳಿದ್ದರಿಂದ ಅದರ ವಿರೋಧ ಬರುವುದಿಲ್ಲವೇ?

**ಉತ್ತರ** :- ಆ ಸೂತ್ರದ ಮೇಲೂ ಆಕ್ಷೇಪ ಮಾಡುತ್ತಿದ್ದೇವೆ. ಹಾಗಾಗಿ ಅಲ್ಲಿ ಹೇಳಿದ್ದೂ ಸರಿಯಲ್ಲ ಎಂದೇ ಅಭಿಪ್ರಾಯ.

**ಸಿದ್ಧಾಂತ** :- ''ಅಹರಹರೇನಂ'' ಎಂದು ಭಾಷ್ಯದಲ್ಲಿ ಹೇಳಿದ ಶ್ರುತಿಯಲ್ಲಿ ಬ್ರಹ್ಮನನ್ನು ಹೊಂದಿದ ಸುಪ್ತರಾದವರಿಗೆ, ಅವರು ಅಮುಕ್ತರಾದ್ದರಿಂದಲೇ, ಅವರಿಗೆ ಯಾವುದೇ ದಿವ್ಯಭೋಗ ವಿರುವುದಿಲ್ಲ ಎಂದು ಹೇಳಿ ಮುಕ್ತನಾಗಿ ಬ್ರಹ್ಮನನ್ನು ಹೊಂದಿದವನಿಗೆ ಮಾತ್ರ ದಿವ್ಯಭೋಗವಿರುತ್ತದೆ ಎಂದು ಹೇಳಲಾಗಿದೆ. (ಹಾಗಾಗಿ ಅಮುಕ್ತರು ಬ್ರಹ್ಮನನ್ನು ಹೊಂದಿದಾಗ ಅವರಿಗೆ ದಿವ್ಯ ಭೋಗ ಕೂಡುತ್ತದೆ ಎಂದು ಹೇಳಿದ್ದು ತಪ್ಪು) ಮುಕ್ತನು ಕೃತಕೃತ್ಯನಾದರೂ ಅವನಲ್ಲಿ ಕ್ರಿಯಾವತ್ವವು ಶ್ರುತಿಸಿದ್ಧವಾದ್ದರಿಂದ ಒಪ್ಪಬೇಕು. ಹಾಗಾಗಿ ''ಸ ತತ್ರ ಪರ್ಯೇತಿ'' ಎಂಬಲ್ಲಿ ಅವ್ಯವಹಿತಪೂರ್ವ ಪರಾಮರ್ಶ ಎಂದಿಟ್ಟು-ಕೊಂಡರೆ ಯಾವುದೇ ಬಾಧಕವಿಲ್ಲವಾದ್ದರಿಂದ 'ಸ' ಎಂಬುದಾಗಿ ಹೇಳಲ್ಪಟ್ಟ-ವನು ಮುಕ್ತನೇ ಎಂದು ಸಿದ್ಧವಾಗುತ್ತದೆ.

**ಅಧಿಕರಣ ಫಲ** :- ಮುಕ್ತನಿಗೆ ಭೋಗವಿಲ್ಲ ಎಂಬ ಆಕ್ಷೇಪ ಹಾಗೂ ಅದರ ಸಮಾಧಾನವೇ ಈ ಅದಿಕರಣದ ಪೂರ್ವಪಕ್ಷ ಹಾಗು ಸಿದ್ಧಾಂತ ಫಲ.

## ॥ ಓಂ ಆತ್ಮಾ ಪ್ರಕರಣಾತ್ ಓಂ ॥ ೪-೪-೩

ಹಿಂದಿನ ಅಧಿಕರಣದಲ್ಲಿ ''ಸ್ವೇನ'' ಎಂಬ ಶ್ರುತಿಯ ವಾಕ್ಯಶೇಷದಲ್ಲಿರುವ ತತ್ ಶಬ್ದಾರ್ಥವು ಹೇಳಲ್ಪಟ್ಟಿದೆ. ಈ ಅಧಿಕರಣದಲ್ಲಿ ಪೂರ್ವವಾಕ್ಯವಾದ ''ಪರಂ ಜ್ಯೋತಿಃ'' ಎಂಬಲ್ಲಿರುವ ಜ್ಯೋತಿಃ ಶಬ್ದದ ಅರ್ಥವು ಹೇಳಲ್ಪಡುತ್ತದೆ. ಹೀಗೆ ಈ ಅಧಿಕರಣಕ್ಕೆ ಸಂಗತಿಯಿದೆ.

''ಪರಂಜ್ಯೋತಿಃ'' ಎಂಬಲ್ಲಿರುವ ಜ್ಯೋತಿಃ ಶಬ್ದದ ಅರ್ಥ ಆದಿತ್ಯನೋ ಅಥವಾ ಬ್ರಹ್ಮನೋ? ''ಸ ತೇಜಸಿ ಸೂರ್ಯೇ ಸಂಪನ್ನಃ'' ಎಂಬ ಸಮಾಖ್ಯಾ ಪ್ರಬಲವೋ ಅಥವಾ ಪ್ರಕರಣ ಪ್ರಬಲವೋ? ಸಮಾಖ್ಯಾ ನಿರವಕಾಶವೋ ಅಥವಾ ಸಾವಕಾಶವೋ ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ** :- 'ಜ್ಯೋತಿಃ' ಶಬ್ದವು ''ಸೂರ್ಯಮಗನ್ಮ ಜ್ಯೋತಿಃ'' ಇತ್ಯಾದಿ ವಾಕ್ಯಗಳಲ್ಲಿ ಸೂರ್ಯ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಹಾಗೇ ''ಜ್ಯೋತಿಶ್ಚರಣಾಭಿಧಾನಾತ್'' ಎಂಬಲ್ಲಿ ಹೇಳಿದಂತೆ ಭಗವಂತನಲ್ಲಿಯೂ ಜ್ಯೋತಿಶಬ್ದದ ಪ್ರಯೋಗವಿದೆ. ಆದರೂ ''ಸ ತೇಜಸಿ ಸೂರ್ಯೇ ಸಂಪನ್ನಃ'' ಎಂಬ ಸಮಾಖ್ಯಾ ಇರುವುದರಿಂದ ಏಕ ವಿಷಯತ್ವ ಸಿದ್ಧಿಗೋಸ್ಕರ ಇಲ್ಲಿರುವ ಜ್ಯೋತಿಃ ಶಬ್ದಕ್ಕೆ ಆದಿತ್ಯ ಎಂದೇ ಅರ್ಥ ಮಾಡಬೇಕು. ವಿಷ್ಣು ಎಂದಲ್ಲ. ಇದು ವಿಷ್ಣು ಪ್ರಕರಣವಾದರೂ ಪ್ರಾಸಂಗಿಕವಾಗಿ ಬೇರೆ ವಿಚಾರವನ್ನೂ ಮಾಡಬಹುದಾದ್ದರಿಂದ ಪ್ರಕರಣವಶಾತ್ ಜ್ಯೋತಿಃ ಶಬ್ದಕ್ಕೆ ವಿಷ್ಣು ಎಂದರ್ಥ ಮಾಡುವುದು ಸರಿಯಲ್ಲ. ಜೊತೆಗೆ ಸಮಾಖ್ಯಾ ನಿರವಕಾಶವಾದ್ದರಿಂದ ಅಂತಹ ನಿರವಕಾಶಸಮಾಖ್ಯಾದಿಂದ ಪ್ರಕರಣಕ್ಕೆ ಬಾಧವನ್ನೇ ಹೇಳಬೇಕು.

**ಸಿದ್ಧಾಂತ** :- ''ಯ ಆತ್ಮಾ ಅಪಹತಪಾಪ್ಮಾ'' ಇತ್ಯಾದಿಯಾದಿ ಬ್ರಹ್ಮನಲ್ಲೇ ಅಸಾಧಾರಣವಾದ ಶ್ರುತಿಲಿಂಗಗಳಿಂದ ಬ್ರಹ್ಮನ ವಿಚಾರವನ್ನು ಪ್ರಾರಂಭಮಾಡಿ ನಂತರ ''ಪರಂಜ್ಯೋತಿಃ'' ಎಂದು ಹೇಳಿದ್ದರಿಂದ ಈ ವಾಕ್ಯವು ಬ್ರಹ್ಮಪ್ರಕರಣದಲ್ಲಿ ಬಂದಿದೆ ಎಂದು ಸಿದ್ಧವಾಗುತ್ತದೆ. ಪ್ರಕರಣವು

ಸಮಾಖ್ಯಾಗಿಂತಲೂ ಪ್ರಬಲವಾಗಿದೆ. ಸಮಾಖ್ಯಾ ನಿರವಕಾಶವಾಗಿದೆಯಲ್ಲಾ? ಎಂದರೆ ಇಲ್ಲ. ಈ ಸಮಾಖ್ಯಾ ವಾಕ್ಯವು ಪ್ರಾರಬ್ಧ-ಕರ್ಮ ಮೋಕ್ಷವನ್ನು ಹೇಳುತ್ತಿದೆ. ಅಥವಾ ಬ್ರಹ್ಮಪ್ರಾಪ್ತಿ ಮಾರ್ಗದಲ್ಲಿ ಮಧ್ಯದಲ್ಲಿ ಆದಿತ್ಯನನ್ನೂ ಹೊಂದುತ್ತಾನೆ ಎಂದು ಹೇಳುತ್ತಿದೆ. ಹೀಗೆ ಈ ಸಮಾಖ್ಯಾವು ಸಾವಕಾಶವಾಗಿದೆ. ಮತ್ತು ''ಪರಂಜ್ಯೋತಿಃ ಪರಂಬ್ರಹ್ಮ'' ಎಂಬ ಸ್ಮೃತಿಯಿಂದ ಪರಂಜ್ಯೋತಿ ಶಬ್ದವು ಪರಮಾತ್ಮ ಎಂಬರ್ಥದಲ್ಲೇ ಮುಖ್ಯ ಎಂದು ತಿಳಿಯುತ್ತಿದೆ. ಹಾಗಾಗಿ ಪರಂಜ್ಯೋತಿಃ ಶಬ್ದವಾಚ್ಯನಾದವನು ಬ್ರಹ್ಮನೇ.

**ಅಧಿಕರಣ ಫಲ :-** ಮುಕ್ತನು ಬ್ರಹ್ಮನ ಸಮೀಪದಲ್ಲೇ ಭೋಗವನ್ನು ಅನುಭವಿಸುತ್ತಾನೆ ಎಂದು ಹಿಂದೆ ಹೇಳಿದ್ದರ ಮೇಲಿನ ಆಕ್ಷೇಪ ಹಾಗೂ ಅದರ ಸಮಾಧಾನವೇ ಈ ಅಧಿಕರಣದ ಫಲ.

## || ಓಂ ಅವಿಭಾಗೇನ ದೃಷ್ಟತ್ವಾತ್ ಓಂ || ೪-೪-೪

ಹೀಗೆ ಮೂರು ಅಧಿಕರಣಗಳಲ್ಲಿ ಮುಕ್ತನು ಪರಬ್ರಹ್ಮನನ್ನು ಹೊಂದಿ ಭೋಗಗಳನ್ನು ಅನುಭವಿಸುತ್ತಾನೆ ಎಂದು ಸಾಧನೆ ಮಾಡಲಾಯಿತು. ಆ ಭೋಗವು ಯಾವ ಸ್ವರೂಪದ್ದಾಗಿರುತ್ತದೆ ಎಂಬ ವಿಶೇಷ ವಿಚಾರವನ್ನು ಇಲ್ಲಿ ಮಾಡುತ್ತಿರುವುದರಿಂದ ಸಂಗತಿಯಿದೆ. ಮುಕ್ತರಲ್ಲಿ ಸಾಯುಜ್ಯ ಮೋಕ್ಷವನ್ನು ಹೊಂದಿದವರು ಮುಖ್ಯರಾದ್ದರಿಂದ ಅವರ ಭೋಗದ ವಿಚಾರವನ್ನು ಈ ಅಧಿಕರಣದಲ್ಲಿ ಮಾಡಲಾಗುತ್ತಿದೆ. ಸಾಯುಜ್ಯಮೋಕ್ಷವನ್ನು ಹೊಂದಿದವರ ಭೋಗವು ಬಾಹ್ಯವಾದ ಅಂದರೆ ಭಗವಂತನು ಭೋಗಿಸದೇ ಇರುವುದರ ಭೋಗವೋ ಅಥವಾ ಭಗವಂತನಿಂದ ಭಕ್ತವಾದ ಭೋಗಶೇಷದ ಭೋಗವೋ? ಭಗವದ್ಭುಕ್ತಶೇಷದ ಭೋಗ ಎಂದರೆ ಮೋಕ್ಷವು ಪರಮಪುರುಷಾರ್ಥ ಎಂದಾಗುವುದಿಲ್ಲವೋ ಅಥವಾ ಆಗುತ್ತದೆಯೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ :-** ಮುಕ್ತಿಯು ಪರಮಪುರುಷಾರ್ಥವಾದ್ದರಿಂದ ಭಗವಂತ ಭೋಗಿಸದೇ ಇರುವುದರ ಭೋಗವೂ ಸುಲಭವೇ ಆದ್ದರಿಂದ ಭಗವಂತ ಭೋಗಿಸದೇ ಇರುವುದರ ಭೋಗವನ್ನು ಮುಕ್ತರು ಮಾಡುತ್ತಾರೆ ಎನ್ನಬೇಕು.

ಭಗವದ್ಭುಕ್ತ ಶೇಷವನ್ನೇ ಮುಕ್ತರು ಭೋಗಿಸುತ್ತಾರೆ ಎಂಬ ನಿಯಮವನ್ನು ಒಪ್ಪಿದರೆ ಆಗ ಕೆಲವು ಮುಕ್ತರಿಗೆ ಭೋಗೇಚ್ಛೆ ಉಂಟಾದರೂ ಭೋಗ-ವಿಲ್ಲದೇ ಹೋಗಬೇಕಾಗುತ್ತದೆ. ಏಕೆಂದರೆ, ಈಶ್ವರನು ನಿತ್ಯಪೂರ್ಣಾನಂದ-ನಾದ್ದರಿಂದ ಕೆಲವು ವೇಳೆ ಅವನು ಭೋಗವಿಲ್ಲದೇ ಇರಬಹುದು. ಆಗ ಭೋಗೇಚ್ಛೆಯುಳ್ಳ ಮುಕ್ತರಿಗೂ ಭೋಗವಿಲ್ಲ ಎಂದಾಗುತ್ತದೆ. ಹಾಗಾದರೆ ಮೋಕ್ಷವು ಪುರುಷಾರ್ಥೇ ಎಂದಾಗುವುದಿಲ್ಲ.

**ಸಿದ್ಧಾಂತ :-** ಮೋಕ್ಷವು ಪುರುಷಾರ್ಥವಾದ್ದರಿಂದ ಭಗವಂತ ಭೋಗಿಸದೇ ಇರುವ ಭೋಗವೂ ಸುಲಭವೇ ಆದರೂ ''ಯಾನೇ ವಾಹಂ ಶೃಣೋಮಿ'' ಎಂಬ ಶ್ರುತಿಯಲ್ಲಿ ಭಗವಂತನು ಭೋಗಿಸಿದ ಭೋಗಗಳನ್ನೇ ಮುಕ್ತರು ಭೋಗಿಸುತ್ತಾರೆ ಎಂದು ಹೇಳಿದ್ದರಿಂದ ಮುಕ್ತರಿಗೆ ಭಗವದ್ಭುಕ್ತಭೋಗ ಭೋಕ್ತೃತ್ವವನ್ನೇ ಒಪ್ಪಬೇಕು.

**ಪ್ರಶ್ನೆ :-** ''ಯಾನೇವಾಹಂ'' ಎಂಬ ಶ್ರುತಿಯಲ್ಲಿ ಭಗವದ್ಭುಕ್ತ ಅಶೇಷ-ಭೋಗಭೋಕ್ತೃತ್ವ ಹೇಳಲ್ಪಟ್ಟಿದೆ. ಅದನ್ನು ಒಪ್ಪಿದರೆ ಮುಕ್ತರಿಗೆ ಈಶ್ವರ ಸಾಮ್ಯ ಬರಬೇಕಾಗುತ್ತದೆ?

**ಉತ್ತರ :-** ''ಮುಕ್ತಾಃ ಪ್ರಾಪ್ಯ ಪರಂ ವಿಷ್ಣುಂ ತದ್ಭೋಗಾನ್ ಲೇಶತಃ ಕ್ವಚಿತ್'' ಎಂಬ ವಿಶೇಷಸ್ಮೃತಿಯಿರುವುದರಿಂದ ''ತಾನೇವ...'' ಎಂಬ ಸಾಮಾನ್ಯಶ್ರುತಿಗೆ ಅರ್ಥಸಂಕೋಚವನ್ನು ಮಾಡಬೇಕು.

ಭಗವದ್ಭುಕ್ತಶೇಷದ ಭೋಗವೇ ಎಂದರೆ ಆಗ ಕದಾಚಿತ್‌ಭೋಗವಿಲ್ಲದೇ ಹೋಗಿ ಮೋಕ್ಷವು ಪುರುಷಾರ್ಥವೇ ಆಗುವುದಿಲ್ಲ ಎಂಬ ಶಂಕೆ ಸರಿಯಲ್ಲ. ಏಕೆಂದರೆ, ''ಪೂರ್ಣಾನಂದಃ ಪೂರ್ಣಭುಕ್ ಪೂರ್ಣಕರ್ತಾ'' ಎಂಬ ಶ್ರುತಿ-ಯಲ್ಲಿ ಭಗವಂತನು ಪೂರ್ಣಾನಂದನಾದರೂ ಪೂರ್ಣಭೋಗನೂ ಆಗಿದ್ದಾನೆ ಎಂದು ಹೇಳಿದ್ದರಿಂದ ಅವನುಭೋಗಿಸದೇ ಇರುವ ಪ್ರಸಕ್ತಿಯೇ ಇಲ್ಲ.

**ಅಧಿಕರಣ ಫಲ :-** ''ಅತ್ತಾಚರಾಚರಗ್ರಹಣಾತ್'' ಎಂಬಲ್ಲಿ ಹೇಳಿದ ಪರಮಾತ್ಮನು ಸರ್ವಭೋಕ್ತಾ ಎಂಬುದರ ಆಕ್ಷೇಪ ಹಾಗು ಅದರ ಸಮಾಧಾನವೇ ಈ ಅಧಿಕರಣದ ಪೂರ್ವಪಕ್ಷ ಹಾಗು ಸಿದ್ಧಾಂತ ಫಲ.

## ॥ ಓಂ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ಓಂ ॥
### ೪-೪-೫

ಹಿಂದಿನ ಅಧಿಕರಣದ ಮೇಲಿನ ಆಕ್ಷೇಪದಿಂದ ಶಂಕಾ ಮಾಡುತ್ತಿರು-ವುದರಿಂದ ಇಲ್ಲಿ ಆಕ್ಷೇಪಿಕೀ ಎಂಬ ಸಂಗತಿಯಿದೆ.

ಪ್ರಕೃತವಾದ ಭೋಗವು ಮುಕ್ತರಿಗೆ ಕೊಡುತ್ತದೋ ಅಥವಾ ಇಲ್ಲವೋ? ಭೋಗಹೇತುವಾದ ಶರೀರ ಅವರಿಗೆ ಇಲ್ಲವೋ ಅಥವಾ ಇದೆಯೋ? ಭೌತಿಕ ದೇಹವಿಲ್ಲದೇ ಹೋದರೂ ಬೇರೆ ದೇಹದಿಂದ ಭೋಗ ಎಂಬುದು ಕೂಡುವುದಿಲ್ಲವೋ ಅಥವಾ ಕೂಡುತ್ತದೋ?

**ಪೂರ್ವಪಕ್ಷ** :- ಹಿಂದಿನ ಅದಿಕರಣಗಳಲ್ಲಿ ಹೇಳಿದ, ಮುಕ್ತರು ಭಗವಂತನನ್ನು ಅತಿಕ್ರಮಿಸದೇ ಭೋಗ ಮಾಡುತ್ತಾರೆ. ಮತ್ತು ಭಗವದ್ಭುಕ್ತ-ಶೇಷವನ್ನು ಭೋಗಿಸುತ್ತಾರೆ, ಎಂಬುದು ಯುಕ್ತವಲ್ಲ. ಏಕೆಂದರೆ, ಮುಕ್ತರು ಸಂಸಾರವನ್ನು ದಾಟಿದವರಾದ್ದರಿಂದ ಅವರಿಗೆ ಭೋಗಹೇತುವಾದ ಶರೀರ-ವಿರುವುದಿಲ್ಲ. ಮುಕ್ತರಿಗೂ ಶರೀರವಿರುತ್ತದೆ ಎಂದರೆ ಅವರು ಮುಕ್ತರೇ ಆಗಲು ಸಾಧ್ಯವಿಲ್ಲ. (ಸರ್ವದೇಹ ಪರಿತ್ಯಾಗ ನಂತರವೇ ಮೋಕ್ಷವಾಗುವುದು). ಬ್ರಹ್ಮನ ಶರೀರದಿಂದ ಮುಕ್ತರಿಗೆ ಭೋಗವನ್ನುಹೇಳುತ್ತೇವೆ ಎಂದರೆ ಅದೂ ಸರಿಯಲ್ಲ. ಏಕೆಂದರೆ, ಪ್ರಳಯಕಾಲದಲ್ಲಿ ಬ್ರಹ್ಮಶರೀರವಿದ್ದರೂ ಮುಕ್ತರಿಗೆ ಭೋಗವಿರುವುದಿಲ್ಲ. ಹಾಗಾಗಿ ಮುಕ್ತರಿಗೆ ಭೋಗವನ್ನು ಒಪ್ಪುವುದು ಸರಿಯಲ್ಲ.

**ಸಿದ್ಧಾಂತ** :- ಮುಕ್ತರಿಗೆ ಭೌತಿಕಾದಿ ಸರ್ವ ದೇಹಗಳು ಇಲ್ಲದೇ ಹೋದರೂ ''ಸ ವಾ ಏಷ ಬ್ರಹ್ಮನಿಷ್ಠಃ'' ''ಆದತ್ತೇ ಹರಿಹಸ್ತೇನ'' ಇತ್ಯಾದಿ ಭಾಷ್ಯದಲ್ಲಿ ಹೇಳಿದ ಶ್ರುತಿಸ್ಮೃತಿಗಳಿಂದ, ಪರಮಾತ್ಮನನ್ನು ಪ್ರವೇಶ ಮಾಡಿದ ಮುಕ್ತರು ಪರಮಾತ್ಮನ ದೇಹದಿಂದಲೇ, ದೇಹವುಳ್ಳವನು ಹೇಗೋ ಹಾಗೇ, ಭೋಗವನ್ನು ಅನುಭವಿಸುತ್ತಾರೆ ಎಂದು ತಿಳಿಯುತ್ತಿದೆ. ''ಗಚ್ಛಾಮಿ ವಿಷ್ಣುಪಾದಾಭ್ಯಾಂ'' ಎಂಬ ಸ್ಮೃತಿಯಲ್ಲಿ ಹೇಳಿದ ಪ್ರಕಾರ ವಿಷ್ಣುವಿನ ಅವಯವಗಳಿಂದಲೇ

ಗಮನಾದಿಗಳನ್ನು ಮಾಡುತ್ತೇನೆ ಎಂದು ಸಂಸಾರದಲ್ಲಿದ್ದಾಗ ಉಪಾಸನೆ ಮಾಡಿದ್ದರಿಂದ ಮುಕ್ತಿಯಲ್ಲಿ ವಿಷ್ಣುದೇಹ ಪ್ರಾಪ್ತಿಯಾಗುತ್ತದೆ, ಎಂಬ ಈ ಯುಕ್ತಿಯಿಂದ ಮುಕ್ತರು ಬ್ರಹ್ಮದೇಹದಿಂದಲೇ ಭೋಗ ಮಾಡುತ್ತಾರೆ. ಅಥವಾ ''ಸ ವಾ ಏತಸ್ಮಾತ್ ಮರ್ತ್ಯಾದ್ವಿಮುಕ್ತಶ್ಚಿನ್ಮಾತ್ರೀಭವತಿ'' ಇತ್ಯಾದಿ ಶ್ರುತಿಗಳಿಂದ, ಹಾಗು ''ಮರ್ತ್ಯದೇಹಂ ಪರಿತ್ಯಜ್ಯ'' ಇತ್ಯಾದಿ ಸ್ಮೃತಿ-ಗಳಿಂದಲೂ ಮುಕ್ತರು ಭಗವಂತನ ಅನುಗ್ರಹದಿಂದ, ಸ್ವರೂಪ ಭೂತವಾದ ಚಿನ್ಮಾತ್ರವಾದ ಶರೀರ ಅವಯವಗಳಿಂದ ಭೋಗ ಮಾಡುತ್ತಾರೆ ಕರ್ಮಗಳನ್ನು ಮಾಡುತ್ತಾರೆ ಎಂದು ಸಿದ್ಧವಾಗುತ್ತದೆ. ಹಾಗಾಗಿ ಮುಕ್ತರಿಗೆ ಭೋಗವಿದ್ದೇ ಇದೆ. ಅಧಿಕರಣ ಫಲ - ಮೋಕ್ಷದಲ್ಲಿ ಭೋಗವು ಕೂಡುವುದಿಲ್ಲವಾದ್ದರಿಂದ ಮೋಕ್ಷವು ಪುರುಷಾರ್ಥವೇ ಆಗುವುದಿಲ್ಲ ಎಂಬ ಆಕ್ಷೇಪ ಹಾಗು ಅದರ ಸಮಾಧಾನವೇ ಈ ಅಧಿಕರಣದ ಫಲ.

## ॥ ಓಂ ಸಂಕಲ್ಪಾದೇವ ಚ ತಚ್ಛ್ರುತೇಃ ಓಂ ॥ ೪-೪-೬

ಹಿಂದಿನ ಅಧಿಕರಣದಲ್ಲಿ, ಭೋಗಕ್ಕೆ ಲೌಕಿಕ ಉಪಕರಣ (ದೇಹಾದಿ)ಗಳು ಬೇಡ ಎಂದು ಹೇಳಲಾಗಿದೆ. ಈ ಅಧಿಕರಣದಲ್ಲಿ ಲೌಕಿಕ ಸಾಧನಗಳೂ ಬೇಡ ಎಂದು ಹೇಳುತ್ತಿದ್ದಾರೆ. ಹೀಗೆ ಈ ಅಧಿಕರಣಕ್ಕೆ ಆನಂತರ್ಯ ಎಂಬ ಸಂಗತಿಯಿದೆ. ಪ್ರಕೃತವಾದ ಮುಕ್ತರ ಭೋಗವು ತತ್ತದುಪಾಯ ಸಾಧ್ಯಸಾಧನ ಸಾಧ್ಯ-ವಾಗಿದೆಯೋ (ಅಗತ್ಯವಾದ ಉಪಾಯಗಳಿಂದ ಸಿದ್ಧವಾದ ಸಾಧನಗಳಿಂದ ಸಾಧ್ಯವಾಗಿದೆ ಲೌಕಿಕ ಭೋಗ ಅದರಂತೆ ಎಂದರ್ಥ.) ಅಥವಾ ಸಂಕಲ್ಪ ಮಾತ್ರದಿಂದ ಸಾಧ್ಯವಾಗಿದೆಯೋ? ಭಗವಂತನ ಮನೆಯಲ್ಲಿರುವಿಕೆ, ಎಂಬ ಯುಕ್ತಿಯು ಲೋಕಾನುಸಾರಿತ್ವದ ಸಹಾಯವುಳ್ಳದ್ದಾಗಿ ಮುಕ್ತರ ಭೋಗಕ್ಕೆ ಸಾಧನಸಾಧ್ಯತ್ವವನ್ನು ತಂದುಕೊಡುತ್ತದೆಯೋ ಅಥವಾ ಇಲ್ಲವೋ? ಭಗವಂತನ ಮನೆಯಲ್ಲಿ ಅನುಭವಿಸಲ್ಪಡುವ ಮುಕ್ತಭೋಗವು (ಪಕ್ಷ) ತತ್ತದುಪಾಯ ಸಾಧನಸಾಧ್ಯವಾಗಿದೆ (ಸಾಧ್ಯ), ಮನೆಯಲ್ಲಿ ಅನುಭವಿಸುವ ಭೋಗವಾದ್ದರಿಂದ (ಹೇತು) ಭೂಮಿಯೇ ಮೊದಲಾದ ಕಡೆ ಅನುಭವಿಸುವ ಭೋಗದಂತೆ (ದೃಷ್ಟಾಂತ), ಎಂಬುದೇ ಯುಕ್ತಿ. ಲೋಕದಲ್ಲಿ ಭೋಗವು

ತತ್ತದುಪಾಯಸಾಧ್ಯಸಾಧನ ಸಾಧ್ಯವಾಗಿಯೇ ಕಂಡಿರುವುದರಿಂದ ಲೋಕಾನುಸಾರವಾಗಿ ಮುಕ್ತರ ಭೋಗವೂ ಅದೇ ರೀತಿಯಾಗಿದೆ ಎಂದು ಒಪ್ಪಬೇಕು. (ಇಲ್ಲದೇ ಹೋದರೆ ಲೋಕವಿರೋಧ ಬರಬೇಕಾಗುತ್ತದೆ). ಹೀಗೆ ಅನುಕೂಲ-ತರ್ಕ ಸಹಿತವಾದ ಯುಕ್ತಿಯಿಂದ ಮುಕ್ತರ ಭೋಗವು ತತ್ತದುಪಾಯಸಾಧ್ಯ ಸಾಧನಸಾಧ್ಯ ಎಂದೇ ಸಿದ್ಧವಾಗುತ್ತದೆ.

**ಸಿದ್ಧಾಂತ** :- ''ಸ ಯದಿ ಪಿತೃಲೋಕ ಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ'' ಎಂಬಶ್ರುತಿಯಿರುವುದರಿಂದ, ಮುಕ್ತರ ಭೋಗವು ಸಂಕಲ್ಪ ಮಾತ್ರ ಸಾಧ್ಯವೇ ಹೊರತು ತತ್ತದುಪಾಯಸಾಧ್ಯಸಾಧನಸಾಧ್ಯವಲ್ಲ. ಹಿಂದೆ ಹೇಳಿದ ಯುಕ್ತಿಗೆ ಶ್ರುತಿಯ ಬಾಧಬರುವುದರಿಂದ ಅದು ಸಾಧ್ಯ-ಸಾಧಕವಾಗುವುದಿಲ್ಲ. ಲೋಕವಿರೋಧವು ದೋಷರಹಿತವಾದ ಭಗವಂತನ ಮನೆಯಲ್ಲಿ ಗುಣವೇ ಎಂದೆನಿಸಿಕೊಳ್ಳುತ್ತದೆ.

**ಅಧಿಕರಣ ಫಲ** :- ಮುಕ್ತರ ಭೋಗವೂ ಲೋಕದ ಭೋಗದಂತೆ ಎಂದಾದರೆ ಮೋಕ್ಷವು ಸಂಸಾರಸಮಾನಧರ್ಮವುಳ್ಳದ್ದು ಎಂದಾಗಿ ಪುರುಷಾರ್ಥವೇ ಅಲ್ಲ ಎಂದಾಗಬೇಕಾಗುತ್ತದೆ ಎಂಬ ಆಕ್ಷೇಪ ಹಾಗು ಅದರ ಸಮಾಧಾನವೇ ಈ ಅಧಿಕರಣ ಫಲ.

## ॥ ಓಂ ಅತ ಏವ ಚಾನನ್ಯಾಧಿಪತಿಃ ಓಂ ॥ ೪-೪-೭

ಹಿಂದೆ ಹೇಳಿದ ಹೇತುವನ್ನೇ ಇಲ್ಲಿ ಅತಿದೇಶ ಮಾಡುತ್ತಿರುವುದರಿಂದ ಅನಂತರ ಸಂಗತಿಯಿದೆ. ಪ್ರಕೃತನಾದ ಮುಕ್ತನು ತನಗೆ ಕ್ಲೃಪ್ತರಾದ ಪತಿಗಳನ್ನು ಬಿಟ್ಟು ಉಳಿದವರಿಂದಲೂ ನಿಯಮಿಸಲ್ಪಡುತ್ತಾನೋ ಅಥವಾ ಕ್ಲೃಪ್ತರಾದವ-ರಿಂದ ಮಾತ್ರ ನಿಯಮಿಸಲ್ಪಡುತ್ತಾನೋ? ಮುಕ್ತಿಯಲ್ಲಿ ಅನಪೇಕ್ಷಿತವಾದದ್ದೂ ನಡೆಯುತ್ತದೋ ಅಥವಾ ಇಲ್ಲವೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿದೆ.

**ಪೂರ್ವಪಕ್ಷ** :- ಲೋಕದಲ್ಲಿ ಹೇಗೆ ಅರಮನೆಯನ್ನು ಪ್ರವೇಶ ಮಾಡಿದವನು ತನಗೆ ಅನಪೇಕ್ಷಿತವಾದ ತನಗಿಂತ ಕೆಳಗಿನವರಾದ

ದ್ವಾರಪಾಲಕರೇ ಮೊದಲಾದವರಿಂದ ನಿಯಂತ್ರಿಸಲ್ಪಡುತ್ತಾನೆ ಹಾಗೇ ಮುಕ್ತನೂ ಪರಗೃಹದಲ್ಲಿರುವವನಾದ್ದರಿಂದ ಅವನೂ ಕೂಡ ತನಗಿಂತ ಕೆಳಗಿನವರಿಂದ ನಿಯಮಿಸಲ್ಪಡುತ್ತಾನೆ. ಹೀಗೆ ಒಪ್ಪದೇ ಹೋದರೆ ಲೋಕ-ವಿರೋಧ ಬರಬೇಕಾಗುತ್ತದೆ.

**ಸಿದ್ಧಾಂತ :-** ಲೋಕದಲ್ಲಿ ಸತ್ಯಸಂಕಲ್ಪತ್ವ ಇರುವುದಿಲ್ಲವಾದ್ದರಿಂದ, ತಮಗೆ ಅನಪೇಕ್ಷಿತವಾದ ಸ್ವಾವರನಿಯತತ್ವ ಉಂಟಾಗುತ್ತದೆ. ಆದರೆ ಮುಕ್ತನು ಸತ್ಯ ಸಂಕಲ್ಪನಾದ್ದರಿಂದ ಅವನಿಗೆ ಅನಪೇಕ್ಷಿತವಾದದ್ದು ನಡೆಯುವುದಿಲ್ಲ. ಸ್ವಾವರ-ನಿಯಮನವು ಅನಪೇಕ್ತಿವಾದ್ದರಿಂದ ಮುಕ್ತನಿಗೆ ಅದು ಇರುವುದಿಲ್ಲ. ಕ್ಲಪ್ತ-ಪತಿನಿಯತತ್ವವೇ ಇರುತ್ತದೆ. ''ಪರಮೋऽಧಿಪತಿಸ್ತೇಷಾಂ...'' ಎಂಬ ಸ್ಮೃತಿಯೂ ಇದನ್ನೇ ಪ್ರತಿಪಾದಿಸುತ್ತಿದೆ.

**ಅಧಿಕರಣ ಫಲ :-** ಸಂಸಾರದಲ್ಲಿರುವಂತೆ ಮುಕ್ತನಿಗೂ ಸ್ವಾವರ-ನಿಯತತ್ವ ಬಂದರೆ ಮೋಕ್ಷವೂ ಸಂಸಾರದಂತೆ ಎಂದಾಗಿ ಪುರುಷಾರ್ಥ ಎಂದಾಗದೇ ಹೋಗಬೇಕು ಎಂಬ ಆಕ್ಷೇಪ ಹಾಗು ಅದರ ಸಮಾಧಾನವೇ ಈ ಅಧಿಕರಣದ ಫಲ.

## ।। ಓಂ ಅಭಾವಂ ಬಾದರಿರಾಹ ಹ್ಯೇವಂ ಓಂ ।। ೪-೪-೮

''ಸಂಕಲ್ಪಾದೇವ...'' ಎಂಬಲ್ಲಿ ಹೇಳಿದ 'ಭೋಗವು ಸಂಕಲ್ಪಮಾತ್ರಾ-ಧೀನ'' ಎಂಬುದರ ಮೇಲಿನ ಆಕ್ಷೇಪದಿಂದ ಇಲ್ಲಿ ಪೂರ್ವಪಕ್ಷ ಪ್ರವೃತ್ತ-ವಾಗುತ್ತಿರುವುದರಿಂದ ಸಂಗತಿಯಿದೆ. ಹಾಗಾದರೆ, ಈ ಅಧಿಕರಣವನ್ನು ''ಸಂಕಲ್ಪಾದೇವ...'' ಎಂಬುದರ ನಂತರವೇ ಆರಂಭ ಮಾಡಬೇಕಿತ್ತು. ಮಧ್ಯದಲ್ಲಿ ''ಅತ ಏವ'' ಎಂದು ಹೇಳಿದ್ದು ಸರಿಯಲ್ಲ? ಎಂದರೆ, ಇಲ್ಲ ''ಅತ ಏವ'' ಎಂಬಲ್ಲಿ ಹಿಂದೆ ಹೇಳಿದ ಹೇತುವಿನದ್ದೇ ಅತಿದೇಶ ಮಾಡಿರು-ವುದರಿಂದ ಅದು ಪ್ರಾಸಂಗಿಕವಾಗಿ ಪ್ರಸ್ತುತವಾಗಿದೆ. ಪ್ರಾಸಂಗಿಕವಾದ ವಿಷಯವು ವ್ಯವಧಾಯಕವಾಗುವುದಿಲ್ಲ. ಹಾಗಾಗಿ ಯಾವುದೇ ದೋಷವಿಲ್ಲ. ಪ್ರಕೃತವಾದ ಮುಕ್ತರ ಭೋಗವು ಯುಕ್ತವಲ್ಲವೋ ಅಥವಾ ಯುಕ್ತವೇ ಆಗಿದೆಯೋ? ಮುಕ್ತರಿಗೆ ದೇಹವಿದೆ ಅಥವಾ ಇಲ್ಲ ಎಂಬ ಎರಡೂ ಪಕ್ಷದಲ್ಲಿ

ಭೋಗವನ್ನು ಕೂಡಿಸಲು ಸಾಧ್ಯವಿಲ್ಲವೋ ಅಥವಾ ಸಾಧ್ಯವಿದೆಯೋ? ಮುಕ್ತರಿಗೆ ದೇಹವಿದೆ, ಇಲ್ಲ ಎಂಬುದು ವಿರುದ್ಧವಾದ್ದರಿಂದ ಯುಕ್ತ-ವಲ್ಲವೋ ಅಥವಾ ಯುಕ್ತವೇ ಆಗಿದೆಯೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿದೆ.

**ಪೂರ್ವಪಕ್ಷ** :- ಮುಕ್ತರಿಗೆ ದೇಹವಿದೆ ಎಂದರೆ ದುಃಖಾದಿಗಳೂ ಇರಬೇಕಾದ್ದರಿಂದ ನಿರ್ದುಃಖಭೋಗ ಕೂಡುವುದಿಲ್ಲ. ದೇಹವಿಲ್ಲ ಎಂದರೆ ಭೋಗವೇ ಸಾಧ್ಯವಿಲ್ಲ.

''ಬ್ರಾಹ್ಮೇಣ ಜೈಮಿನಿಃ...'' ಎಂಬಲ್ಲಿ ಹೇಳಿದಂತೆ ಬ್ರಹ್ಮನ ದೇಹದಿಂದ ಭೋಗ ಕೂಡುತ್ತದೆ ಎನ್ನಬಾರದು. ಏಕೆಂದರೆ ಸಾಯುಜ್ಯ ಮೋಕ್ಷ ಹೊಂದಿದವರಿಗೆ ಅದು ಸಾಧ್ಯವಾದರೂ ಉಳಿದವರಿಗೆ ಸಾಧ್ಯವಿಲ್ಲ.

ಚಿತ್ ಶರೀರದಿಂದ ಉಳಿದವರು ಭೋಗಿಸುತ್ತಾರೆ ಎಂಬುದೂ ಸರಿಯಲ್ಲ. ಏಕೆಂದರೆ ಸುಪ್ತ್ಯವಸ್ಥೆಯಲ್ಲಿ ಚಿತ್ ಶರೀರವಿದ್ದರೂ ಅದು ಭೋಗಾಯ-ತನವಾಗಿಲ್ಲ. ಹೀಗಾಗಿ ದೇಹವಿದ್ದರೂ ಇಲ್ಲದಿದ್ದರೂ ಭೋಗವನ್ನು ಕೂಡಿಸುವುದು ಸಾಧ್ಯವಿಲ್ಲ. ಆದ್ದರಿಂದ ಮುಕ್ತಿಯಲ್ಲಿ ಭೋಗವೇ ಇಲ್ಲ ಎನ್ನಬೇಕು. ದೇಹವಿದೆ, ಇಲ್ಲ ಎಂಬ ಎರಡೂ ಪಕ್ಷವನ್ನು ಒಪ್ಪುತ್ತೇವೆ ಎಂದರೆ ಅದು ವಿರುದ್ಧ, ಹಾಗಾಗಿ ಯುಕ್ತವಲ್ಲ.

**ಸಿದ್ಧಾಂತ** :- ಮುಕ್ತರಿಗೆ ಭೋಗವಿದೆ ಎಂಬುದು ಯುಕ್ತವೇ ಆಗಿದೆ. ದೇಹವಿದೆ. ದೇಹವಿಲ್ಲ ಎಂಬ ಎರಡೂ ಪಕ್ಷದಲ್ಲಿ ಭೋಗವನ್ನು ಕೂಡಿಸಬಹುದು. ದೇಹವಿದೆ ಎಂಬ ಪಕ್ಷದಲ್ಲಿ, ಮುಕ್ತರ ದೇಹವು ಬಾಹ್ಯ-ದೇಹವಾದರೂ ಜಡವಾದರೂ ಅದು ಶುದ್ಧಸತ್ವಾತ್ಮಕ ತೇಜೋರೂಪ-ವಾದ್ದರಿಂದ ಅದು ದುಃಖಕ್ಕೆ ಕಾರಣವಾಗುವುದಿಲ್ಲ. ಸುಖಾನುಭವ-ಮಾತ್ರವಿರುತ್ತದೆ. ಹಾಗಾಗಿ ಭೋಗಕೂಡುತ್ತದೆ. ಹೇಗೆ ದೀಪವು ತೈಲವನ್ನು ಮಾತ್ರ ಹೀರಿಕೊಂಡು ಪ್ರಣತಿಯಲ್ಲಿರುವ ಕಸವನ್ನು ತ್ಯಾಗಮಾಡುತ್ತದೋ ಹಾಗೇ ಮುಕ್ತರ ಶರೀರವು ಕೇವಲ ಸುಖಸಾಧನವಾಗುತ್ತದೆ. ದುಃಖಾ-ಪಾದಕವಾಗುವುದಿಲ್ಲ.

''ತೀರ್ಣೋ ಹಿ ತದಾ ಸರ್ವಾನ್ ಶೋಕಾನ್'' ಎಂಬ ಶ್ರುತಿಯಲ್ಲಿ ಮುಕ್ತರಿಗೆ ದುಃಖವಿರುವುದಿಲ್ಲ ಎಂದು ಹೇಳಿದ್ದರಿಂದ ಅವರಿಗೆ ಶರೀರ ಒಪ್ಪಿದರೂ ದುಃಖವಿದೆ ಎಂದು ಒಪ್ಪಬಾರದು.

ದೇಹವಿಲ್ಲ ಎಂಬ ಪಕ್ಷದಲ್ಲೂ ಭೋಗ ಕೂಡುತ್ತದೆ. ಹೇಗೆಂದರೆ, ಸ್ವಪ್ನಾವಸ್ಥೆಯಲ್ಲಿ ಬಾಹ್ಯ ದೇಹಾಭಿಮಾನವಿಲ್ಲದೇ ಹೋದರೂ ಜೀವನು ಭೋಗವನ್ನು ಅನುಭವಿಸುತ್ತಾನೆ. ಅದೇ ರೀತಿ ಮುಕ್ತನೂ ಕೂಡ ಬಾಹ್ಯ-ದೇಹವಿಲ್ಲದೇ ಹೋದರೂ ಚಿತ್ ಶರೀರದಿಂದಲೇ ಭೋಗವನ್ನು ಅನುಭವಿಸುತ್ತಾನೆ. ಸ್ವಪ್ನಾವಸ್ಥೆಯಲ್ಲಿ ದೇಹವಿದೆಯಲ್ಲಾ ? ಎಂದರೆ ದೇಹ-ವಿದ್ದರೂ ದೇಹಾಭಿಮಾನವಿರುವುದಿಲ್ಲವಾದ್ದರಿಂದ ಅದು ಇಲ್ಲದಂತೆಯೇ. ಸುಪ್ತಿಕಾಲದಲ್ಲಿ ಏಕೆ ಭೋಗವಿಲ್ಲ ಎಂದರೆ ಆಗ ಮನಸ್ಸು ಉಪರತವಾಗಿರುತ್ತದೆ. ಹಾಗಾಗಿ ಭೋಗವಿಲ್ಲ.

ದೇಹಭಾವ - ಅಭಾವ ಪಕ್ಷಗಳು ''ಚಿತಾ ವಾ ಅಚಿತಾ ವಾ'' ''ಅಶರೀರೋ ವಾ ವ ತದಾ ಭವತಿ'' ಎಂಬ ಶ್ರುತಿಗಳಿಂದ ಸಿದ್ಧವಾಗಿದೆ. ದೇಹಭಾವ - ಅಭಾವ ಎರಡೂ ವಿರುದ್ಧವಲ್ಲವೇ ಎಂದರೆ, ಇಲ್ಲ. ಹೇಗೆ ''ದ್ವಾದಶಾಹ'' ಎಂಬ ಯಾಗವು ಯಜಮಾನನ ಇಚ್ಛೆಯಂತೆ ಏಕಕರ್ತೃಕವಾದಾಗ 'ಅಹೀನ' ಎಂದಾಗುತ್ತದೆ. ಅನೇಕ ಕರ್ತೃಕವಾದಾಗ 'ಸತ್ರ' ಎಂದಾಗುತ್ತದೆ. ಅದೇ ರೀತಿ ಮುಕ್ತನ ಇಚ್ಛೆಯನ್ನು ಅವಲಂಬಿಸಿ ಅವನಿಗೆ ತೇಜೋರೂಪವಾದ ಬಾಹ್ಯಶರೀರ ಬರುತ್ತದೆ. ಇಲ್ಲದೇ ಹೋದರೆ ಇಲ್ಲ. ಆದ್ದರಿಂದ ಯಾವುದೇ ವಿರೋಧವಿಲ್ಲ. ''ಸ್ವೇಚ್ಛಯಾ ವಾ ಶರೀರಾಣಿ ತೇಜೋರೂಪಾಣಿ ಕಾನಿಚಿತ್. ಸ್ವೀಕೃತ್ಯ ಜಾಗರಿತವದ್ಭುಕ್ತ್ವಾ ತ್ಯಾಗಃ ಕದಾಚನ'' ಎಂಬ ಸ್ಮೃತಿಯೂ ಈ ವಿಷಯದಲ್ಲಿ ಪ್ರಮಾಣವಾಗಿದೆ.

**ಅಧಿಕರಣ ಫಲ** :- ಮೋಕ್ಷವು ದುಃಖರಹಿತ ಭೋಗವುಳ್ಳದ್ದು ಎಂಬುದರ ಆಕ್ಷೇಪ ಹಾಗೂ ಸಮಾಧಾನವೇ ಈ ಅಧಿಕರಣದ ಫಲ.

## ॥ ಓಂ ಜಗದ್ವ್ಯಾಪಾರವರ್ಜಮ್ ಓಂ ॥ ೪-೪-೯

ಹೀಗೆ ಅನುಪಪತ್ತಿಗಳನೆಲ್ಲಾ ಪರಿಹಾರ ಮಾಡಿ ಮುಕ್ತರಿಗೆ ಭೋಗವಿದೆ ಎಂದು ಇಲ್ಲಿಯವರೆಗೆ ಸಾಧನೆ ಮಾಡಲಾಗಿದೆ. ಈಗ ಮುಕ್ತರ ಭೋಗದ 'ಮಿತಿ' ಎಷ್ಟು ಎಂದು ಹೇಳುತ್ತಿದ್ದಾರೆ. ಹೀಗೆ ಈ ಅಧಿಕರಣಕ್ಕೆ ಹಿಂದಿನಿಂದ ಸಂಗತಿಯಿದೆ.

ಮುಕ್ತರು ಜಗತ್ ವ್ಯಾಪಾರವನ್ನು ಮಾಡುತ್ತಾರೋ ಇಲ್ಲವೋ? ''ಸರ್ವಾನ್ ಕಾಮಾನಾಪ್ತ್ವಾ'' ಎಂಬ ಶ್ರುತಿಯಲ್ಲಿರುವ ಸರ್ವ ಶಬ್ದಕ್ಕೆ ಅರ್ಥ ಸಂಕೋಚ ಮಾಡಬಾರದೋ ಅಥವಾ ಮಾಡಬೇಕೋ? ''ಸರ್ವೇಸ್ಮೈ ದೇವಾ ಬಲಿಮಾವಹಂತಿ ಎಂದು ಸರ್ವದೇವಪೂಜ್ಯತ್ವವನ್ನು ಹೇಳುವ ಶ್ರುತಿಯು ಸರ್ವಜೀವ ವಿಷಯವೋ ಅಥವಾ ವಿರಿಂಚಿವಿಷಯವೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ** :- ಮುಕ್ತರು ಜಗದ್ವ್ಯಾಪಾರವನ್ನು ಮಾಡುತ್ತಾರೆ. ಹೇಗೆಂದರೆ,

''ಸರ್ವೇಸ್ಮೈ'' ಎಂಬ ಶ್ರುತಿಯು ಸರ್ವ ಜೀವವಿಷಯವೇ ಆಗಿದೆ.

''ಸರ್ವಾನ್ ಕಾಮಾನ್'' ಎಂಬ ಶ್ರುತಿಯು ''ಶರೀರಭೇದಾದೂರ್ಧ್ವಂ ಉತ್ಕ್ರಮ್ಯ'' ಎಂಬುದರಿಂದ ಜೀವಪ್ರಕರಣದಲ್ಲಿರುವುದು ಎಂದಾದರೂ ಪ್ರಕರಣವು ಸರ್ವಶಬ್ದಸಂಕೋಚಕ್ಕೆ ಕಾರಣ ಎನ್ನಬಾರದು. ಏಕೆಂದರೆ ಬದ್ಧ-ನಾದ ಜೀವನಿಗೆ ಜಗದ್ವ್ಯಾಪಾರವಿಲ್ಲದೇ ಹೋದರೂ ಮುಕ್ತರಾದ ಜೀವರಿಗೆ ಆ ಶಕ್ತಿಕಲ್ಪನೆ ಮಾಡಿದರೆ ತಪ್ಪಿಲ್ಲ. ಅಥವಾ ಶಕ್ತಿಯಿಲ್ಲದೇ ಹೋದರೂ ಮುಕ್ತರು ಸತ್ಯಕಾಮರಾದ್ದರಿಂದ ಅದರಿಂದಲೇ ಅವರಿಗೆ ಸಮಸ್ತ ಐಶ್ವರ್ಯಗಳೂ ಪ್ರಾಪ್ತವಾಗುತ್ತದೆ. ಹಾಗಾಗಿ ಸರ್ವಶಬ್ದಕ್ಕೆ ಅರ್ಥಸಂಕೋಚ ಮಾಡಬಾರದು.

ಹೀಗಾಗಿ ಮುಕ್ತರು ಜಗತ್ಸೃಷ್ಟ್ಯಾದಿ ವ್ಯಾಪಾರಗಳನ್ನು ಮಾಡುತ್ತಾರೆ ಎಂದು ಸಿದ್ಧವಾಯಿತು.

**ಸಿದ್ಧಾಂತ** :- ''ಮಾಹಾಚಮಸ್ಯ'' ಎಂದು ಆರಂಭವಾಗುವುದರಿಂದ ''ಸರ್ವೇಸ್ಮೈ ...'' ಎಂಬ ಶ್ರುತಿಯು ಮುಕ್ತ ವಿರಿಂಚಪರ ಎಂದು ತಿಳಿಯುತ್ತಿದೆ. ಹಾಗಾಗಿ ಈ ಶ್ರುತಿಯು ಸರ್ವಮುಕ್ತವಿಷಯ ಎಂದು ಹೇಳಿದ್ದು ಸರಿಯಲ್ಲ.

ಜೀವರಿಗೆ ಸೃಷ್ಟ್ಯಾದಿಗಳನ್ನು ಮಾಡುವಶಕ್ತಿಯಿದೆ ಎಂದು ಹೇಳಲು ಯಾವುದೇ ಕಲ್ಪಕವಿಲ್ಲ. ಜಗತ್‌ಸೃಷ್ಟ್ಯಾದಿ ಸಾಮರ್ಥ್ಯವೂ ಅವರಲ್ಲಿಲ್ಲ. ಸತ್ಯಕಾಮತ್ವವೇ ಕಲ್ಪಕವಾಗಿದೆ ಎಂದರೆ, ಇಲ್ಲ ''ಸ್ವಾಧಿಕಾನಂದಸಂಪ್ರಾಪ್ತೌ ಸೃಷ್ಟ್ಯಾದಿವ್ಯಾಪೃತಿಷ್ವಪಿ. ಮುಕ್ತಾನಾಂ ನೈವ ಕಾಮಃ ಸ್ಯಾತ್'' ಎಂಬ ಸ್ಮೃತಿಯಲ್ಲಿ ಮುಕ್ತರಿಗೆ ಸೃಷ್ಟ್ಯಾದಿ ವ್ಯಾಪಾರದಲ್ಲಿ ಕಾಮವೇ ಇರುವುದಿಲ್ಲ. ಎಂದು ಹೇಳಿದ್ದರಿಂದ ಸೃಷ್ಟ್ಯಾದಿಗಳನ್ನು ಬಿಟ್ಟು ಉಳಿದ ಸ್ವಯೋಗ್ಯ ವಿಷಯಗಳಲ್ಲಿ ಸತ್ಯಕಾಮತ್ವ ಎಂದು ಹೇಳಬೇಕು.

ಆದ್ದರಿಂದ ಜಗದ್ವ್ಯಾಪಾರವನ್ನು ಬಿಟ್ಟು ಅನ್ಯಕಾಮನೆಗಳನ್ನು ಮುಕ್ತನು ಭೋಗಿಸುತ್ತಾನೆ ಎಂದು ಸಿದ್ಧವಾಯಿತು. ಮುಕ್ತ ವಿರಿಂಚನಿಗೆ ಅಶೇಷಮುಕ್ತ ನಿಯಮನ ವ್ಯಾಪಾರ ಹಾಗು ಅನ್ಯದೇವತೆಗಳಿಗೆ ಸ್ವಾವರಮುಕ್ತನಿಯಮನ ವ್ಯಾಪಾರವಿದೆ ಎಂದು ತಿಳಿಯಬೇಕು.

**ಅಧಿಕರಣ ಫಲ** :- ''ಜನ್ಮಾದ್ಯಸ್ಯ ಯತಃ'' ಎಂಬ ಸೂತ್ರದಲ್ಲಿ ಜಗತ್ ಸೃಷ್ಟ್ಯಾದಿಕರ್ತೃತ್ವವು ಬ್ರಹ್ಮನ ಲಕ್ಷಣ ಎಂದು ಹೇಳಲಾಗಿದೆ. ಮುಕ್ತರೂ ಸೃಷ್ಟ್ಯಾದಿಗಳನ್ನು ಮಾಡುತ್ತಾರೆ ಎಂದರೆ ಬ್ರಹ್ಮ ಲಕ್ಷಣಕ್ಕೆ ಅತಿವ್ಯಾಪ್ತಿ ಬರುತ್ತದೆ, ಎಂಬ ಆಕ್ಷೇಪ ಹಾಗು ಅದರ ಸಮಾಧಾನವೇ ಈ ಅಧಿಕರಣದ ಫಲ.

## ॥ ಓಂ ಸ್ಥಿತಿಮಾಹ ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ಓಂ ॥ ೪-೪-೧೦

ಹಿಂದಿನ ಅಧಿಕರಣದಲ್ಲಿ ಕಾಮಪದೋಕ್ತವಾದ ವಿಷಯಭೋಗದ ಮಿತಿಯು ಹೇಳಲ್ಪಟ್ಟಿದೆ. ಈ ಅಧಿಕರಣದಲ್ಲಿ ಭೋಗದಿಂದ ಅಭಿವ್ಯಂಗ್ಯವಾದ (ಅಭಿವ್ಯಕ್ತಿಗೊಳ್ಳುವ) ಸ್ವರೂಪಸುಖದ ಮಿತಿಯು ಹೇಳಲ್ಪಡುತ್ತದೆ. ಸ್ವರೂಪ ಸುಖದ ಮಿತಿ ಎಂದರೆ ಯಥಾಸ್ಥಿತಿ. ಹೀಗೆ ಈ ಅಧಿಕರಣಕ್ಕೆ ಹಿಂದಿನಿಂದ ಸಂಗತಿಯಿದೆ. ಮುಕ್ತನು ಆನಂದದ ವೃದ್ಧಿಹ್ರಾಸವುಳ್ಳವನೋ ಅಥವಾ ಯಥಾಸ್ಥಿತಿವುಳ್ಳವನೋ? ಮುಕ್ತರು ಮಾಡುವ ಉಪಾಸನಾದಿಗಳು ಆನಂದದ ವೃದ್ಧಿಹ್ರಾಸಕ್ಕೆ ಕಾರಣವಾಗುತ್ತದೋ ಅಥವಾ ಇಲ್ಲವೋ? ಹೀಗೆ ಪರಸ್ಪರ ಸಂಗತವಾದ ವಿಚಾರಗಳು ಬಂದಿವೆ.

**ಪೂರ್ವಪಕ್ಷ** :- ''ಏತತ್ಸಾಮ ಗಾಯನ್ನಾಸ್ತೇ'' ಇತ್ಯಾದಿ ಶ್ರುತಿಗಳಲ್ಲಿ ಮುಕ್ತರೂ ಉಪಾಸನೆ ಮಾಡುತ್ತಾರೆಂದು ಹೇಳಿದೆ. ಅವರ ಉಪಾಸನೆಯು ವ್ಯರ್ಥವಾಗಲು ಸಾಧ್ಯವಿಲ್ಲ. ಈ ಅನ್ಯಥಾನುಪಪತ್ತಿಯಿಂದಲೇ ಉಪಾಸನೆಯು ಸಫಲ ಎಂದು ಸಿದ್ಧವಾಗುತ್ತದೆ. ಮುಕರಿಗೆ ವಶಿತ್ವ ಎಂಬ ಐಶ್ವರ್ಯವಿರುವುದರಿಂದ ಅವರ ಅಶೇಷ ಕಾಮನೆಗಳೂ ಪೂರ್ಣವಾಗುತ್ತದೆ. (ಆನಂದವೃದ್ಧಿಯನ್ನು ಅಪೇಕ್ಷಿಸಿದರೆ ಅದೂ ಪೂರ್ಣವಾಗಬೇಕು) ಮೋಕ್ಷದಲ್ಲಿ ಭೋಗವಿಶೇಷಗಳೂ ಇರುವುದರಿಂದ ಮುಕ್ತರ ಆನಂದಕ್ಕೆ ವೃದ್ಧಿ ಇದೆ. ಉಪಾಸನಾದಿಗಳ ಉಪರಮವಾದಾಗ ಹ್ರಾಸವೂ ಇದೆ.

**ಸಿದ್ಧಾಂತ** :- ಮುಕ್ತಾನಂದವು ಒಂದೇ ರೀತಿಯಾಗಿರುತ್ತದೆ. ಏಕೆಂದರೆ, ''ಸ ಏಷ...'' ಎಂಬ ಭಾಷ್ಯೋಕ್ತ ಶ್ರುತಿಯಲ್ಲಿ ವೃದ್ಧ್ಯಾದಿಗಳು ಇರುವುದಿಲ್ಲ ಎಂದು ಹೇಳಿದೆ. ''ದರ್ಶನ್ನೇವಾತ್ಮಾನಂ'' ಎಂದು ಉಪಾಸನಾದಿಗಳನ್ನು ಮಾಡಿದರೂ ಆಪತ್ತಿ, ವಿಪತ್ತಿ ಎಂಬ ವೃದ್ಧಿಹ್ರಾಸಗಳು ಇರುವುದಿಲ್ಲ ಎಂದು ನಿಷೇಧ ಮಾಡಲಾಗಿದೆ. ಜೊತೆಗೆ, ಮುಕ್ತಾನಂದಕ್ಕೆ ವೃದ್ಧಿಹ್ರಾಸಗಳಿಲ್ಲ ಎಂಬುದಕ್ಕೆ ಮಹಾತ್ಮರ ಪ್ರತ್ಯಕ್ಷವೂ ಪ್ರಮಾಣವಾಗಿದೆ. ಇನ್ನು, ಮುಕ್ತನು (ಪಕ್ಷ) ಆನಂದ ವೃದ್ಧ್ಯಾದಿಗಳಳ್ಳುವನಲ್ಲ (ಸಾಧ್ಯ) ವೃದ್ಧ್ಯಾದಿಗಳಿಗೆ ಕಾರಣ-ವಿಲ್ಲವಾದ್ದರಿಂದ (ಹೇತು) ಎಂಬ ಅನುಮಾನದಿಂದಲೂ ವೃದ್ಧ್ಯಾದಿಗಳಿಲ್ಲ ಎಂದು ಸಿದ್ಧವಾಗುತ್ತದೆ.

ಉಪಾಸನೆಯು ವ್ಯರ್ಥವಾಗುತ್ತದೆಯಲ್ಲಾ ? ಎಂದರೆ ಇಲ್ಲ. ''ಹರೇರು-ಪಾಸನಾ ಚಾತ್ರ ಸದೈವ ಸುಖರೂಪಿಣೀ'' ಎಂಬ ಸ್ಮೃತಿಯಲ್ಲಿ ಹೇಳಿದಂತೆ ಉಪಾಸನೆಯು ಸ್ವಯಂ ಫಲಸ್ವರೂಪವಾದ್ದರಿಂದ ಅದಕ್ಕೆ ಇನ್ನೊಂದು ಫಲ-ವನ್ನು ಹೇಳಬೇಕಾಗಿಲ್ಲ. ಮುಕ್ತನಿಗೆ ವಶಿತ್ವವಿದ್ದರೂ ಅವನಿಗೆ ಅಯೋಗ್ಯ ವಿಷಯದಲ್ಲಿ ಕಾಮನಾ ಇರುವುದಿಲ್ಲ. ಯೋಗ್ಯ ವಿಷಯಕಾಮನೆಗಳೆಲ್ಲಾ ಲಭಿಸುತ್ತವೆ. ಹಾಗಾಗಿ ಮುಕ್ತನ ಸತ್ಯಕಾಮತ್ವಕ್ಕೆ ಭಂಗವಿಲ್ಲ. ಮೋಕ್ಷದಲ್ಲಿ ಭೋಗವಿಶೇಷಗಳಿದ್ದರೂ ಅದನ್ನು ಅನುಭವಿಸುವುದರಿಂದ ಆನಂದವೃದ್ಧಿ-ಯಾಗಲೀ ಉಪರಮದಿಂದ ಆನಂದಹ್ರಾಸವಾಗಲೀ ಆಗುವುದಿಲ್ಲ. ಹಾಗಾದರೆ ಆ ಭೋಗವಿಶೇಷಗಳ ಪ್ರಯೋಜನವೇನು? ಎಂದರೆ, ಮುಕ್ತರು ಕೇವಲ ಕ್ರೀಡೆಗಾಗಿ ಭೋಗ ವಿಶೇಷಗಳನ್ನು ಹೊಂದುತ್ತಾರೆ. ಅಥವಾ ''ಅವೃದ್ಧಿಹ್ರಾಸ

ರೂಪತ್ವಂ ಮುಕ್ತಾನಾಂ ಪ್ರಾಯಿಕಂ ಭವೇತ್. ಕಾದಾಚಿತ್ಕವಿಶೇಷಸ್ತು ನೈವ ತೇಷಾಂ ನಿಷಿಧ್ಯತೇ'' ಎಂಬಲ್ಲಿ ಹೇಳಿದಂತೆ ಭೋಗವಿಶೇಷಗಳಿಂದ ಸ್ವರೂಪ-ಸುಖದಲ್ಲೇ ಒಂದು ವೈಚಿತ್ರ್ಯ ಉಂಟಾಗುತ್ತದೆ ಎಂದು ತಿಳಿಯಬೇಕು.

**ಅಧಿಕರಣ ಫಲ** :- ಮುಕ್ತನ ಆನಂದದಲ್ಲೂ ವೃದ್ಧಿಹ್ರಾಸಗಳಿವೆ ಎಂದರೆ ಆಗ ಮೋಕ್ಷವು ಸಂಸಾರದಂತೆ ಎಂದಾಗಿ ಪುರುಷಾರ್ಥವೇ ಅಲ್ಲ ಎಂದಾಗಬೇಕಾ-ಗುತ್ತದೆ ಎಂಬ ಆಕ್ಷೇಪ ಹಾಗು ಅದರ ಸಮಾಧಾನವೇ ಈ ಅಧಿಕರಣದ ಫಲ.

## ॥ ಓಂ ಅನಾವೃತ್ತಿಶ್ಶಬ್ದಾತ್ ಅನಾವೃತ್ತಿಶ್ಶಬ್ದಾತ್ ಓಂ ॥
## ೪-೪-೧೧

ಹಿಂದೆ ಮುಕ್ತನ ಆನಂದದಲ್ಲಿ ವೃದ್ಧಿಹ್ರಾಸಗಳಿರುವುದಿಲ್ಲ ಎಂದು ಹೇಳಲಾಗಿದೆ. ಈ ಅದಿಕರಣದಲ್ಲಿ ಮುಕ್ತನ ಆನಂದಾನುಭವಕ್ಕೆ ಕೊನೆಯಿಲ್ಲ ಎಂದು ಹೇಳಲಾಗುತ್ತದೆ. ಹೀಗೆ ಈ ಅಧಿಕರಣಕ್ಕೆ ಹಿಂದಿನಿಂದ ಸಂಗತಿಯಿದೆ. ಪ್ರಕೃತನಾದ ಮುಕ್ತನು ಜನ್ಮಮರಣಗಳನ್ನು ಹೊಂದುವಿಕೆ ಎಂಬ ಪುನರಾ-ವೃತ್ತಿವುಳ್ಳವನೋ ಅಥವಾ ಇಲ್ಲವೋ? ಮುಕ್ತನ ಸಮಸ್ತಕಾಲವಾಸಿತ್ವವು ಪುನರಾವೃತ್ತಿಗೆ ಬಾಧಕವಾಗುವುದಿಲ್ಲವೋ ಅಥವಾ ಬಾಧಕವಾಗುತ್ತದೋ? ಸಮಸ್ತ ಕಾಲಕ್ಕೂ ಸಮಾಪ್ತಿ ಇದೆಯೋ ಅಥವಾ ಇಲ್ಲವೋ?

**ಪೂರ್ವಪಕ್ಷ** :- ಸ್ವರ್ಗದಲ್ಲಿರುವವರಂತೆ ಮುಕ್ತರಿಗೂ ಪುನರಾವೃತ್ತಿ ಇದೆ. ಮುಕ್ತನ ಸಮಸ್ತ ಕಾಲವಾಸಿತ್ವ ಎಂಬುದು ಬಾಧಕವಲ್ಲ. ಏಕೆಂದರೆ ಸಮಸ್ತ ಕಾಲವೂ ಒಂದು ಕಾಲದಲ್ಲಿ ಸಮಾಪ್ತವಾಗುತ್ತದೆ. ಕಾಲವು ಅನಂತವಾದ್ದರಿಂದ ಅದರ ಸಮಾಪ್ತಿ ಅಸಂಭಾವಿತ ಎಂದರೆ ಇಲ್ಲ. ಹೇಗೆ ಮಹಾಭಾರತ ಯುದ್ಧದಲ್ಲಿ ''ಚತುರ್ದಶೀಂ ಪಂಚದಶೀಂ ಭೂತಪೂರ್ವಾಂ ತು ಷೋಡಶೀಂ। - ಇಮಾಂ ತು ನಾಭಿಜಾನಾಮಿ ಅಮಾವಾಸ್ಯಾಂ ತ್ರಯೋದಶೀಂ'' (ಒಂದು ಪಕ್ಷದಲ್ಲಿ ಒಂದು ದಿನ ಕಡಿಮೆಯಾಗಿ ಹದಿನಾಲ್ಕನೇ ದಿನವೇ ಅಮಾವಾಸ್ಯಾ ಆದದ್ದು ಕಂಡಿದೆ. ಅದೇ ರೀತಿ ಒಂದು ದಿನ ಹೆಚ್ಚಾಗಿ ಹದಿನಾರನೇ ದಿನ ಅಮಾವಾಸ್ಯಾ ಆದದ್ದೂ ಕಂಡಿದೆ. ಆದರೆ ಹದಿಮೂರನೇ ದಿನವೇ ಅಮಾವಾಸ್ಯಾ ಆದದ್ದು ಇದುವರೆಗೂ ಕಂಡಿಲ್ಲ) ಎಂದು ಹದಿಮೂರನೇ

ದಿವಸವೇ ಹದಿನೈದನೇ ದಿವಸವಾದದ್ದು ಅಸಂಭಾವಿತವಾದರೂ ಸಂಭವಿಸಿದ್ದು ಕಂಡಿದೆ. ಅದರಂತೆ ಸಮಸ್ತ ಕಾಲ ಸಮಾಪ್ತಿಯೂ ಸಂಭಾವಿತ ಎಂದು ಹೇಳ-ಬಹುದು.

**ಸಿದ್ಧಾಂತ :-** ಮುಕ್ತನಿಗೆ ಪುನರಾವೃತ್ತಿ ಇಲ್ಲ. ಹೇಗೆಂದರೆ, ಸಮಸ್ತ ಕಾಲ ಸಮಾಪ್ತಿ ಎಂಬುದು ವ್ಯಾಹತವಾದ್ದರಿಂದ ಉಪೇಕ್ಷಣೀಯ. ಸ್ವರ್ಗವಾಸಿಗಳು ಮನ್ವಂತರಾದಿಕಾಲ ಮಾತ್ರ ಸ್ವರ್ಗದಲ್ಲಿ ಇರುವುದರಿಂದ ಅವರಿಗೆ ಪುನರಾವೃತ್ತಿ ಇದ್ದರೂ ಮುಕ್ತರು ಅನಂತಕಾಲವಾಸಿಗಳಾದ್ದರಿಂದ ಅವರಿಗೆ ಪುನರಾವೃತ್ತಿ ಇರುವುದಿಲ್ಲ. ''ನ ಚ ಪುನರಾವರ್ತತೇ'' ಎಂಬ ಶ್ರುತಿಯೂ ಮುಕ್ತರಿಗೆ ಪುನರಾವೃತ್ತಿ ಇಲ್ಲ ಎಂದು ಹೇಳುತ್ತಿದೆ. ''ಸರ್ವಾನ್ ಕಾಮಾನಾಪ್ನೋತಿ'' ಎಂಬಲ್ಲಿ ಮುಕ್ತರ ಸರ್ವಕಾಮನೆಗಳೂ ಪೂರ್ಣವಾಗುತ್ತದೆ ಎಂದು ಹೇಳಿದ್ದರಿಂದ ಅಪುನರಾವೃತ್ತಿಯೂ ಅವರಿಗೆ ಇಷ್ಟವೇ ಆದ್ದರಿಂದ ಮುಕ್ತರಿಗೆ ಪುನರಾವೃತ್ತಿ ಇಲ್ಲ. ಅವರು ನಿತ್ಯ ನಿರ್ದುಃಖ ಆನಂದಾನುಭವವುಳ್ಳವರೇ ಆಗಿರುತ್ತಾರೆ.

**ಅಧಿಕರಣ ಫಲ :-** ಮುಕ್ತಿ ಪಡೆದ ಮೇಲೂ ಪುನರಾವೃತ್ತಿ ಇದೆ ಎಂದರೆ ಅದು ಪುರುಷಾರ್ಥವೇ ಆಗುವುದಿಲ್ಲ ಎಂಬ ಆಕ್ಷೇಪ ಹಾಗು ಅದರ ಸಮಾಧಾನವೇ ಈ ಅಧಿಕರಣದ ಫಲ.

**ಕಲ್ಯಾಣಗುಣಪೂರ್ಣಾಯ ದೋಷದೂರಾಯ ವಿಷ್ಣವೇ**
**ನಮಃ ಶ್ರೀ ಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ.**

(ಕಲ್ಯಾಣಗುಣ ಪೂರ್ಣನಾದ ದೋಷದೂರನಾದ ಲಕ್ಷ್ಮೀಪ್ರಾಣರಿಗೆ ಒಡೆಯನಾದ ಭಕ್ತರ ಅಭೀಷ್ಟವನ್ನು ಪೂರೈಸುವ ವಿಷ್ಣುವಿಗೆ ನಮಸ್ಕಾರಗಳು)

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ**
**ಗ್ರಂಥದ ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಪಾದವು ಸಮಾಪ್ತವಾಯಿತು.**

**॥ ಶ್ರೀಕೃಷ್ಣಾರ್ಪಣಮಸ್ತು ॥**



ಅನುವಾದಕರು:

ಶ್ರೀ ಶ್ರೀ ಶ್ರೀ

1008 ಶ್ರೀ ಸುವಿದ್ಯೇಂದ್ರ ತೀರ್ಥ

ಶ್ರೀ ಪಾದಂಗಳವರು

ಶ್ರೀಮನ್ ಮೂಲರಾಮೋ ವಿಜಯತೇ
॥ ಶ್ರೀ ಗುರುರಾಜೋ ವಿಜಯತೇ ॥



ಪ್ರಕಾಶಕರು :
ಶ್ರೀ ಗುರುರಾಜ ಅಸೋಸಿಯೇಷನ್
ನಂ. 53, ಮಾಡಲ್ ಹೌಸ್ ಬೀದಿ, ಬಸವನಗುಡಿ, ಬೆಂಗಳೂರು - 560
ದೂರವಾಣಿ: 2662 5658 / 59